ರಾಮಕೃಷ್ಣ ಮಹಾಸಂಘದ ಕನ್ನಡ ಮಾಸಪತ್ರಿಕೆ




# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

## 'ಸಾಧನೆಗಾಗಿ ಸಹಾಯಕ ಗ್ರಂಥಗಳು'

ವಿಶೇಷ ಸಂಚಿಕೆ

₹ 50

ಜನವರಿ-2016

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ)


ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.
ಎಂ.ಎಲ್.ಹಳ್ಳಿ, ಸಾಗರ ತಾಲೂಕು
ಶಿವಮೊಗ್ಗ ಜಿಲ್ಲೆ
ಫೋನ್: 08183–296516
ಮೊ. 9449921950

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ
ಪ್ರವಾಸಿ ಮಂದಿರ ಹತ್ತಿರ,
ಹೊಸನಗರ–577418 ಶಿವಮೊಗ್ಗ ಜಿಲ್ಲೆ
ಫೋನ್: 08185–221915
ಮೊ. 9449921950




ಮಾನ್ಯ ವಿದ್ಯಾಕಾಂಕ್ಷಿಗಳೇ.

"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸ ಖಂಡಗಳು ಮತ್ತು ಉಕ್ಕಿನಂತಹ ನರಗಳು. ನಾವು ಬಹಳ ಕಾಲ ಅತ್ತಿದ್ದೇವೆ. ಇನ್ನು ಮುಂದೆ ಅಳುವುದು ಬೇಡ. ನಿಮ್ಮ ಕಾಲ ಮೇಲೆ ನೀವು ನಿಂತುಕೊಂಡು ಮನುಷ್ಯರಾಗಿ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣದ ಧರ್ಮ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣ ಸಿದ್ಧಾಂತಗಳು. ಸಮಗ್ರ ಮಾನವ– ನಿರ್ಮಾಣದ ಶಿಕ್ಷಣವೇ ನಮಗಿಂದು ಬೇಕಾಗಿರುವುದು" ಎಂದು ಸ್ವಾಮಿ ವಿವೇಕಾನಂದರು ಬಹಳ ಹಿಂದೆಯೇ ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಸಚ್ಚಾರಿತ್ರ್ಯವುಳ್ಳ ಧೀಮಂತ, ವಿನಯವಂತ, ಸತ್ಪುರುಷರ ನಿರ್ಮಾಣವು ಸುಸಂಸ್ಕೃತ ಹಾಗೂ ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣದ ಮೂಲಕವೇ ಆಗಬೇಕಾಗಿದೆ.

ರಾಜ್ಯದಾದ್ಯಂತ ಬಂದಿರುವ ನೂರಾರು ಮಕ್ಕಳು ಇಲ್ಲಿ ಕಲಿಯುತ್ತಿದ್ದು, ಸಂಸ್ಥೆಯು ಅವರನ್ನು ಅಕ್ಕರೆಯಿಂದ, ಮಮತೆಯಿಂದ, ಪೋಷಿಸಿ ಹೃದಯವರಳಿಸಿ, ಅವರ ಅಂತರಂಗದಲ್ಲಿ ಹುದುಗಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ, ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನಾಗಿ ರೂಪಿಸುತ್ತಿದೆ.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ವಿದ್ಯಾಸಂಸ್ಥೆಗಳು ಮಕ್ಕಳ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುತ್ತಿವೆ. ದೇಶದಾದ್ಯಂತ ಖ್ಯಾತಿ ಹೊತ್ತ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ, ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:–** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :–** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:–** ಎಲ್.ಕೆ.ಜಿ ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಮತ್ತು ಸಿಬಿಎಸ್‌ಸಿ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:–**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ.

5) **ವಸತಿ ಶಾಲೆಗೆ ಪ್ರವೇಶ:–**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ
* ಪ್ರವೇಶ ಪರೀಕ್ಷೆ, ಸಂದರ್ಶನವಿರುತ್ತದೆ
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿರುತ್ತದೆ
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಶಾಲೆಯನ್ನು ಸಂಪರ್ಕಿಸಿ
* ಹೆಚ್ಚಿನ ವಿವರ ಶಾಲೆಯಲ್ಲಿ ಲಭ್ಯ





# ವಿವೇಕಪ್ರಭ



ಜನವರಿ-2016 ಸಂಪುಟ 17 ಸಂಚಿಕೆ 01

# 'ವಿವೇಕಪ್ರಭ' ಪತ್ರಿಕೆಯ ಪೋಷಕರು

| | |
|---|---|
| ಶ್ರೀಮತಿ ಮಾಲಾ ಆಚಾರ್ಯ ಎನ್. | ಮೈಸೂರು |
| ಶ್ರೀ ಮಧುಸೂದನ್ ಎಸ್. | ದಾವಣಗೆರೆ |
| ಡಾ. ಮಂಜುನಾಥ ಎನ್.ಟಿ. | ದಾವಣಗೆರೆ |
| ಕುಮಾರಿ ಬೇಬಿ ಹಂಸಿಕಾ ಎಂ. | ಮೈಸೂರು |
| ಶ್ರೀ ಜಗದೀಶ ಎಸ್. | ಬೆಂಗಳೂರು |
| ಶ್ರೀಮತಿ ರೇಣುಕಾ ರಾಜಶೇಖರ್ | ಬೆಂಗಳೂರು |
| ಶ್ರೀ ಸದಾಶಿವ ಭಟ್ | ಸೋಮವಾರಪೇಟೆ |
| ಶ್ರೀಮತಿ ನಾಗರತ್ನ ಪ್ರಹ್ಲಾದ್ | ಮೈಸೂರು |
| ಶ್ರೀ ಪಟೇಲ್ ಡಿ.ಎಲ್. | ಶಿರಸಿ |
| ಡಾ. ಈಶ್ವರ ಶರ್ಮಾ | ದಾವಣಗೆರೆ |
| ಶ್ರೀ ಸುಮುಖ್ ಆರೂಡ್ ವಿ. | ಬೆಂಗಳೂರು |
| ಶ್ರೀ ಕೃಷ್ಣಮೂರ್ತಿ ಜಿ. | ಬೆಂಗಳೂರು |
| ಶ್ರೀ ವಾಸುದೇವ ಕಿಣಿ | ಜಡಕಲ್ |
| ಶ್ರೀ ವಿಶ್ವನಾಥ ಎಸ್. | ಮೈಸೂರು |
| ಶ್ರೀ ಶಂಕರನಾರಾಯಣ ಎಂ.ಟಿ. | ಮಡಿಕೇರಿ |
| ಶ್ರೀ ಶಿವಲಿಂಗಯ್ಯ ಎಸ್.ಬಿ. | ಬೆಂಗಳೂರು |
| ಶ್ರೀಮತಿ ನಿರುಪಮಾ | ಬೆಂಗಳೂರು |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಗೊರೇಬಾಳ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಬೈಯ್ಯಾಪುರ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಅನ್ವಾರಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಸಂತೇಕೆಲ್ಲೂರು |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಕಾಳಾಪುರ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ತಲೇಖಾನ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಅಂಕುಶದೊಡ್ಡಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಉಪ್ಪಾರ ನಂದಿಹಾಳ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಮದಿಕಿನಾಳ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ದೇವರ ಭೂಪರ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಪೈದೊಡ್ಡಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಕಾಚಾಪೂರ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಮಾರಲದಿನ್ನಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಗೌಡೂರು |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಸರ್ಜಾಪುರ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ರೋಡಲಬಂಡಾ (ತವಗ) |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ನಾಗರಹಾಳ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಕನ್ನಾಳ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಈಚನಾಳ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಮಾವಿನಬಾವಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಆನಾಹೊಸೂರು |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಗುರಗುಂಟ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ನಾಗಲಾಪುರ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಹೊನ್ನಳ್ಳಿ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಬನ್ನಿಗೋಳ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಹೂನೂರು |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಅಮದಿಹಾಳ್ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಮಟ್ಟೂರ |
| ಅಧ್ಯಕ್ಷರು, ಗ್ರಾಮ ಪಂಚಾಯಿತಿ | ಗುಂತಗೋಳ |


**ವ್ಯವಸ್ಥಾಪಕ ಸಂಪಾದಕರು**

*ಸ್ವಾಮಿ ಮುಕ್ತಿದಾನಂದ*

**ಸಂಪಾದಕರು**

*ಸ್ವಾಮಿ ಜ್ಞಾನಯೋಗಾನಂದ*

**ನೆರವು:**

*ಆರ್. ಎಸ್. ಪೂರ್ಣಾನಂದ*

*ಡಾ. ಕೆ. ಎಲ್. ಪ್ರಸನ್ನಾಕ್ಷಿ*

*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**

*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**

*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



**E-mail:**
vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505


**ಮುಖಪುಟ:**

**ಸಾಧನೆಯ ಗ್ರಂಥಗಳು**

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.

– ಸ್ವಾಮಿ ವಿವೇಕಾನಂದ

**ಚಂದಾ ವಿವರ :** ಬಿಡಿ ಪ್ರತಿ: ₹14; ವಾರ್ಷಿಕ: ₹140; ಮೂರು ವರ್ಷ: ₹ 375; ಆಜೀವ (25 ವರ್ಷ): ₹ 3,000; ಪೋಷಕ ಸಹಾಯಧನ: ₹ 5,000 ಅಥವಾ ಹೆಚ್ಚು. ವಿದೇಶಗಳಿಗೆ: (ಏರ್‌ಮೇಲ್) ವಾರ್ಷಿಕ: $20; ಮೂರು ವರ್ಷ: $60; ಆಜೀವ (25 ವರ್ಷ): $300; ಪೋಷಕ ಸಹಾಯಧನ: $600 ಅಥವಾ ಹೆಚ್ಚು.



ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

## ಪ್ರಾರ್ಥನೆ

**ಶ್ರೀವಾಗ್ದೇವಿಗೆ ಶಬ್ದದಿ**
**ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು ।**
**ದ್ಭಾವಿಪ ನಿರ್ಮಳಮೂರ್ತಿಗಿ**
**ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ ॥**

ಎಲ್ಲ ಇಂದ್ರಿಯಗಳ ವಿಷಯಗಳನ್ನು ಶ್ರೋತ್ರೇಂದ್ರಿಯದ ಮೂಲಕ ಶಬ್ದದಿಂದಲೇ ಪ್ರಕಟಗೊಳಿಸಿ ಅನುಭವಕ್ಕೆ ತರುವ, ನಿರ್ಮಲಮೂರ್ತಿಯೂ, ಸಮಸ್ತ ಪ್ರಪಂಚದಿಂದ ವಂದಿಸಲ್ಪಟ್ಟವಳೂ, ಐಶ್ವರ್ಯಸಂಪನ್ನಳೂ ಆದ ವಾಗ್ದೇವಿಗೆ ಶಾಸ್ತ್ರದ ಆರಂಭದಲ್ಲಿ ನಮಸ್ಕರಿಸುವೆನು.

– ಕೇಶಿರಾಜ, *'ಶಬ್ದಮಣಿದರ್ಪಣಂ', ಪ್ರಾರ್ಥನಾಪದ್ಯ*

## ಸೂಕ್ತಿ-ಪ್ರಭ

ಯಾವ ವಿದ್ಯೆಯಿಂದ ದೇವರನ್ನು ತಿಳಿಯುತ್ತೇವೋ ಅದಕ್ಕೆ ಪರಾವಿದ್ಯೆ ಎಂದು ಹೆಸರು. ಉಳಿದವು ಕೇವಲ ಶಾಸ್ತ್ರಗಳು. ಗ್ರಂಥಗಳು ಕೆಲವು ವೇಳೆ ಗ್ರಂಥಿಗಳು ಪರಾವಿದ್ಯೆಗೆ ಕರೆದೊಯ್ದರೆ ಮಾತ್ರ ಅವು ಒಳ್ಳೆಯವು.

–ಶ್ರೀರಾಮಕೃಷ್ಣ

ಪ್ರಪಂಚದ ಶಾಸ್ತ್ರಗಳಲ್ಲೆಲ್ಲಾ ವೇದ ಒಂದೇ, ವೇದಾಧ್ಯಯನವೂ ಓದುವುದೂ ಕೂಡ ಗೌಣ ಎಂದು ಸಾರುವುದು. ನಿಜವಾದ ಅಧ್ಯಯನ, ಯಾವುದರಿಂದ ನಾವು ನಿತ್ಯವಾದುದನ್ನು ತಿಳಿಯುವೆವೊ ಅದು. ಅದು ಓದುವುದೂ ಅಲ್ಲ, ನಂಬಿಕೆಯೂ ಅಲ್ಲ, ಯುಕ್ತಿಯೂ ಅಲ್ಲ, ಅದು ಸಮಾಧಿ.

–ಸ್ವಾಮಿ ವಿವೇಕಾನಂದ

# ಹೊಸ ವರ್ಷದ ಹಾರ್ದಿಕ ಅಭಿನಂದನೆಗಳು – 2016

ಮಾನ್ಯರೇ,

ನಿಮಗೆಲ್ಲರಿಗೂ ನೂತನ ವರ್ಷದ ಹಾರ್ದಿಕ ಶುಭಾಶಯಗಳು.

'ವಿವೇಕಪ್ರಭ' ಪತ್ರಿಕೆಯು ತನ್ನ ೧೬ ವರ್ಷಗಳ ಸೇವೆಯನ್ನು ಸುಸಂಪನ್ನಗೊಳಿಸಿ, ೧೭ನೇ ವರ್ಷಕ್ಕೆ ಪದಾರ್ಪಣ ಮಾಡುತ್ತಿರುವ ಈ ಶುಭಗಳಿಗೆಯಲ್ಲಿ, ಆತ್ಮೀಯ ಚಂದಾದಾರರಾದ ನಿಮಗೆಲ್ಲರಿಗೂ, ನಿಮ್ಮ ಸಹಕಾರ ಮತ್ತು ಪ್ರೋತ್ಸಾಹಗಳಿಗಾಗಿ ಹಾರ್ದಿಕ ಧನ್ಯವಾದಗಳು.

ಈ ಸಂದರ್ಭದಲ್ಲಿ, ನಮಗೆ ಎಲ್ಲ ರೀತಿಯಲ್ಲಿಯೂ ಸಹಕರಿಸುತ್ತಿರುವ ನಮ್ಮ ಸಂಪಾದಕ ಮಂಡಲಿಯ ಸದಸ್ಯರಿಗೆ, ನಮ್ಮೆಲ್ಲ ಲೇಖಕ ಬಳಗಕ್ಕೆ , ಪತ್ರಿಕೆಗೆ ಹೊಸ ಹೊಸ ಚಂದಾದಾರರನ್ನು ನಿಯಮಿತವಾಗಿ ಮಾಡಿಕೊಡುತ್ತಿರುವ ಕರ್ನಾಟಕ ದಾದ್ಯಂತ ಇರುವ ರಾಮಕೃಷ್ಣ ಆಶ್ರಮಗಳಿಗೆ ಮತ್ತು ಇತರ ಚಂದಾಸಂಗ್ರಾಹಕರಿಗೆ, ಕರಡುಪ್ರತಿಯನ್ನು ಪರಿಷ್ಕರಿಸಲು ಸಹಾಯ ಮಾಡುತ್ತಿರುವವರಿಗೆ, ನಮ್ಮೆಲ್ಲ ಜಾಹೀರಾತುದಾರರಿಗೆ, ವಿವೇಕಪ್ರಭ ಪತ್ರಿಕೆಯ ಮುದ್ರಣಕಾರರಾದ ಬೆಂಗಳೂರಿನ 'ಮಯೂರ್ ಗ್ರಾಫಿಕ್ಸ್' ನ ಮಾಲೀಕರಾದ ಶ್ರೀ ಪಾರ್ಥಸಾರಥಿ ಅವರಿಗೆ, ನಮ್ಮ ಕಾರ್ಯಾಲಯದ ಸಿಬ್ಬಂದಿಗೆ ಸಹಕರಿಸುತ್ತಿರುವ ಹಲವಾರು ಸ್ವಯಂಸೇವಕರಿಗೆ, ಪ್ರತಿ ತಿಂಗಳೂ ಪತ್ರಿಕೆಯ ಪ್ರತಿಗಳನ್ನು ರವಾನಿಸುತ್ತಿರುವ ಮೈಸೂರು ಯಾದವಗಿರಿ ಅಂಚೆಕಛೇರಿಯ ಸಿಬ್ಬಂದಿಗೆ ಮತ್ತು 'ವಿವೇಕಪ್ರಭ' ಪತ್ರಿಕೆಯ ಪ್ರಕಟನೆಯಲ್ಲಿ ಹಲವಾರು ರೀತಿಯಲ್ಲಿ ಪರೋಕ್ಷವಾಗಿ ಮತ್ತು ಅಪರೋಕ್ಷವಾಗಿ ಸೇವೆ ಸಲ್ಲಿಸುತ್ತಿರುವ ಎಲ್ಲ ಸ್ನೇಹಿತರಿಗೂ ಈ ಮೂಲಕ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತಿದ್ದೇವೆ.

ಈ ಸಂತಸದ ಸಂದರ್ಭದಲ್ಲಿ, ಪತ್ರಿಕೆಯ ಉತ್ತರೋತ್ತರ ಅಭಿವೃದ್ಧಿಗೆ ಮತ್ತು ಚಂದಾದಾರರ ಹೆಚ್ಚಳಕ್ಕಾಗಿ ಮುಂದೆಯೂ ನಮಗೆ ಸಹಕಾರ ನೀಡಬೇಕೆಂದು ಹಿತೈಷಿ ಓದುಗರಾದ ತಮಗೆಲ್ಲರಿಗೂ ಕೇಳಿಕೊಳ್ಳುತ್ತೇವೆ.

ಭಗವತ್ಸೇವೆಯಲ್ಲಿ ತಮ್ಮ

**ಸ್ವಾಮಿ ಮುಕ್ತಿದಾನಂದ**
ವ್ಯವಸ್ಥಾಪಕ ಸಂಪಾದಕರು

ಸಂಪಾದಕೀಯ

# ದಿವ್ಯಗ್ರಂಥಗಳ ಉಪಯುಕ್ತತೆ

ದೀರ್ಘ ಇತಿಹಾಸವಿರುವ ದೇಶಗಳಲ್ಲಿ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ ಇವುಗಳಿಗೂ ಒಂದು ದೊಡ್ಡ ಪರಂಪರೆ ಇರುತ್ತದೆ. ಭಾರತದಲ್ಲಾದರೋ ಇವುಗಳ ವಿಸ್ತಾರ, ಆಳ ಹಾಗೂ ವೈವಿಧ್ಯತೆಗಳಿಗೆ ಕೊನೆಯೇ ಇಲ್ಲ. ಕೇವಲ ಧಾರ್ಮಿಕ ಸಾಹಿತ್ಯವನ್ನು ತೆಗೆದುಕೊಂಡರೂ ಕೂಡ, ಒಬ್ಬ ವ್ಯಕ್ತಿಯ ಜೀವನದಲ್ಲಿ ಓದಿ ಮುಗಿಸಲಾಗದಷ್ಟು , ಕೇವಲ ಮೇಲ್ನೋಟಕ್ಕೂ ಗಮನಿಸಲಾಗದಷ್ಟು ವಿಸ್ತಾರವಾದ ಗ್ರಂಥರಾಶಿ ಇಲ್ಲಿದೆ; ಒಂದೊಂದು ದರ್ಶನದ ಆಳವನ್ನು ಅಳೆಯಹೊರಟರೆ, ಕೊನೆಯಿಲ್ಲದ ಸೂಕ್ಷ್ಮಾತಿಸೂಕ್ಷ್ಮ ತಾತ್ತ್ವಿಕ ಶೂನ್ಯದಲ್ಲಿ ನೆಲೆಗಾಣದಷ್ಟು ಅಗಾಧತೆ ಇಲ್ಲಿದೆ. ಇತಿಹಾಸದುದ್ದಕ್ಕೂ ನಮ್ಮ ಸಂಸ್ಕೃತಿ ಕಂಡುಕೊಂಡಿರುವ ಜೀವನಾನುಭವ, ಧ್ಯೇಯಾದರ್ಶ, ತಾತ್ತ್ವಿಕ ನಿಲುವು, ಅನುಭವದ ಸತ್ಯಗಳು ಅತ್ಯಂತ ಅಚ್ಚರಿಯ ಭಾವವನ್ನು ಮೂಡಿಸುತ್ತವೆ. ಅನೇಕ ವೇಳೆ ಅಗಾಧತೆ, ವಿಸ್ತಾರ, ಆಳಗಳು ಮೇರೆ ಮೀರಿದರೆ ಗೊತ್ತುಗುರಿಯಿಲ್ಲದ ಗೊಂಡಾರಣ್ಯದಲ್ಲಿ ಅಂಡಲೆಯುವಂತೆ ನಮ್ಮನ್ನು ನಾವು ಕಳೆದುಕೊಳ್ಳುವ ಸಂಭವವಿದೆ; ಅಂಥ ಸಂದರ್ಭದಲ್ಲಿ ನಮ್ಮ ನಮ್ಮ ಆಯ್ಕೆ, ವಿಷಯದ ಪ್ರಸ್ತುತತೆ, ಪ್ರಾಯೋಗಿಕ ಗುರಿ – ಇವನ್ನು ಮತ್ತೆ ಮತ್ತೆ ಗುರುತಿಸಿಕೊಂಡು, ಯಾವ ಗ್ರಂಥಗಳನ್ನು ಎಷ್ಟು ಓದಬೇಕು, ಓದಿದ್ದರಲ್ಲಿ ಎಷ್ಟನ್ನು ಅಧ್ಯಯನ ಮಾಡಬೇಕು; ಜೀವನಕ್ಕೆ ಅತ್ಯುಪಯುಕ್ತವಾದ ಯಾವ ಗ್ರಂಥಗಳನ್ನು ಸದಾ ಬಳಿಯಲ್ಲೇ ಇಟ್ಟುಕೊಳ್ಳಬೇಕು – ಇವನ್ನು ನಿರ್ಧರಿಸಬೇಕು. ಜ್ಞಾನ ಸಾಗರಕ್ಕೆ ಮಿತಿಯಿಲ್ಲ; ಆಳವೂ ಅಗಮ್ಯ. ನಮ್ಮ ಸೀಮಿತ ಜೀವಿತಾವಧಿಯಲ್ಲಿ ನಮ್ಮ ಬೊಗಸೆಗೆ ದಕ್ಕುವ ಜ್ಞಾನವಾರಿಯು ಅತ್ಯುತ್ತಮವೂ, ನಮ್ಮ ಪಿಪಾಸೆಯನ್ನೆಲ್ಲ ಇಂಗಿಸಿ ಹೊಸಬದುಕಿನ ಚೇತನವನ್ನೀಯುವ ಅಮೃತಜಲವೇ ಆಗಬೇಕು. ಪುರಾತನ, ಆಧುನಿಕ ಗ್ರಂಥರಾಶಿಗಳೆಲ್ಲೆಲ್ಲ ಆಧ್ಯಾತ್ಮಿಕ ಸಾಧನೆಗಾಗಿಯೇ ಮೀಸಲಾಗಿಟ್ಟಿರುವ ಅನೇಕ ಗ್ರಂಥಗಳು ನಮ್ಮಲ್ಲಿ ಪ್ರಸಿದ್ಧವಾಗಿವೆ. ಅವುಗಳಲ್ಲಿ ಅತ್ಯಂತ ಜನಪ್ರಿಯವೂ, ಪ್ರಸಿದ್ಧವೂ, ಉಪಯುಕ್ತವೂ ಆದ ಶಾಸ್ತ್ರಗ್ರಂಥಗಳನ್ನು ಮಾತ್ರ ಹಲವು ಬಾರಿ ಓದಿಕೊಂಡರೂ ನಮಗೆ ಆಧ್ಯಾತ್ಮಿಕ ಸಾಧನೆಯನ್ನು ಕುರಿತ ಮೂಲಭೂತ ಭಾವನೆಗಳು ಲಭಿಸುವುವು. ಶ್ರೀರಾಮಕೃಷ್ಣರ ಜೀವನ, ಉಪದೇಶಗಳ ಬೆಳಕಿನಲ್ಲಿ ಈ ಶಾಸ್ತ್ರಗ್ರಂಥಗಳನ್ನು ಅಧ್ಯಯನ ಮಾಡುವ ಒಂದು ಹೊಸ ವಿಧಾನ ಇತ್ತೀಚೆಗೆ ಪ್ರಚಲಿತವಾಗುತ್ತಿದೆ. ಶಾಸ್ತ್ರವು ಹೇಳುವ ಆಧ್ಯಾತ್ಮಿಕ ವಿಚಾರಗಳಿಗೆಲ್ಲ ಅನುಭವವೇ ಆಧಾರವೂ, ಗುರಿಯೂ, ಆದರ್ಶವೂ ಆಗಿದೆ. ಆದ್ದರಿಂದ ಅಂಥ ಅನುಭವಗಳ ಗಣಿಯಾಗಿದ್ದ ಹಲವು ಮಂದಿ ಸಂತ–ಮಹಾತ್ಮರು ಶ್ರೀರಾಮಕೃಷ್ಣ ಪರಂಪರೆಯಲ್ಲಿ ಆಗಿಹೋಗಿದ್ದಾರೆ. ಈ ಮಹಾವ್ಯಕ್ತಿಗಳ ವಾಣಿಯನ್ನು ಆಧರಿಸಿದ ಕೆಲವು ಪ್ರಮುಖ ಗ್ರಂಥಗಳೂ 'ಆಧುನಿಕ ಆಧ್ಯಾತ್ಮಿಕ ಸಾಧನೆಯ ಗ್ರಂಥಗಳು' ಎಂಬ ಕೀರ್ತಿಗೆ ಭಾಜನವಾಗಿವೆ. ಈ ವಿಶೇಷ ಸಂಚಿಕೆಯಲ್ಲಿ ಶಾಸ್ತ್ರಗಳಿಂದ ಹಾಗೂ ಸಂತರ ವಾಣಿಯನ್ನಾಧರಿಸಿದ ಗ್ರಂಥಗಳಲ್ಲಿ ಕೆಲವು ಪ್ರಮುಖ ಕೃತಿಗಳನ್ನು ಪರಿಚಯಿಸುವ ಪ್ರಯತ್ನ ಮಾಡುತ್ತಿದ್ದೇವೆ. ಅತಿ ವಿಸ್ತಾರವಾದೀತೆಂಬ ಭಯದಿಂದ ಇದನ್ನು ಹಿಂದೂಧರ್ಮಕ್ಕೆ ಮಾತ್ರ ಸೀಮಿತಗೊಳಿಸಿದ್ದೇವೆ. ಪ್ರಾಮಾಣಿಕ ಸಾಧಕರಿಗೆ ಇವು ಸಹಾಯವಾಗಬಲ್ಲದೆಂಬ ಭರವಸೆ ನಮ್ಮದು.

ಕೇವಲ ಸಾಧನೆಯನ್ನೇ ಗುರಿಯಾಗಿ ಇಟ್ಟುಕೊಂಡಿರುವ 'ವಿವೇಕ ಚೂಡಾಮಣಿ', 'ನಾರದ ಭಕ್ತಿಸೂತ್ರ', 'ಪಾತಂಜಲ ಯೋಗಸೂತ್ರ,' ಗಳಂತಹ ಗ್ರಂಥಗಳು ಕೆಲವು; ಪ್ರಧಾನ ಗ್ರಂಥದ ಅಂಗವಾಗಿ ಅಲ್ಲಲ್ಲಿ ಸಾಧನೆಯ ವಿಚಾರಗಳು ಬರುವ 'ಯೋಗ ವಾಸಿಷ್ಠ', 'ಭಾಗವತ' ಗಳಂತಹ ಗ್ರಂಥಗಳು ಕೆಲವು. ಇನ್ನು ಸಾರ್ವತ್ರಿಕ ವಿಚಾರಗಳನ್ನು ತಿಳಿಸಿಕೊಡುವ ಆಧ್ಯಾತ್ಮಿಕ ಸಾಧನೆಗೂ, ಸಾಧಾರಣ ಜೀವನಕ್ಕೂ ಅನ್ವಯವಾಗುವ ವಿಶಿಷ್ಟ ತತ್ತ್ವಗಳನ್ನು ನೀಡುವ 'ಭಗವದ್ಗೀತೆ'ಯಂತಹ ದಿವ್ಯಗ್ರಂಥಗಳೂ ಇಲ್ಲಿ ಬರುತ್ತವೆ. ಹಂತಹಂತವಾಗಿ ಸಾಧಕನನ್ನು ಆರಂಭಿಕ ಹಂತದಿಂದ ಮುನ್ನಡೆಸಿ, ಕ್ರಮಬದ್ಧವಾಗಿ ಒಂದೊಂದೇ ಹೆಜ್ಜೆ ಕಲಿಸಿಕೊಟ್ಟು, ಸಾಧನೆಯ ಮಾರ್ಗದಲ್ಲಿ ಅವನನ್ನು ಪರಿಣಿತನನ್ನಾಗಿಸಿ, ಮುಂದೆ ಗುರು ಅಥವಾ ದೈವೀಕೃಪೆಯ ಪ್ರವಾಹದಲ್ಲಿ ತೇಲಿಬಿಡುವ ಈ ಶಾಸ್ತ್ರಗ್ರಂಥಗಳು ನಿಜವಾದ ಅರ್ಥದಲ್ಲಿ ಅಂಬಿಗನ ಪಾತ್ರವನ್ನು

ವಹಿಸುತ್ತವೆ. ಸಂಸಾರವೆಂಬ ನದಿಯನ್ನು ದಾಟಲಾಗದೆ ಒದ್ದಾಡುವ ಜೀವಿಯು ತುಂಬುಪ್ರವಾಹವನ್ನು ಕಂಡು, 'ಅಯ್ಯೋ!' ಎಂದು ಉದ್ಗರಿಸುತ್ತಾನೆ. ಆಗ ಮೂಡಿಬಂದ ಅಂಬಿಗನು, 'ಭಯಪಡಬೇಡ, ನನ್ನ ದೋಣಿಯನ್ನೇರು; ದಡ ಸೇರಿಸುತ್ತೇನೆ' ಎಂದು ಭರವಸೆ ನೀಡುತ್ತಾನೆ. ಸೆಳೆ, ಪ್ರವಾಹ, ಸುಳಿ, ಬಿರುಗಾಳಿ ಏನಿದ್ದರೂ ಯಾತ್ರಿಕನನ್ನು ದಡಸೇರಿಸುವುದು ಅಂಬಿಗನ ಜವಾಬ್ದಾರಿ. ಅಂತೆಯೇ ಶಾಸ್ತ್ರಗಳು ನಿರೂಪಿಸುವ ಸಾಧನಾಕ್ರಮವು ಇನ್ನೊಂದು ದಡದಲ್ಲಿ ಕಾದಿರುವ ಭಗವಂತನ ಬಳಿಗೆ ಜೀವಿಯನ್ನು ಕರೆದೊಯ್ಯುವುದು ಮಾತ್ರ.

ಭಗವಂತನ ವಾಣಿ ಹಾಗೂ ಭಗವಂತ ಎರಡೂ ಒಂದೇ ಎನ್ನುತ್ತಾರೆ. ಒಬ್ಬನ ಮಾತಿಗೂ ಅವನ ವ್ಯಕ್ತಿತ್ವಕ್ಕೂ ಯಾವುದೇ ವ್ಯತ್ಯಾಸವಿಲ್ಲ. ಅದೇ ರೀತಿ, ಭಗವಂತನ ಮಾತಿನ ಎಳೆಯನ್ನು ಹಿಡಿದುಕೊಂಡು ಅವನನ್ನೇ ಸೇರಬಹುದು ಎನ್ನುತ್ತಾರೆ. ಶ್ರೀರಾಮಕೃಷ್ಣರು ಹೇಳುವಂತೆ, 'ಭಾಗವತ, ಭಕ್ತ, ಭಗವಾನ್– ಮೂವರೂ ಒಂದೇ.' ಅಂತಿಮವಾಗಿ ಜೀವಾತ್ಮ – ಪರಮಾತ್ಮ ಎರಡೂ ಒಂದೇ; ಅದರ ನಡುವೆ ಭಗವಂತನ ಮಾತು ಬರುತ್ತದೆ; ಅದು ಜೀವಾತ್ಮ–ಪರಮಾತ್ಮ ಎರಡರ ಭೇದವನ್ನು ಅಳಿಸಿಹಾಕುತ್ತದೆ. ಆದ್ದರಿಂದ ಅದೂ ದಿವ್ಯವೇ; ಭಗವಂತನಿಂದ ಹೊರಹೊಮ್ಮಿದ್ದರಿಂದ ಗುರುವಿನ ಪಾತ್ರವನ್ನು ವಹಿಸಿದಂತಾಯಿತು. ಹೀಗೆ ಶಾಸ್ತ್ರಗ್ರಂಥಗಳು ಕೇವಲ ಗ್ರಂಥವಾಗಿ ಉಳಿಯದೆ, ಭಕ್ತ ಮತ್ತು ಭಗವಂತನ ನಡುವಿನ ಮಧ್ಯವರ್ತಿಯಾಗಿ ಮಹತ್ವದ ಪಾತ್ರ ವಹಿಸುತ್ತದೆ.

ಅನೇಕ ಮಂದಿ ಸಾಧು–ಸಂತರು ಯಾವಾಗಲೂ ತಮ್ಮ ಬಳಿ ದಿವ್ಯಗ್ರಂಥಗಳನ್ನು ಇಟ್ಟುಕೊಂಡಿದ್ದರು ಎಂಬುದಾಗಿ ನಮಗೆ ಹಲವು ನಿದರ್ಶನಗಳಿಂದ ತಿಳಿದುಬರುತ್ತದೆ. ಶ್ರೀರಾಮಕೃಷ್ಣರ ಬಳಿ ಯಾವಾಗಲೂ 'ಅಷ್ಟಾವಕ್ರ ಗೀತೆ', 'ಅಧ್ಯಾತ್ಮರಾಮಾಯಣ' ಗಳಿರುತ್ತಿದ್ದವು. ಸ್ವಾಮಿ ವಿವೇಕಾನಂದರು ತಮ್ಮ ಪರಿವ್ರಾಜಕ ದಿನಗಳಲ್ಲಿ ಗೀತೆ ಹಾಗೂ Imitation of Christ ಪುಸ್ತಕಗಳನ್ನು ಒಯ್ಯುತ್ತಿದ್ದರು. ಅನೇಕ ಮಂದಿ ವಿರಕ್ತ ಸಂನ್ಯಾಸಿಗಳು ತಮ್ಮೊಂದಿಗೆ ಗೀತೆ, ಉಪನಿಷತ್ ಅಥವಾ ಯಾವುದಾದರೊಂದು ತಮಗೆ ಪ್ರಿಯವಾದ ದಿವ್ಯಗ್ರಂಥವನ್ನು ಇಟ್ಟುಕೊಂಡಿರುತ್ತಾರೆ. ಪ್ರತಿನಿತ್ಯವೂ ಅದನ್ನೋದುವ, ಮನನ ಮಾಡುವ ಪರಿಪಾಠವನ್ನಿಟ್ಟುಕೊಂಡಿರುತ್ತಾರೆ. ಹೆಚ್ಚಾಗಿ ಈ ಕೃತಿಗಳು ಆಧ್ಯಾತ್ಮಿಕ ಸಾಧನೆಗೆ ಸಂಬಂಧಪಟ್ಟಿರುವ ಶ್ರೇಷ್ಠ ಕೃತಿಗಳೇ ಆಗಿರುತ್ತವೆ. 'ಸ್ವಾಧ್ಯಾಯ'ವೂ ಸಾಧನೆಯ ಒಂದು ಅಂಗವಾಗಿದೆ; ಅಧ್ಯಯನ ಮಾಡುವ ಗ್ರಂಥದ ವಿಷಯವೂ ಸಾಧನೆ – ಹೀಗೆ ಪರಸ್ಪರ ಪೂರಕವಾಗಿದ್ದುಕೊಂಡು, ಸಾಧಕನನ್ನು ನಿರಂತರ ಉನ್ನತ ಭಾವದಲ್ಲಿಡಲು ಸಹಾಯಕವಾಗುತ್ತವೆ.

ಆಧುನಿಕ ಯುಗದಲ್ಲೂ ಪ್ರಾಚೀನ ಕೃತಿಗಳ ಮಹತ್ವ ಕಡಿಮೆಯಾಗಿಲ್ಲ. ತಾಳೆಗರಿ, ಭೂರ್ಜಪತ್ರಗಳಲ್ಲಿ ಗ್ರಂಥಸಂರಕ್ಷಣೆ ಮಾಡುತ್ತಿದ್ದ ಕಾಲವೊಂದಿತ್ತು. 'ಸೂತ್ರ'ರೂಪದ ಸಾಧನೆಯ ಗ್ರಂಥಗಳನ್ನು ಸಂಪೂರ್ಣ ಕಂಠಪಾಠ ಮಾಡಿ ನೆನಪಿನಲ್ಲಿಡುವ ಸಂಪ್ರದಾಯ ಅತ್ಯಂತ ಪ್ರಾಚೀನ; ಈಗಲೂ ಈ ಪರಿಪಾಠವಿದೆ. ಆಧ್ಯಾತ್ಮಿಕ ಜೀವನದಲ್ಲಿ ಇದು ಅತ್ಯಂತ ಉಪಯುಕ್ತವಾದ ವಿಧಾನವಾಗಿದೆ. ಆದರೂ ಗ್ರಂಥರೂಪದಲ್ಲಿ ಉಪಲಬ್ಧವಿರುವ ಕೃತಿಯು ಆರಂಭಿಕ ಹಂತದಲ್ಲೂ, ಮುಂದಿನ ಹಂತಗಳಲ್ಲೂ ಸಾಧಕನಿಗೆ ಸಹಾಯ ಮಾಡುತ್ತದೆ. ಎಲ್ಲಿ ಗ್ರಂಥವು ಕೇವಲ 'ಗ್ರಂಥಿ'ಯಾಗುತ್ತದೋ, ಅಂದರೆ ಸಹಾಯಕವಾಗುವ ಬದಲು 'ಬಂಧನ'ವಾಗುತ್ತದೋ, ಆಗ ಅದರಿಂದ ಬಿಡಿಸಿಕೊಳ್ಳಬೇಕು ಎನ್ನುತ್ತಾರೆ ಶ್ರೀರಾಮಕೃಷ್ಣರು. ಗ್ರಂಥಕ್ಕೂ ಮಿತಿಯಿದೆ, ಅದೇ ಸರ್ವಸ್ವವಲ್ಲ; ಅದು ಮಾಹಿತಿ ನೀಡುವ, ದಾರಿ ತೋರಿಸುವ ಸೂಚಕ ಮಾತ್ರ; ಈ ಮಿತಿಯನ್ನು ಮೀರಿ ಅದಕ್ಕೆ ಮಹತ್ವ ನೀಡಿದರೆ ಅದರಿಂದಾಗುವ ಅನಾಹುತ ಅತ್ಯಂತ ಭಯನಕವಾದದ್ದು. ಧರ್ಮಗ್ರಂಥಗಳು ದಿವ್ಯತೆಯತ್ತ ದಾರಿ ತೋರಿಸುವುದಕ್ಕಾಗಿಯೇ ಇವೆ; ಆದರೆ ಮತಾಂಧತೆ, ಅಜ್ಞಾನ ಹಾಗೂ ಪೂರ್ವಾಗ್ರಹಗಳಿಂದ ಅದೇ ಗ್ರಂಥಗಳು ವಿನಾಶಕಾರಿಯಾಗಿ ಪರಿಣಮಿಸಿದ ಉದಾಹರಣೆಗಳೂ ನಮ್ಮಲ್ಲಿವೆ. ಆದರೆ ಇವು ಗ್ರಂಥಗಳ ಮಹತ್ವವನ್ನು ಕುಗ್ಗಿಸಲಾರವು. ಅಂಥ ದಿವ್ಯ ಬದುಕನ್ನು ನಡೆಸದಿದ್ದರೆ, ಅಷ್ಟು ಉನ್ನತವಾದ ಗ್ರಂಥಗಳನ್ನೇ ಹೀನಕೃತ್ಯಗಳಿಗೆ ಅಸ್ತ್ರವಾಗಿ ಬಳಸಿಕೊಂಡರೆ, ಅದಕ್ಕೆ ಮಾನವನ ನೀಚಪ್ರವೃತ್ತಿಯೇ ಕಾರಣವಲ್ಲವೆ? ದೈವೀವಾಣಿಯ ದಾಖಲಾತಿಯು ಮಾನವನ ಬದುಕಿಗೆ ದೊಡ್ಡ ಒಂದು ವರದಾನ. ಸಮಾಜಕ್ಕೆ, ರಾಜ್ಯ–ದೇಶ–ವಿಶ್ವಕ್ಕೆ ಅದು ನೀಡುವ ಬೆಳಕು ಅತ್ಯಂತ ಅಮೂಲ್ಯವಾದದ್ದು. ಶಾಂತಿ, ಸೌಹಾರ್ದ, ಸಹಬಾಳ್ವೆ, ಶ್ರದ್ಧೆ, ಭಕ್ತಿ , ಶರಣಾಗತಿ, ಸಾಕ್ಷಾತ್ಕಾರ, ಸತ್ಯಸಂಧತೆ, ಜ್ಞಾನೋಪಾಸನೆ, ಸಾಂಸ್ಕೃತಿಕ ಸಮೃದ್ಧಿ, ಪರಿಪೂರ್ಣ ಮಾನವತೆ – ಇಂಥ ಉನ್ನತ ಆದರ್ಶಗಳನ್ನೆಲ್ಲ ನಾವು ಆಧ್ಯಾತ್ಮಿಕ ಗ್ರಂಥಗಳಲ್ಲಿ ಕಾಣುತ್ತೇವೆ; ಸಂಘರ್ಷ ಹಾಗೂ ಕಲಹಗಳಿಗೆ ಪ್ರೇರಕವಾದ ಅಪಕ್ವ ವಿಚಾರಧಾರೆಗಳನ್ನಲ್ಲ. ತಾಳೆಗ್ರಂಥವಿರಲಿ, ಪುಸ್ತಕರೂಪದಲ್ಲಿರಲಿ, ಇಂದಿನ ಡಿಜಿಟಲ್ ಯುಗದ ನಾನಾ ಬಗೆಯ ಯಂತ್ರೀಕೃತ ಪುಸ್ತಕಗಳ (ಇ–ಬುಕ್) ಅಥವಾ 'ಶಾವ್ಯ' (ಕೇಳುವ) ರೂಪದಲ್ಲಿರಲಿ, ಅವುಗಳನ್ನು ಅರಿತುಕೊಳ್ಳಲು ನಮಗೆ ಕೆಲವು ಅರ್ಹತೆಗಳು ಇರಬೇಕು: ೧) ಅರಿತುಕೊಳ್ಳಲು ಅಗತ್ಯವಾದ ತೆರೆದ ಹೃದಯ ೨) ಕೃತಿಯ ಅಂತರಂಗವನ್ನು ಕಾಣಬಲ್ಲ ಬುದ್ಧಿಶಕ್ತಿ ಹಾಗೂ ಪ್ರಯತ್ನ ೩) ಅವುಗಳ ಮೇಲೆ ವಿಶೇಷ ಭಕ್ತಿ, ಗೌರವ ೪) ಅವುಗಳನ್ನು ಜೀವನದಲ್ಲಿ ಅಳವಡಿಸಿ, ನಮ್ಮ ಬದುಕನ್ನು ಉನ್ನತ ನೆಲೆಗೆ ಕೊಂಡೊಯ್ಯಬಲ್ಲ ಪ್ರಾಯೋಗಿಕ ಮನಸ್ಸು.

ಈ ಎಲ್ಲ ಸಿದ್ಧತೆಗಳೊಂದಿಗೆ ಗ್ರಂಥಾರಾಧನೆ ನಡೆಸಿದಲ್ಲಿ, ಗ್ರಂಥ ನಮ್ಮನ್ನು ದಿವ್ಯನೆಲೆಯ ಧಾಮಕ್ಕೆ ಕೊಂಡೊಯ್ಯುವುದರಲ್ಲಿ ಸಂದೇಹವಿಲ್ಲ. ಆಗ ಅದು ನಮ್ಮನ್ನು ಸಲಹುವ 'ಮಾತೆ'ಯಾಗುತ್ತದೆ; ಗುರುತರ ಜವಾಬ್ದಾರಿಯಿಂದ ನಮ್ಮನ್ನು ಭಗವಂತನೆಡೆಗೆ ಕರೆದೊಯ್ಯುವ 'ಗುರು'ವಾಗುತ್ತದೆ.






# ಆಧ್ಯಾತ್ಮಿಕ ಗ್ರಂಥಗಳು ಮತ್ತು ಅಧ್ಯಾತ್ಮ

(ಸಂಕಲನ)

## ಸ್ವಾಮಿ ವಿವೇಕಾನಂದ

**ಪ್ರ**ಪಂಚದ ವಿವಿಧ ಧರ್ಮಗಳನ್ನು ನಾವು ವಿಶ್ಲೇಷಣೆ ಮಾಡಿದರೆ, ಅವನ್ನು ಎರಡು ವಿಧವಾಗಿ ವಿಂಗಡಿಸಬಹುದು: ಒಂದು ಧರ್ಮಗ್ರಂಥಗಳನ್ನುಳ್ಳದ್ದು, ಮತ್ತೊಂದು ಇಲ್ಲದೆ ಇರುವುದು. ಯಾವುದಕ್ಕೆ ಧರ್ಮಗ್ರಂಥವಿರುವುದೋ ಅದೇ ಅತ್ಯಂತ ಶಕ್ತಿಯುತವಾದದ್ದು ಮತ್ತು ಅದೇ ಹೆಚ್ಚು ಅನುಯಾಯಿಗಳನ್ನು ಹೊಂದಿರುವುದು. ಧರ್ಮಗ್ರಂಥಗಳು ಇಲ್ಲದೆ ಇರುವ ಧರ್ಮಗಳು ಬಹುಪಾಲು ಅಳಿದುಹೋಗಿವೆ. ಅವುಗಳಲ್ಲಿ ಹೊಸದಾಗಿರುವ ಕೆಲವಕ್ಕೆ ಇರುವ ಅನುಯಾಯಿಗಳು ಬಹಳ ಕಡಿಮೆ. ಆದರೂ ಇವೆಲ್ಲದರಲ್ಲಿಯೂ ನಮಗೆ ಒಂದು ಏಕಾಭಿಪ್ರಾಯ ಕಂಡುಬರುತ್ತದೆ. ಅದಾವುದೆಂದರೆ ಅವುಗಳು ಬೋಧಿಸುವ ಸತ್ಯಗಳು ನಿರ್ದಿಷ್ಟ ವ್ಯಕ್ತಿಗಳಿಗಾದ ಅನುಭವಗಳ ಫಲ – ಎಂಬುದು.. ಶಾಸ್ತ್ರದಲ್ಲಿ ಬರುವ ಋಷಿಗಳು ಕೆಲವು ಸತ್ಯಗಳನ್ನು ತಾವು ಅನುಭವಿಸಿದೆವೆಂದು ಸಾರಿದರು ಮತ್ತು ಇವುಗಳನ್ನು ಜನರಿಗೆ ಬೋಧಿಸಿದರು. ಆದುದರಿಂದ ಪ್ರಪಂಚದ ಧರ್ಮಗಳೆಲ್ಲವೂ ಪ್ರತ್ಯಕ್ಷ ಅನುಭವವೆಂದು ಸರ್ವೇಸಾಮಾನ್ಯವಾದ ಮತ್ತು ವಜ್ರೋಪಮವಾದ ತಳಹದಿಯ ಮೇಲೆ ನಿಂತಿವೆ ಎನ್ನುವುದು ಸ್ಪಷ್ಟವಾಗಿದೆ.

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೨, ಪು.೩೧೨)*

* * *

ಶಾಸ್ತ್ರ ಎಂಬ ಶಬ್ದಕ್ಕೆ ಅನಾದಿಯೂ ಅನಂತವೂ ಆದ ವೇದಗಳು ಎಂದು ಅರ್ಥ. ಧಾರ್ಮಿಕ ಕರ್ತವ್ಯಗಳ ವಿಷಯದಲ್ಲಿ ವೇದಗಳೇ ಪ್ರಮಾಣ. ಪುರಾಣಾದಿ ಇತರ ಧಾರ್ಮಿಕ ಗ್ರಂಥಗಳನ್ನು ಸ್ಮೃತಿ ಎಂದು ಕರೆಯುತ್ತಾರೆ. ಸ್ಮೃತಿಯು ಎಲ್ಲಿಯವರೆಗೆ ವೇದಗಳಿಗೆ ವಿರೋಧವಾಗದೆ ಅವನ್ನು ಅನುಸರಿಸುವುದೋ ಅಲ್ಲಿಯವರೆಗೆ ಮಾತ್ರ ಅದು ಪ್ರಮಾಣ.

ಸತ್ಯದಲ್ಲಿ ಎರಡು ವಿಧಗಳುಂಟು. ಒಂದನೆಯದು ಮಾನವನ ಸಾಧಾರಣ ಇಂದ್ರಿಯಗಳಿಗೆ ಗ್ರಾಹ್ಯವಾದುದು ಮತ್ತು ಇಂದ್ರಿಯ ಜ್ಞಾನವನ್ನು ಆಧರಿಸಿದ ತರ್ಕವನ್ನು ಅವಲಂಬಿಸಿದುದು. ಎರಡನೆಯದು ಸೂಕ್ಷ್ಮವಾದ ಯೋಗಶಕ್ತಿಯಿಂದ ಗ್ರಾಹ್ಯವಾದುದು. ಒಂದನೆಯದರ ಸಹಾಯದಿಂದ ಸಂಗ್ರಹಿಸಲಾದ ಜ್ಞಾನವನ್ನು ವಿಜ್ಞಾನ ಎಂದು ಕರೆಯುತ್ತೇವೆ. ಎರಡನೆಯದರ ಸಹಾಯದಿಂದ ವೇದ್ಯವಾದ ಜ್ಞಾನವನ್ನು ವೇದಗಳು ಎಂದು ಕರೆಯುತ್ತೇವೆ. ವೇದಗಳೆಂದು ಕರೆಯಲ್ಪಡುವ, ಅನಾದಿಯೂ ಅನಂತವೂ ಆದ ಇಂದ್ರಿಯಾತೀತ ಸತ್ಯಗಳು ಅನವರತವೂ ಅಸ್ತಿತ್ವದಲ್ಲಿದೆ. ಈ ಸತ್ಯಗಳ ಸಹಾಯದಿಂದಲೇ ಸ್ವಯಂ ಸೃಷ್ಟಿಕರ್ತನು ಜಗತ್ತಿನ ಸೃಷ್ಟಿ, ಸ್ಥಿತಿ, ಪ್ರಳಯ ಕಾರ್ಯಗಳನ್ನು ನಡೆಸುತ್ತಿದ್ದಾನೆ. ಈ ಅತೀಂದ್ರಿಯ ಶಕ್ತಿ ಯಾವ ವ್ಯಕ್ತಿಯಲ್ಲಿ ಅಭಿವ್ಯಕ್ತವಾಗುವುದೋ ಅವನಿಗೆ ಋಷಿ ಎಂದು ಹೆಸರು; ಮತ್ತು ಈ ಶಕ್ತಿಯ ಸಹಾಯದಿಂದ ಅವನು ಯಾವ ಅಲೌಕಿಕ ಸತ್ಯಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವನೋ ಆ ಸತ್ಯಗಳಿಗೆ ವೇದಗಳು ಎಂದು ಹೆಸರು.

ಈ ಋಷಿತ್ವವೇ, ವೇದಗಳ ಇಂದ್ರಿಯಾತೀತ ಜ್ಞಾನಶಕ್ತಿಯೇ ನಿಜವಾದ ಧರ್ಮ. ಸಾಧಕನ ಜೀವನದಲ್ಲಿ ಇದು ಎಲ್ಲಿಯವರೆಗೆ ವ್ಯಕ್ತವಾಗುವುದಿಲ್ಲವೋ, ಎಲ್ಲಿಯವರೆಗೆ ಅವನಿಗೆ ಧರ್ಮ ಎಂಬುದು ಕೇವಲ ಪೊಳ್ಳು ಮಾತಾಗಿರುತ್ತದೆಯೋ, ಅಲ್ಲಿಯವರೆಗೆ ಧರ್ಮ ರಾಜ್ಯದ ಮೊದಲ ಮೆಟ್ಟಲಿನ ಮೇಲೆಯೂ ಕೂಡ ಆತನು ಕಾಲಿಟ್ಟಿಲ್ಲ ಎಂದು ಹೇಳಬಹುದು.

ವೇದಪ್ರಾಮಾಣ್ಯವು ಎಲ್ಲ ದೇಶ, ಕಾಲ, ವ್ಯಕ್ತಿಗಳಿಗೂ ಅನ್ವಯಿಸುತ್ತದೆ. ಅಂದರೆ ಅವುಗಳು ಯಾವುದೇ ಪ್ರತ್ಯೇಕ ದೇಶ, ಕಾಲ, ಅಥವಾ ವ್ಯಕ್ತಿಗೆ ಸೀಮಿತವಾದುವಲ್ಲ.

ವಿಶ್ವಧರ್ಮದ ಏಕೈಕ ವ್ಯಾಖ್ಯಾನವೆಂದರೆ ವೇದಗಳು.

ಇಂದ್ರಿಯಾತೀತ ಸತ್ಯಗಳ ದರ್ಶನವು ಪುರಾಣ, ಇತಿಹಾಸ ಮತ್ತು ಇತರ ಜನಾಂಗಗಳ ಧಾರ್ಮಿಕ ಗ್ರಂಥಗಳಲ್ಲಿ ಸ್ವಲ್ಪ ಮಟ್ಟಿಗೆ ಉಕ್ತವಾಗಿದ್ದರೂ, ವೇದಗಳೇ ಎಲ್ಲಕ್ಕಿಂತಲೂ ಪುರಾತನವೂ,

ಪೂರ್ಣವೂ, ಆಧ್ಯಾತ್ಮಿಕ ಸತ್ಯಗಳನ್ನು ಯಾವ ವಿಧದ ವಿಕಾರಗಳಿಗೂ ಒಳಪಡಿಸದೇ ನಿರೂಪಿಸುವಂಥವೂ ಆಗಿವೆ. ಆದುದರಿಂದ ಎಲ್ಲ ಶಾಸ್ತ್ರಗ್ರಂಥಗಳ ಅಗ್ರಸ್ಥಾನದಲ್ಲಿರಲು ಅರ್ಹವಾಗಿದೆ. ಮತ್ತು ಜಗತ್ತಿನ ಎಲ್ಲ ರಾಷ್ಟ್ರಗಳ ಗೌರವವನ್ನು ಸೆಳೆದುಕೊಂಡಿವೆ; ಆ ಎಲ್ಲ ದೇಶಗಳ ಶಾಸ್ತ್ರಗಳಿಗೂ ಯುಕ್ತಿಯ ತಳಹದಿಯನ್ನು ಒದಗಿಸಿದೆ.

ಆರ್ಯ ಜನಾಂಗದವರಿಗೆ ಗೋಚರಿಸಿದ ವೇದಗಳ ವಿಷಯದಲ್ಲಿ ತಿಳಿದುಕೊಳ್ಳಬೇಕಾದ ಅಂಶ ಒಂದುಂಟು. ಕೇವಲ ಲೌಕಿಕ ವಿಷಯಗಳಿಗೆ ಸಂಬಂಧಿಸಿದ, ಕೇವಲ ಸಂಪ್ರದಾಯ ಅಥವಾ ಇತಿಹಾಸಕ್ಕೆ ಸಂಬಂಧಿಸಿದ, ಮತ್ತು ಕೇವಲ ಕರ್ತವ್ಯಕ್ಕೆ ಮಾತ್ರ ಪ್ರೇರಣೆಯನ್ನು ನೀಡುವ ಭಾಗಗಳನ್ನು ಬಿಟ್ಟು ಉಳಿದವು ಮಾತ್ರ ನಿಜವಾದ ಅರ್ಥದಲ್ಲಿ ವೇದಗಳು.

ಈ ವೇದರಾಶಿಯು ಜ್ಞಾನಕಾಂಡ, ಕರ್ಮಕಾಂಡಗಳೆಂದು ಎರಡು ಭಾಗಗಳಾಗಿವೆ. ಕರ್ಮಕಾಂಡದಲ್ಲಿರುವ ಕ್ರಿಯೆ ಮತ್ತು ಅದರಿಂದ ಹುಟ್ಟುವ ಫಲಗಳು ಮಾಯಾ ಜಗತ್ತಿಗೆ ಸೀಮಿತವಾಗಿವೆ. ಅವು ದೇಶ ಕಾಲ ಪಾತ್ರಾದಿ ನಿಯಮಾಧೀನವಾಗಿ ಹಿಂದೆ ಪರಿವರ್ತನೆ ಹೊಂದಿದವು; ಇಂದೂ ಹೊಂದುತ್ತಿವೆ; ಮುಂದೆಯೂ ಹೊಂದುವುವು.

ಸಾಮಾಜಿಕ ರೀತಿನೀತಿಗಳೂ ಕೂಡ ಈ ಕರ್ಮಕಾಂಡದ ಮೇಲೆಯೇ ನಿಂತಿರುವುದರಿಂದ ಅವು ಕಾಲಕಾಲಕ್ಕೆ ಪರಿವರ್ತನೆ ಹೊಂದುತ್ತಲೇ ಇರುವುವು; ಹೊಂದಲೇಬೇಕು. ಸತ್ ಶಾಸ್ತ್ರದ ಮತ್ತು ಸದಾಚಾರಗಳಿಗೆ ಮತ್ತು ಸಂತರ ಜೀವನಾದರ್ಶಗಳಿಗೆ ಅವಿರೋಧವಾಗಿರುವ ಲೋಕಾಚಾರಗಳೂ ಮಾತ್ರ ಆಯಾಕಾಲದಲ್ಲಿ ಸ್ವೀಕೃತವಾಗುತ್ತಿರುವುವು.. ಶಾಸ್ತ್ರದ ಮೂಲೋದ್ದೇಶಗಳಿಗೂ, ಸಂತರ ನಡೆನುಡಿಗಳಿಗೂ ವಿರೋಧವಾದ ಆಚರಣೆಗಳ ಅಂಧಾನುಕರಣೆಯೇ ಆರ್ಯರ ಅಧಃಪತನಕ್ಕೆ ಬಹು ಮುಖ್ಯವಾದ ಕಾರಣವಾಯಿತು.

ಜ್ಞಾನಕಾಂಡ ಅಥವಾ ವೇದಾಂತ ಮಾತ್ರವೇ ಸರ್ವಕಾಲಗಳಲ್ಲೂ ಮಾನ್ಯತೆಯನ್ನು ಪಡೆದಿದೆ. ಏಕೆಂದರೆ ಅದು ಮಾತ್ರವೇ ಯೋಗ, ಭಕ್ತಿ, ಜ್ಞಾನ, ಕರ್ಮ ಇವುಗಳ ಅಭ್ಯಾಸದ ಮೂಲಕ ಜನರನ್ನು ಮಾಯೆಯಿಂದ ಪಾರುಮಾಡಿ ಅವರಿಗೆ ಮುಕ್ತಿಯನ್ನು ದೊರಕಿಸಿಕೊಡುತ್ತದೆ. ವೇದಾಂತದ ಪ್ರಾಮಾಣ್ಯವು ಕಾಲ, ದೇಶ, ಪಾತ್ರಗಳ ಮಿತಿಗೆ ಒಳಪಡದೆ ಇರುವುದರಿದ ಅದು ಸಮಸ್ತ ಮಾನವತೆಗೂ ಶಾಶ್ವತ ವಿಶ್ವಧರ್ಮವನ್ನು ಬೋಧಿಸುವ ಏಕೈಕ ಶಾಸ್ತ್ರವಾಗಿ ಉಳಿದಿದೆ.

ಮನು ಮುಂತಾದವರ ಸಂಹಿತೆಗಳು ಕರ್ಮಕಾಂಡವನ್ನು ಅನುಸರಿಸಿ ದೇಶ, ಕಾಲ, ಪಾತ್ರ ಭೇದಗಳಿಗನುಸಾರವಾಗಿ ಸಮಾಜ ಕಲ್ಯಾಣಕರಗಳಾದ ಕಟ್ಟುಕಟ್ಟಳೆಗಳನ್ನು ರಚಿಸಿದವು. ಪುರಾಣಾದಿಗಳು ವೇದಾಂತ ತತ್ತ್ವಗಳನ್ನು ತೆಗೆದುಕೊಂಡು ಅವತಾರಾದಿ ಮಹಾಪುರುಷರ ಜೀವನಚರಿತ್ರೆಗಳ ವರ್ಣನೆಯ ಮೂಲಕ ಆ ತತ್ತ್ವಗಳನ್ನು ಕುರಿತು ವಿಸ್ತಾರವಾಗಿ ವ್ಯಾಖ್ಯಾನ ಮಾಡಿರುವುವು. ಅನಂತ ಕಲ್ಯಾಣ ಗುಣಗಳ ಪ್ರಭುವಾದ ಭಗವಂತನ ಅಗಣಿತ ಭಾವಗಳಲ್ಲಿ ಅಲ್ಪಸ್ವಲ್ಪವನ್ನು ಮಾತ್ರ ಪ್ರಧಾನವಾಗಿಟ್ಟುಕೊಂಡು ಅವು ಆ ಗುಣಗಳನ್ನು ಜನತೆಗೆ ಬೋಧಿಸಿವೆ.

ಆದರೆ ಕಾಲವಶದಿಂದ ಸದಾಚಾರಭ್ರಷ್ಟರೂ ವೈರಾಗ್ಯವಿಹೀನರೂ ಏಕಮಾತ್ರ ಲೋಕಾಚಾರನಿಷ್ಟರೂ ಕ್ಷೀಣಬುದ್ಧಿಯುತರೂ ಆದ ಆರ್ಯಸಂತಾನರು ವೇದಾಂತದ ಗಹನ ತತ್ತ್ವಗಳನ್ನು ಅಲ್ಪಮತಿಗಳಿಗಾಗಿ ಸ್ಥೂಲ ಭಾಷೆಯಲ್ಲಿ ವಿವರಿಸುವ ಮತ್ತು ಆಧ್ಯಾತ್ಮಿಕ ಆದರ್ಶಕ್ಕೆ ಸಂಬಂಧಿಸಿದ ವಿಶೇಷಾಂಶಗಳಿಗೆ ಮಾತ್ರ ಪ್ರಾಧಾನ್ಯ ನಿಡುವುದರಿಂದ ಮೆಲುನೋಟಕ್ಕೆ ಪರಸ್ಪರ ವಿರೋಧಿಗಳೆಂದು ಕಂಡುಬರುವ ಪುರಾಣಾದಿಗಳ ನಿಜವಾದ ಭಾವವನ್ನು ಗ್ರಹಿಸಲು ಅಸಮರ್ಥರಾದರು. ಇದರ ಪರಿಣಾಮವಾಗಿ ವೇದಗಳ ಸನಾತನ ಧರ್ಮವನ್ನು ಛಿದ್ರಛಿದ್ರಗೊಳಿಸಿ ಸುಂದರ ಧರ್ಮಭೂಮಿಯಾದ ಭಾರತವನ್ನು ಗೊಂದಲಗಳ ರಾಶಿಯನ್ನಾಗಿ ಪರಿವರ್ತಿಸಿದರು; ಎಲ್ಲ ಆಧ್ಯಾತ್ಮಿಕ ಆದರ್ಶಗಳ ಸಮನ್ವಯ ಸ್ಥಾನವಾದ ಭಾರತವನ್ನು, ಮತೀಯ ದ್ವೇಷ ಮತ್ತು ಅಸಹಿಷ್ಣುತೆಯ ಜ್ವಾಲೆಗೆ ಪರಸ್ಪರರನ್ನು ಆಹುತಿ ನೀಡುವ ಮತಭ್ರಾಂತರ ಬೀಡನ್ನಾಗಿ ಪರಿವರ್ತಿಸಿದರು. ಇಂತಹ ಪರಿಸ್ಥಿತಿಯಲ್ಲಿ ಆರ್ಯ ಜನಾಂಗದ ನಿಜವಾದ ಧರ್ಮ ಯಾವುದು ಎಂಬುದನ್ನು ತೋರಿಸಲು, ತನ್ನ ನೆನಪಿಗೂ ನಿಲುಕದಷ್ಟು ಪುರಾತನವಾದ ಇತಿಹಾಸದ ಅವಧಿಯಲ್ಲಿ ಈ ನಾಡಿನಗಲದಲ್ಲೆಲ್ಲ ಹರಡಿಹೋಗಿದ್ದ ತನ್ನ ಅನೇಕ ಶಾಖೋಪಶಾಖೆಗಳ ನಡುವೆಯೂ ಹಿಂದೂಧರ್ಮದ ನಿಜವಾದ ಐಕ್ಯತೆ ಎಲ್ಲಿದೆ ಎಂಬುದನ್ನು ತೋರಿಸುವುದಕ್ಕೂ ಶ್ರೀಭಗವಾನ್ ರಾಮಕೃಷ್ಣರು ಭಾರತದಲ್ಲಿ ಅವತರಿಸಿದರು. ಈ ದೇಶದ ಅಸಂಖ್ಯಾತ ಪಂಥಗಳು ಮೇಲು ನೋಟಕ್ಕೆ ಪರಸ್ಪರ ಹೊಂದಾಣಿಕೆಯಿಲ್ಲದವು ಎಂದು ತೋರುತ್ತಿದ್ದವು. ಅವುಗಳಲ್ಲಿ ಪರಸ್ಪರ ಕಲಹ ಸರ್ವೇಸಾಧಾರಣವಾಗಿತ್ತು. ಒಂದೊಂದರ ಆಚಾರ ವಿಚಾರಗಳೂ ಬೇರೆಬೇರೆ. ಅವುಗಳನ್ನೆಲ್ಲ ನೋಡಿ ಈ ದೇಶದ ಜನರೇ ದಿಗ್ಭ್ರಾಂತರಾಗುತ್ತಿದ್ದರು. ವಿದೇಶೀಯರ ದೃಷ್ಟಿಯಲ್ಲಂತೂ ಅವು ತಿರಸ್ಕಾರಯೋಗ್ಯವಾಗಿದ್ದವು. ಇಂಥವುಗಳ ನಡುವೆ ಒಂದು ಐಕ್ಯತೆ ಇದೆ ಎಂಬುದನ್ನು ಶ್ರೀರಾಮಕೃಷ್ಣರು ತೋರಿಸಿಕೊಟ್ಟರು. ಎಲ್ಲಕ್ಕಿಂತ ಹೆಚ್ಚಾಗಿ, ಸನಾತನ ಧರ್ಮದ ಜೀವಂತ ಮೂರ್ತಿಯಾದ ಅವರು ತಮ್ಮ ಅದ್ಭುತ ಜೀವನದ ಮೂಲಕ ಈ ಧರ್ಮದ ವಿಶ್ವವಿಶಾಲತೆಯನ್ನು ತೋರಿಸಿದರು. ಇದರ ಉದ್ದೇಶ ಜನರ ಶಾಶ್ವತವಾದ ಕ್ಷೇಮವನ್ನು ಸಾಧಿಸುವುದಕ್ಕಾಗಿ ತಮ್ಮ ಬದುಕನ್ನು ಆದರ್ಶವಾಗಿ ಎತ್ತಿ ತೋರಿಸುವುದಾಗಿತ್ತು.

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೫, ಪು.೩೮೩ –೮೪)*

* * *

ಪ್ರತಿಯೊಂದು ದೇಶದಲ್ಲಿಯೂ ಗ್ರಂಥವನ್ನೇ ದೇವರಾಗಿ ಪರಿಗಣಿಸಿರುವುದು ನಿಮಗೆ ತೋರುವುದು. ದೇವರು ಅವತಾರವೆತ್ತಿ ಮಾನವನಾಗುತ್ತಾನೆ ಎಂದು ನಂಬುವ ಕೆಲವು ಪಂಥದವರು ನನ್ನ ದೇಶದಲ್ಲಿ ಇರುವರು. ಆದರೆ ಮಾನವನಂತೆ ರೂಪಧಾರಣೆ ಮಾಡಿದ ದೇವರು ಕೂಡ ವೇದವನ್ನು ಅನುಸರಿಸಬೇಕು. ಅವನ ಬೋಧನೆ ವೇದವನ್ನು ಅನುಸರಿಸದೆ ಇದ್ದರೆ ಅವನನ್ನು ಸ್ವೀಕರಿಸುವುದಿಲ್ಲ. ಗ್ರಂಥಾರಾಧನೆಯ ಅರ್ಥ ಇದು.

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೧, ಪು.೧೬೭ –೬೮)* ✤

# ಉಪನಿಷತ್ತುಗಳಲ್ಲಿ ಆಧ್ಯಾತ್ಮಿಕ ಸಾಧನೆ

ಸ್ವಾಮಿ ಜಪಸಿದ್ಧಾನಂದ



**ಹಿಂದೂದರ್ಶನಗಳಿಗೆಲ್ಲ ಆಧಾರ ಹಾಗೂ ಪ್ರಮಾಣಗಳಾಗಿರುವ ವೇದಗಳ ಕೊನೆಯ ಭಾಗವಾದ ಉಪನಿಷತ್ತುಗಳಲ್ಲಿ ಎಲ್ಲ ಸಾಧನೆಗಳ ಉಗಮವನ್ನೂ ಗುರುತಿಸಬಹುದಾಗಿದೆ. ಇವನ್ನು ಅರಿತುಕೊಂಡು ಮಾಡುವ ಸಾಧನೆ ಹೆಚ್ಚು ಫಲಪ್ರದವೂ ಅರ್ಥಪೂರ್ಣವೂ ಆಗುವುದು ಎಂಬ ಅಂಶವನ್ನು ಈ ಲೇಖನದಲ್ಲಿ ವಿವರಿಸಿರುವ ಲೇಖಕರು ಸಂಸ್ಕೃತದಲ್ಲಿ ವಿಶೇಷ ಪರಿಣತಿ ಹೊಂದಿದ್ದು, ಬೇಲೂರು ಮಠದಲ್ಲಿರುವ ವಿವೇಕಾನಂದ ವಿಶ್ವವಿದ್ಯಾನಿಲಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

**ಮಾ**ಹಿತಿ ಮಳೆಗರೆವ ಯುಗ. ಇಂಟರ್‌ನೆಟ್ಟಿನ ನಿಟ್ಟಲ್ಲೇ ನೆಟ್ಟ ನೇತ್ರಯುಗಲ. ಮೌಸ್‌ನಿಂದಲೇ ಸ್ವರ್ಗಭೋಗವನ್ನೂ ಬ್ರೌಸ್ ಮಾಡಹೊರಟವರ ಸೈಬರ್ ಹೌಸ್‌ಗಳ ಮಾಯಾಜಾಲ. ಇಂಥದ್ದು ಈ ಕಾಲ. ಇಲ್ಲಿ ಉಪನಿಷತ್ತನ್ನು ಕೇಳುವವರಾರು. ಇನ್ನು ಅಲ್ಲಿ ಸಾಧನೆಯ ಬಗ್ಗೆ ಏನು ಹೇಳಿದೆ ಎಂಬ ಕಾತರ ಉಳ್ಳವರಾದರೂ ಯಾರು? ಸಾಮಾನ್ಯ ಜನಸ್ತೋಮಕ್ಕೆ ಅಧ್ಯಾತ್ಮದ ವಿಷಯವೆಲ್ಲ ಬೇವಿನ ರಸದಂತೆ. ಪ್ರಾಮಾಣಿಕ ಸಾಧಕರಲ್ಲಿರುವ ಉಪನಿಷತ್ತನ್ನೋದುವ ಹಂಬಲವೇ ಈ ಲೇಖನ ಬರೆವಲ್ಲಿ ಬೆಂಬಲ.

ಮೊದಲಿಗೆ ಶೀರ್ಷಿಕೆಯಲ್ಲಿನ ಶಬ್ದಗಳನ್ನು ಅರ್ಥಮಾಡಿಕೊಳ್ಳಬೇಕು. ಉಪನಿಷತ್ತೆಂದರೇನು, ಆಧ್ಯಾತ್ಮಿಕ ಎಂದರೇನು, ಸಾಧನೆ ಎಂದರೇನು?

## ೧. ಉಪನಿಷತ್ ಶಬ್ದದ ಅರ್ಥ

ಉಪನಿಷತ್ತೆಂದರೆ ಬ್ರಹ್ಮವಿದ್ಯೆ. ಇದು ಚುಟುಕು ಉತ್ತರ. ಗುರುವಿನ ಪದತಲದಲ್ಲಿ ಕುಳಿತು ಕಲಿವ ಬ್ರಹ್ಮವಿದ್ಯೆ ಎಂಬುದು ಅದರ ವಿವರ. ಇಷ್ಟಾದರೂ ಮನವರಿಕೆಯಾಗದು ಅರ್ಥಬಿತ್ತರ. ಇನ್ನಷ್ಟು ಬಿಡಿಸಿ ಹೇಳಿದರೆ ಸುಕರ. ಅದನ್ನೇ ಮಾಡಿದರು ಭಗವಾನ್ ಭಾಷ್ಯಕಾರ ಆಚಾರ್ಯ ಶ್ರೀಶಂಕರ. ಅವರೆಂದರು –

**ಸದೇರ್ಧಾತೋಃ ವಿಶರಣಗತ್ಯವಸಾದನಾರ್ಥಸ್ಯ ಉಪನಿಪೂರ್ವಸ್ಯ ಕ್ವಿಪ್‌ಪ್ರತ್ಯಯಾನ್ತಸ್ಯ ರೂಪಮ್ ಉಪನಿಷದ್ ಇತಿ.**

(– ನಾಶಪಡಿಸು, ತಲುಪಿಸು, ಬೇರ್ಪಡಿಸು ಎಂಬ ಅರ್ಥಗಳುಳ್ಳ ಸದ್‌ಧಾತುವಿಗೆ ಉಪ ಮತ್ತು ನಿ ಎಂಬ ಉಪಸರ್ಗಗಳನ್ನೂ ಕ್ವಿಪ್ ಪ್ರತ್ಯಯವನ್ನೂ ಸೇರಿಸಿದಾಗ ಉಂಟಾಗುವ ಶಬ್ದವೇ **ಉಪನಿಷತ್** ಎಂಬುದು.)

ಇದು ವ್ಯಾಕರಣವಾಯಿತು. ಉಪನಿಷತ್ ಶಬ್ದದ ಒಟ್ಟು ಅರ್ಥ ಏನೆಂಬ ಪ್ರಶ್ನೆ ಹಾಗೇ ಉಳಿಯಿತು. ಅದನ್ನು ಶ್ರೀಶಂಕರರೇ ಬಿಡಿಸಿ ಹೇಳಿದ್ದಾರೆ. ಮೋಕ್ಷವನ್ನು ಬಯಸಿ ಬಂದ ಸಾಧಕರು ಶ್ರದ್ಧೆಯಿಂದ, ಒಮ್ಮನದಿಂದ ಯಾವುದನ್ನು ಕಲಿತು ಅಭ್ಯಾಸ ಮಾಡಿದರೆ ಹುಟ್ಟು ಸಾವು ನೋವು ನಲಿವು ರೋಗರುಜಿನಗಳ ತಗಾದೆಯಿಂದ ಬಿಡಿಸಿಕೊಳ್ಳುವರೊ ಅದೇ ಉಪನಿಷತ್ತು! ಅಜ್ಞಾನವೇ ಮೊದಲಾದ ಸಂಸಾರ ಬೀಜವನ್ನು ಯಾವ ವಿದ್ಯೆ ನಾಶ ಮಾಡಬಲ್ಲದೊ ಅದೇ ಉಪನಿಷತ್ತು! ಯಾವ ವಿದ್ಯೆ ಸಾಧಕರನ್ನು ಬ್ರಹ್ಮದಲ್ಲಿ ಒಂದಾಗಿಸಬಲ್ಲದೊ ಅದೇ ಉಪನಿಷತ್ತು ![೧]

## ೨. ಆಧ್ಯಾತ್ಮಿಕ ಎಂದರೇನು?

ಯಾವುದು ಆತ್ಮನಲ್ಲಿ ನೆಲೆಸಿರುತ್ತದೊ ಅದು ಅಧ್ಯಾತ್ಮ. ಅಧ್ಯಾತ್ಮಕ್ಕೆ ಸಂಬಂಧಿಸಿದ್ದು ಆಧ್ಯಾತ್ಮಿಕ.[೨] ಆತ್ಮ ಎಂದರೆ ಪ್ರತಿ

೧. ಕಠೋಪನಿಷತ್ತಿನ ಭಾಷ್ಯದ ಅವತರಣಿಕೆಯಲ್ಲಿನ ಮೂರು, ನಾಲ್ಕು ಪರಿಚ್ಛೇದಗಳ (ಪ್ಯಾರಾಗಳ) ಭಾವಾರ್ಥವಿದು.

೨. ವಿಭಕ್ತ್ಯರ್ಥದಲ್ಲಿ ಅವ್ಯಯೀಭಾವ ಸಮಾಸವನ್ನು ಮಾಡಿದ ಮೇಲೆ **ಅಧ್ಯಾತ್ಮಾದೇಷ್ಠಞಿಷ್ಯತೇ** ಎಂಬ ವಾರ್ತಿಕದಿಂದ 'ಆಧ್ಯಾತ್ಮಿಕ' ಎಂಬ ಶಬ್ದ ಸಿದ್ಧವಾಗುತ್ತದೆ.

ಯೊಬ್ಬರ ನಿಜಸ್ವರೂಪ. ಏನದು ಆ ನಿಜಸ್ವರೂಪ? ಅಳಿವಿಲ್ಲದ ಇರವು ಅರಿವು ಹರುಷಗಳ ಹರವು – ಇದೇ ಎಲ್ಲರ ನಿಜಸ್ವರೂಪ. ಇಲ್ಲ , ನಮಗೇನೂ ಹಾಗೆನಿಸುತ್ತಿಲ್ಲವಲ್ಲ ಎಂದರೆ – ಅದಕ್ಕೇ ಅಲ್ಲವೇ ಉಪನಿಷತ್ತನ್ನು ಓದಿ ಎಂದದ್ದು. ಆತ್ಮನಲ್ಲಿ ಇರುವಂತದ್ದು ಯಾವುದು? ಶರೀರ, ಮನಸ್ಸು , ಬುದ್ಧಿ, ಅಹಂಕಾರ ಮೊದಲಾದುವೆಲ್ಲ ಆತ್ಮನಲ್ಲೇ ನೆಲೆಸಿವೆ. ಆದ್ದರಿಂದ ಅವುಗಳೇ ಅಧ್ಯಾತ್ಮ. ಇಂಥ ಅಧ್ಯಾತ್ಮಕ್ಕೆ ಸಂಬಂಧಿಸಿದ್ದು ಆಧ್ಯಾತ್ಮಿಕ. ಎಂದರೆ ಅವುಗಳ ಕುರಿತಾದ ತಿಳಿವು ಅನುಭವ ಎಲ್ಲವೂ ಆಧ್ಯಾತ್ಮಿಕ. ಆಧ್ಯಾತ್ಮಿಕ ಜ್ಞಾನ ಎಂದರೆ ಶರೀರ, ಮನಸ್ಸು ಬುದ್ಧಿ ಅಹಂಕಾರ ಇವುಗಳೆಲ್ಲ ನಿಜದಲ್ಲಿ ಏನು ಎಂಥವು ಎಂಬ ತಿಳಿವು. ಇಲ್ಲಿ ಕೆಲವರಿಗನ್ನಿಸಬಹುದು – ಇದೆಂಥದಪ್ಪ, ಆತ್ಮನನ್ನು ಮನಗಾಣಬಂದರೆ ಮೈಮನ ಮತಿ ಮದಗಳ ಮಾತನ್ನಾಡುತ್ತಿದ್ದಾರಲ್ಲ! ಇಲ್ಲೇ ಇರುವುದು ಸ್ವಾರಸ್ಯ. ಆತ್ಮದ ಕುರಿತಾಗಿ ತಿಳಿವುದು ತಿಳಿಸುವುದು ಸಾಧ್ಯವಿಲ್ಲ. ನಮ್ಮನ್ನು ನಾವು ಇನ್ನೊಬ್ಬರಿಂದ ಪರಿಚಯ ಮಾಡಿಕೊಳ್ಳಲು ಸಾಧ್ಯವೆ? ನಾವೇ ಆ ಆತ್ಮ. ನಮ್ಮನ್ನು ನಾವೇ ಭೇಟಿಯಾಗಲು ಸಾಧ್ಯವೆ? ಯಾರನ್ನು ಹೋಗಿ ಭೇಟಿಯಾಗ ಬೇಕೊ ಅದು ನಾವೇ ಅಲ್ಲವೆ? ಇನ್ನು ಭೇಟಿಯಾಗುವುದೇನಿದೆ? ಹಾಗೆ ಇದೂ ಕೂಡ. ಆತ್ಮನನ್ನು ಅರಿಯುವಂಥ ಆವಶ್ಯಕತೆ ಏನಿಲ್ಲ. ಅದು ಸ್ವಯಂಸಿದ್ಧ. ಆದರೆ ಶರೀರಾದಿಗಳೇ ತಾನು ಎಂಬ ತಪ್ಪು ತಿಳಿವಿನಿಂದ ಅದು ಮುಚ್ಚಿಹೋಗಿದೆ. ದೇಹ ಮನೋಬುದ್ಧಿಗಳ ಕುರಿತಾಗಿ ಸ್ಪಷ್ಟವಾಗಿ ತಿಳಿದಂತೆಲ್ಲ, ಇದಾವುದೂ ನಾನಲ್ಲ , ನಾನು ಈ ದೇಹಾದಿಗಳಿಗಿಂತ ಬೇರೆಯಾದ ಆತ್ಮ ಎಂಬ ಅರಿವು ತಾನೇ ತಾನಾಗಿ ಮೂಡುತ್ತದೆ. ಕನಸಿನಿಂದ ಮೈತಿಳಿದೆದ್ದಾಗ ಅಲ್ಲಿ ನಡೆದದ್ದಕ್ಕೂ ನನಗೂ ಸಂಬಂಧವಿಲ್ಲ. ಅವುಗಳಿಗಿಂತ ಬೇರೆ ನಾನು ಎಂದೆನಿಸುವುದಿಲ್ಲವೆ? ಹಾಗೇ ಇದು ಕೂಡ. ಹೀಗೆ ಪರ್ಯಾಯವಾಗಿ ಆಧ್ಯಾತ್ಮಿಕ ಎಂಬ ಶಬ್ದಕ್ಕೆ ಆತ್ಮಕ್ಕೆ ಸಂಬಂಧಿಸಿದ್ದು, ಆತ್ಮಜ್ಞಾನಕ್ಕೆ ನೆರವಾಗುವಂಥದ್ದು ಎಂಬ ಅರ್ಥ ರೂಢಿಗೆ ಬಂದಿದೆ.

ಸಾಧನ ಎಂಬ ಸಂಸ್ಕೃತ ಶಬ್ದದ ಕನ್ನಡ ರೂಪ ಸಾಧನೆ.[೩] ಸಾಧನ ಎಂದರೆ ಉಪಕರಣ, ಸಲಕರಣೆ. ಆತ್ಮನನ್ನು ಯಾವುದೇ ಭೌತಿಕ ಉಪಕರಣ ತೋರಿಸಿಕೊಡಲಾರದು. ಆದ್ದರಿಂದ ಇಲ್ಲಿ ಸಾಧನೆ ಎಂದರೆ ಉಪಾಯ, ಮಾರ್ಗ, ಪ್ರಯತ್ನ ಎಂದರ್ಥ. ಏನನ್ನು ಮಾಡಿದರೆ ಆತ್ಮಜ್ಞಾನ ತಾನೇತಾನಾಗಿ ಮೂಡುವುದೋ ಅದಕ್ಕೆ ಆಧ್ಯಾತ್ಮಿಕ ಸಾಧನೆ ಎಂದು ಹೆಸರು. ದಾಸರು, ಶಿವಶರಣರು, ಸಂತರು ಮಹಾತ್ಮರೆಲ್ಲ ಬಗೆ ಬಗೆಯ ಪ್ರಯತ್ನದಿಂದ ಆತ್ಮಜ್ಞಾನ ಗಳಿಸಿದರು. ಬಹಳಷ್ಟು ಹೋರಾಡಿ ಸಿದ್ಧಪುರುಷರಾದರು. ಆ ಪ್ರಯತ್ನವನ್ನೇ ಸಾಧನೆ ಎನ್ನುವುದು. ಸಾಧನೆಯ ಕುರಿತು ಉಪನಿಷತ್ತು ಏನು ಹೇಳಿದೆ ಎಂಬುದನ್ನು ತಿಳಿವ ಪ್ರಯತ್ನವೇ ಈ ಲೇಖನ.

೩. ಸಾಧ ಸಂಸಿದ್ಧೌ ಎಂಬ ಧಾತುವಿಗೆ ಲ್ಯುಟ್ಚ ಎಂಬ ಸೂತ್ರದಿಂದ ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯವನ್ನು ಸೇರಿಸಿದಾಗ ಉಂಟಾಗುವ ಶಬ್ದ ಸಾಧನ.

## ೩. ಉಪನಿಷತ್ತುಗಳ ಮೂಲ

ಉಪನಿಷತ್ತುಗಳು ವೇದಗಳ ಒಂದು ಭಾಗ. ವೇದ ಒಂದೇ ಆದರೂ ಓದುಗರ ಸೌಕರ್ಯಕ್ಕಾಗಿ ವ್ಯಾಸರು ಅದನ್ನು ನಾಲ್ಕಾಗಿ ವಿಂಗಡಿಸಿದರು. ಅವೇ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದ. ಈ ಪ್ರತಿಯೊಂದು ವೇದದಲ್ಲೂ ಮತ್ತೆ ನಾಲ್ಕು ಉಪವಿಭಾಗಗಳಿವೆ – ಸಂಹಿತೆ, ಬ್ರಾಹ್ಮಣ, ಅರಣ್ಯಕ ಉಪನಿಷತ್ತು ಎಂದು. ದೇವತೆಗಳ ಸ್ತುತಿ ಮತ್ತು ಸ್ವರೂಪ ವರ್ಣನೆ ಮಾಡುವ ಮಂತ್ರಗಳಿಗೆ **ಸಂಹಿತೆ** ಎಂದು ಹೆಸರು. ಹೋಮ, ಯಜ್ಞ ಮಾಡುವ ಕ್ರಮವನ್ನು ತಿಳಿಸುವ ಮಂತ್ರಭಾಗವೇ **ಬ್ರಾಹ್ಮಣ.** ಯಜ್ಞಗಳನ್ನು ಮನಸ್ಸಿನಲ್ಲೇ ಭಾವನಾತ್ಮಕವಾಗಿ ಮಾಡುವ ವಿದ್ಯೆಯನ್ನು ಕಲಿಸುವ ಮಂತ್ರಗಳಿಗೆ **ಆರಣ್ಯಕ** ಎಂದು ಹೆಸರು. ಆತ್ಮ ಅಥವಾ ಬ್ರಹ್ಮದ ಕುರಿತಾಗಿ ಹೇಳುವ ಮಂತ್ರಗಳೇ **ಉಪನಿಷತ್ತು.** ಈ ಉಪನಿಷತ್ತುಗಳನ್ನು ಬರೆದವರಾರು? ಮತ್ತಾರು ವೇದಗಳನ್ನು ಬರೆದರು! ವೇದಗಳನ್ನು ಬರೆದವರಾರು? ಯಾರು? ಯಾರೂ ಇಲ್ಲ! ವೇದಗಳು ಮನುಷ್ಯರಿಂದ ಬರೆಯಲ್ಪಟ್ಟವುಗಳಲ್ಲ. ಋಷಿಗಳೂ ವೇದಗಳ ಕರ್ತೃಗಳಲ್ಲ. ಅವರು ಕೇವಲ ಮಂತ್ರದ್ರಷ್ಟಾರರು ಎಂದರೆ ನೋಡಿದವರು. ಎಲ್ಲಿ ನೋಡಿದರು? ಟೀವಿಯಲ್ಲೆ? ಅಲ್ಲ ! ಗೂಗಲ್‌ನಲ್ಲೇ? ಅಲ್ಲವೇ ಅಲ್ಲ! ಮತ್ತೆಲ್ಲಿ? ಮನದಲ್ಲಿ ಅಂತರಂಗದಲ್ಲಿ! ಧ್ಯಾನದಿಂದ ಯೋಗ ಸಾಧನೆಯ ಬಲದಿಂದ ಅವರಿಗೆ ಅಂತರಂಗದಲ್ಲಿ ಬಂಗಾರದ ಅಕ್ಷರಗಳಲ್ಲಿ ವೇದಮಂತ್ರಗಳು ಕಾಣಿಸಿಕೊಂಡವು ಅಂದರೆ ಸ್ವಯಂ ಭಗವಂತನ ನುಡಿಗಳೇ ಋಷಿಗಳ ಮೂಲಕ ಲೋಕ ಕಲ್ಯಾಣಕ್ಕಾಗಿ ಹರಿದು ಬಂದ ವೇದಗಳೆನಿಸಿಕೊಂಡಿವೆ. ಆದ್ದರಿಂದ ಉಪನಿಷನ್ಮಂತ್ರಗಳ ಸಂದೇಶವೆಂದರೆ ಅದು ಸಾಕ್ಷಾತ್ ಭಗವಂತನ ಉಪದೇಶ. ಭಗವಂತನಿಂದ ಉಪದೇಶ ಯಾರಿಗೆ ತಾನೆ ಬೇಡ. ಆದ್ದರಿಂದ ಉಪನಿಷತ್ತನ್ನು ಓದಬೇಕು. ಉಪನಿಷತ್ತಿನಲ್ಲಿ ಆಧ್ಯಾತ್ಮಿಕ ಸಾಧನೆಯ ಬಗ್ಗೆ ಇರುವ ಮಾತುಗಳು ಭಗವಂತ ತನ್ನನ್ನು ಸೇರಲು ತಾನೇ ತೋರಿ ಕೊಟ್ಟ ದಾರಿ! ಯಾವುದು ಆ ದಾರಿ! ಹಲವಾರು ನುಡಿಗಳಲ್ಲಿ ಆ ಸಾಧನೆಯ ರೂಪರೇಷೆ ಮೂಡಿ ಬಂದಿದೆ. ಅದೆಲ್ಲವನ್ನೂ ಈ ಲೇಖನದಲ್ಲಿ ಪರಾಂಬರಿಸುವುದು ಸಾಧ್ಯವೂ ಇಲ್ಲ. ಏಕೆಂದರೆ ಈ ಲೇಖನದ ಉದ್ದೇಶ ವಿಷಯದ ಸಮೀಕ್ಷೆಯೇ ಹೊರತು ಓದುಗರ ತಾಳ್ಮೆಯ ಪರೀಕ್ಷೆ ಅಲ್ಲ !

ಉಪನಿಷತ್ತಿನಲ್ಲಿ ಹೇಳಿದ ಸಾಧನೆಯ ನಿಯಮಗಳಲ್ಲಿ ತುಂಬ ಮುಖ್ಯವಾದ ಕೆಲವನ್ನು ನೋಡೋಣ.

## ೧. ಸತ್ಯಪರಿಪಾಲನೆ

ಇಹಲೋಕದ ನೆಮ್ಮದಿಗೂ ಸತ್ಯದ ಬುನಾದಿ ಬೇಕು ಎಂಬುದು ತಲೆ ಸರಿಯಿರುವ ಎಲ್ಲರೂ ಒಪ್ಪುವ ಮಾತೇ. ಹೀಗಿರುವಾಗ,



ಇನ್ನು ಆತ್ಮಜ್ಞಾನವನ್ನು ಹುಸಿಯಿಂದ ದಕ್ಕಿಸಿಕೊಳ್ಳುವುದುಂಟೆ? ಸತ್ಯರೂಪಿ ಸತ್ಯನಾರಾಯಣನನ್ನು ಸತ್ಯದಿಂದಲೇ ಒಲಿಸ ಬೇಕಲ್ಲದೆ ಬೇರೆ ದಾರಿಯಿಲ್ಲ. ಆದ್ದರಿಂದ ನಿತ್ಯ ನಿಜ ನುಡಿಯ ಬೇಕೆಂದು ಮತ್ತೆ ಮತ್ತೆ ಸಾರುತ್ತದೆ ಉಪನಿಷತ್ತು –

➢ **ಸತ್ಯಂವದ** [೪]

ಸತ್ಯವನ್ನು ಹೇಳು, ಎಂದದ್ದಲ್ಲದೆ ಮತ್ತೆ ಎಚ್ಚರಿಸುತ್ತದೆ ತೈತ್ತಿರೀಯೋಪನಿಷತ್ತು –

➢ **ಸತ್ಯಾನ್ನ ಪ್ರಮದಿತವ್ಯಮ್** [೫]

ಸಾಚಾತನವನ್ನು ಕಾಯ್ದುಕೊಳ್ಳುವಲ್ಲಿ ಮೈಮರೆಯಬಾರದು. ಅಂದರೆ ಮರೆತೂ ಹುಸಿಯಾಡಬಾರದು ಎಂದು ವಿವರಿಸುತ್ತಾರೆ ಶ್ರೀಶಂಕರಾಚಾರ್ಯರು.

➢ **ಸತ್ಯೇನ ಪಂಥಾ ವತತೋ ದೇವಯಾನಃ** [೬]

ದೇವನೆಡೆಗೆ ಸಾಗುವ ಹಾದಿಯು ಸತ್ಯದಿಂದ ಹಾಸಲ್ಪಟ್ಟಿದೆ.

➢ **ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ** [೭]

ಈ ಆತ್ಮನು ಸತ್ಯದಿಂದ ಹಾಗೂ ಏಕಾಗ್ರತೆಯಿಂದ ದೊರಕುವನು.

➢ **ತಸ್ಯೈ... ಸತ್ಯಮಯತನಮ್** [೮]

ಆತ್ಮವಿದ್ಯೆ ನೆಲೆಸಿರುವುದು ಸತ್ಯದಲ್ಲಿ. ಸತ್ಯ ಎಂದರೆ ಸಾಚಾತನ, ಸಾಚಾತನ – ಎಂದರೆ ನಡೆ ನುಡಿ ನೆನಹುಗಳಲ್ಲಿ ನೇರವಾಗಿರುವುದು, ಡೊಂಕಿಲ್ಲದಿರುವುದು. ಕೊಂಕಿಲ್ಲದ ಸಾಧುಗಳಲ್ಲೇ ಆತ್ಮವಿದ್ಯೆ ಮೂಡುತ್ತದೆ. ಅಸುರಸ್ವಭಾವದ ಕುಹಕಿಗಳಲ್ಲಲ್ಲ ಎನ್ನುತ್ತಾರೆ ಶ್ರೀಶಂಕರಭಗವತ್ಪಾದರು.

➢ **ತೇಷಾಮಸೌ ವಿರಜೋ ಬ್ರಹ್ಮಲೋಕೋ ನ ಯೇಷು ಜಿಹ್ಮಮನೃತಂ ನ ಮಾಯಾ ಚೇತಿ** [೯]

ಯಾರಲ್ಲಿ ಕೊಂಕು ಕುಹುಕಗಳಿಲ್ಲವೋ ಹುಸಿತನವಿಲ್ಲವೋ ಅವರಿಗೇ ದಕ್ಕುವಂಥದ್ದು ಬ್ರಹ್ಮಲೋಕ ಎನ್ನುತ್ತದೆ ಪ್ರಶ್ನೋಪನಿಷತ್ತು. ಈ ಮಂತ್ರದಲ್ಲಿ ಮಾಯೆ (ಕುಹುಕ) ಎಂದರೆ ಹೊರಗೊಂದು ಒಳಗೊಂದು ಮಾಡುವ ಸ್ವಭಾವ (=ಆಷಾಡಭೂತಿತನ, ಮಿಥ್ಯಾಚಾರ) ಎನ್ನುತ್ತಾರೆ ಶ್ರೀಶಂಕರರು.

## ೨. ಇಂದ್ರಿಯನಿಗ್ರಹ

ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮ ಇವು ಐದು ಜ್ಞಾನೇಂದ್ರಿಯಗಳು. ಕೈ, ಕಾಲು, ಮಾತು, ಗುದ, ಜನನೇಂದ್ರಿಯ ಇವು ಐದು ಕರ್ಮೇಂದ್ರಿಯಗಳು. ಈ ಹತ್ತನ್ನು ಹೊರ ಇಂದ್ರಿಯಗಳೆಂದೂ ಮನಸ್ಸನ್ನು ಒಳ ಇಂದ್ರಿಯವೆಂದೂ ಕರೆಯುತ್ತಾರೆ. ಹೀಗೆ ಒಟ್ಟು ಹನ್ನೊಂದು ಇಂದ್ರಿಯಗಳು. ಇವುಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದೇ ಇಂದ್ರಿಯನಿಗ್ರಹ. ಈ ಅಂಗಗಳನ್ನು ಅಂಕೆಯಲ್ಲಿಡಬೇಕಾದ್ದು ಕಡ್ಡಾಯ. ಇದನ್ನೇ ಶಮ ದಮ ಮುಂತಾದ ಶಬ್ದಗಳಿಂದಲೂ ಹೇಳುತ್ತಾರೆ. ಇಂದ್ರಿಯಗಳನ್ನು ಹದ್ದುಬಸ್ತಿನಲ್ಲಿಡಬಲ್ಲವನನ್ನು **ಧೀರ** ಎಂದು ಹೊಗಳುತ್ತದೆ ಉಪನಿಷತ್ತು.

➢ **ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತಚಕ್ಷುರಮೃತತ್ವಮಿಚ್ಛನ್।** [೧೦]

ಯಾರೋ ಒಬ್ಬ ಧೀರನು (ಅಂದರೆ ವಿವೇಕಿಯು) ಅಮೃತತ್ವವನ್ನು ಬಯಸಿ ಇಂದ್ರಿಯಗಳನ್ನು ವಿಷಯಸುಖದಿಂದ ಹಿಂತೆಗೆದುಕೊಂಡು, ಒಳಮುಖಗೊಳಿಸಿ ತನ್ನಲ್ಲೇ ಇರುವ ಆತ್ಮನನ್ನು ನೋಡುತ್ತಾನೆ.

➢ **ತಮಕ್ರತುಃ ಪಶ್ಯತಿ ವೀತಶೋಕೋ**
**ಧಾತುಃಪ್ರಸಾದಾನ್ ಮಹಿಮಾನಮಾತ್ಮನಃ।** [೧೧]

ಕಾಮನೆಗಳಿಲ್ಲದ ಮನುಷ್ಯನು ಇಂದ್ರಿಯಗಳನ್ನು ಸುಮ್ಮನಿರಿಸುವುದರ ಮೂಲಕ ಆತ್ಮದ ಮೈಮೆಯನ್ನು ಮನಗಂಡು ದುಃಖವನ್ನು ನೀಗುತ್ತಾನೆ.

➢ **ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ।**
**ಬುದ್ಧಿಶ್ಚ ನ ವಿಚೇಷ್ಟತೇ ತಾಮಾಹುಃ ಪರಮಾಂ ಗತಿಮ್॥** [೧೨]

---

೪. ತೈತ್ತಿರೀಯೋಪನಿಷತ್ ೧.೧೧.೧
೫. ತೈತ್ತಿರೀಯೋಪನಿಷತ್ ೧.೧೧.೧
೬. ಮುಂಡಕೋಪನಿಷತ್ ೩.೧.೬
೭. ಮುಂಡಕೋಪನಿಷತ್ ೩.೧.೫
೮. ಕೇನೋಪನಿಷತ್ತು ೪.೮ (ಅಥವಾ ಉಪನಿಷತ್ತನ್ನು ಅಧ್ಯಾಯಗಳಾಗಿ ವಿಂಗಡಿಸದೆ ಎಣಿಸಿದರೆ ೩೩ನೇ ಮಂತ್ರ)
೯. ಪ್ರಶ್ನೋಪನಿಷತ್ ೧.೧೬
೧೦. ಕಠೋಪನಿಷತ್ ೨.೧.೧
೧೧. ಕಠೋಪನಿಷತ್ ೧.೨.೨೦
೧೨. ಕಠೋಪನಿಷತ್ ೨.೩.೧೦




ಯಾವಾಗ ಐದು ಇಂದ್ರಿಯಗಳು ಮತ್ತು ಮನಸ್ಸು ಅಲುಗಾಡದೆ ನಿಲ್ಲುವುದೋ ಆ ದೆಸೆಯನ್ನು ಪರಮಗತಿ ಎಂದು ಹೇಳುತ್ತಾರೆ.

➢ **ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್।** [೧೩]

ಇಂದ್ರಿಯಗಳನ್ನು ಸ್ಥಿರವಾಗಿ ಹಿಡಿದಿಡುವುದನ್ನೇ ಯೋಗವೆನ್ನುತ್ತಾರೆ.

➢ **ತಸ್ಯೈ ತಪೋದಮಃ ಕರ್ಮೇತಿ ಪ್ರತಿಷ್ಠಾ।** [೧೪]

ತಪಸ್ಸು ಇಂದ್ರಿಯನಿಗ್ರಹ ಹೋಮಹವನಾದಿ ಕರ್ಮ ಇವುಗಳೇ ಬ್ರಹ್ಮವಿದ್ಯೆಗೆ ಆನಿಕೆ. ಕಾಲುಗಳು ಶರೀರಕ್ಕೆ ಹೇಗೆ ಒತ್ತೆಯೊ ಆಸರೆಯೊ ಹಾಗೆ ಬ್ರಹ್ಮ ವಿದ್ಯೆ ಹರಿದು ಬರುವುದಕ್ಕೆ ಇಂದ್ರಿಯ ನಿಗ್ರಹಾದಿ ಯೋಗ್ಯತೆಯೇ ಆಲಂಬನೆ ಎಂದು ಬಣ್ಣಿಸುತ್ತಾರೆ ಶ್ರೀಶಂಕರಾಚಾರ್ಯರು.

### ೩. ಹರಟೆ ಹೊಡೆಯಬೇಡಿರಿ

➢ **(ತಮೇವೈಕಂ ಜಾನಥ ಆತ್ಮಾನಮ್) ಅನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ।** [೧೫]

ಸರ್ವಾಶ್ರಯವಾದ, ಅದ್ವಿತೀಯವಾದ ಆ ಆತ್ಮ ವನ್ನೇ ಅರಿತುಕೊಳ್ಳಿರಿ, ಮಿಕ್ಕೆಲ್ಲ ಮಾತುಗಳನ್ನು ಬಿಟ್ಟುಬಿಡಿ.

### ೪. ತಲೆಹರಟೆ ಸಲ್ಲದು

➢ **ನೈಷಾತರ್ಕೇಣ ಮತಿರಾಪನೇಯಾ** [೧೬]

ಗುರುವುನಿಂದ ಆತ್ಮದ ಕುರಿತಾಗಿ ಕೇಳಿ ತಿಳಿದುಕೊಂಡದ್ದನ್ನು ಕಾಪಾಡಿ ಕೊಳ್ಳಬೇಕು, ತಲೆಹರಟೆಯಿಂದ ಕದಡಿಕೊಳ್ಳಬಾರದು.

➢ **ನಾನು ಧ್ಯಾಯಾದ್ ಬಹೂನ್ ಶಬ್ದಾನ್ ವಾಚೋ ವಿಗ್ಲಾಪನಂ ಹಿ ತತ್** [೧೭]

ತುಂಬ ಯೋಚಿಸುವುದು ಚಿಂತಿಸುವುದು ಸಲ್ಲ. ಅದು ಮಾತನ್ನು ಬಳಲಿಸುತ್ತದೆ.

### ೫. ನೊಣ ಹೊಡೆಯಬೇಡಿರಿ [೧೮]

ಮಾನವ ಜನ್ಮ ದೊಡ್ಡದು ಅದು ಹಾಳು ಮಾಡಬೇಡಿ ಹುಚ್ಚಪ್ಪಗಳಿರಾ ಎಂಬ ದಾಸವರೇಣ್ಯರ ಮಾತನ್ನು ಉಪನಿಷತ್ತು ಅಂದೆ ಮೊಳಗಿತ್ತು! ಸುಮ್ಮನೆ ಕೂತು ಕೊಳೆಯಬಾರದು. ಸಮಯ ನಷ್ಟ ಮಾಡಬಾರದು ಎಂಬಂಥ ಸಾಮಾನ್ಯ ವಿಚಾರವನ್ನೂ ಉಪನಿಷತ್ತು ಹೇಳದೆ ಬಿಟ್ಟಿಲ್ಲ. ಆದರೆ ಆ ಉಪ ನಿಷದ್ವಾಣಿ ಎಲ್ಲರಿಗೂ ಕೇಳಿಸಲಿಲ್ಲ. ಆದ್ದರಿಂದ ದಾಸರು ಪದ ಹಾಡಿದರು. ಆದರೆ ಇಂದು ಸಮಯ ಹಾಳು ಮಾಡಬಾರದೆಂಬುದನ್ನು ಇಂದಿನ ಯುವ ಕರ ತಲೆಯಲ್ಲಿ ತುರುಕುವ ಪ್ರಯತ್ನ ನಡೆಯಬೇಕಾಗಿದೆ. ಏಕೆಂದರೆ ತರುಣರ ತಲೆಯಲ್ಲಿ ಇಂದು ಹೇರಳವಾಗಿರುವುದು ಕೂದಲು ಮಾತ್ರವೇ. ಚೂರು ಪಾರು ವಿಚಾರಗಳು ಅದರೊಳಗೂ ಹೊಕ್ಕಿದ್ದರೆ ಅವೆಲ್ಲ ಇಂಟರ್‌ನೆಟ್ಟಿನ ವರ ಪ್ರಸಾದ. ಬಿಸಿನೆತ್ತರಿನ ಜನಾಂಗಕ್ಕೆ ಆಧ್ಯಾತ್ಮ ಸಂಸ್ಕೃತಿಯ ಸಾರವನ್ನು ಉಣಿ ಸುವ ಪವಿತ್ರ ಕಾರ್ಯವನ್ನು ಕೈಗೊಳ್ಳಬೇಕಾಗಿದೆ. ಇದನ್ನು ಯಾರು ಮಾಡ ಬೇಕೋ ತಿಳಿಯುತ್ತಿಲ್ಲ! ಏಕೆಂದರೆ ಮನೆಮನೆಗಳಲ್ಲಿ (ಕೆಲವೊಮ್ಮೆ ಬೀದಿ ಬದಿಯಲ್ಲಿ) ಹದಿಹರೆಯದವರಿಂದ ಪ್ರಾಯ ಮುಗಿದವರೂ ಮೊಬೈಲ್ ಬಳಸುವುದನ್ನು ಕಲಿವ ಉತ್ಸಾಹವನ್ನು ಕಂಡಾಗ ಯಾರು ಯಾರಿಗೆ ದಿಗ್ದರ್ಶ ಕರು ಎಂಬುದೆ ತಿಳಿಯುತ್ತಿಲ್ಲ! ಈ ವಿಷಯ ಹಾಗಿರಲಿ, ಉಪನಿಷತ್ತು ಕಾಲ ಹರಣ ಮಾಡದಂತೆ ಎಚ್ಚರಿಸುವ ಧಾಟಿಯನ್ನು ನೋಡಿ –

➢ **ಇಹ ಚೇದವೇದೀತ್ ಅಥ ಸತ್ಯಮಸ್ತಿ, ನ ಚೇದಿಹಾವೇದೀತ್ ಮಹತೀ ವಿನಷ್ಟಿಃ।** [೧೯]

ಇಲ್ಲಿ ಈ ಲೋಕದಲ್ಲಿ ಬದುಕಿರುವಾಗಲೇ ಆತ್ಮತತ್ತ್ವವನ್ನು ಅರಿತು ಕೊಂಡರೆ ಬದುಕಿಗೊಂದು ಅರ್ಥವಿದೆ, ಜೀವನ ಸಾರ್ಥಕವಾಗುತ್ತದೆ. ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳದಿದ್ದರೆ ದೊಡ್ಡ ಅವಘಡ ಕಾದಿದೆ. (ಹುಟ್ಟುಸಾವುಗಳ ಸುಳಿಯಲ್ಲಿ ಸುತ್ತುವಂತಾಗುವುದೇ ಆ ಗಂಡಾಂತರ.)

---

೧೩. ಕಠೋಪನಿಷತ್ ೨.೩.೧೧
೧೪. ಕೇನೋಪನಿಷತ್ ೪.೮
೧೫. ಮುಂಡಕೋಪನಿಷತ್೨.೨.೫
೧೬. ಕಠೋಪನಿಷತ್ ೧.೨.೯
೧೭. ಬೃಹದಾರಣ್ಯಕೋಪನಿಷತ್ ೪.೪.೨೧
೧೮. ಇದೊಂದು ನುಡಿಗಟ್ಟು – ಕೆಲಸವಿಲ್ಲದೆ ಸುಮ್ಮನೆ ಸೋಮಾರಿಯಾಗಿ ಕುಳಿತಿರ ಬೇಡಿರಿ ಎಂದರ್ಥ.
೧೯. ಕೇನೋಪನಿಷತ್ ೨.೫

➤ **ಇಹ ಚೇದಶಕದ್ ಬೋದ್ಧುಂ ಪ್ರಾಕ್ಶರೀರಸ್ಯ ವಿಸ್ರಸಃ ।**
**ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥** [೨೦]

ಇಲ್ಲಿ ಈ ಜಗತ್ತಿನಲ್ಲಿ ಶರೀರ ಬಿದ್ದು ಹೋಗುವ ಮೊದಲೇ ಆ ಬ್ರಹ್ಮವಸ್ತುವನ್ನು[೨೧] ಸಾಕ್ಷಾತ್ಕರಿಸಿಕೊಂಡರೆ ಲೌಕಿಕ ಬಂಧನಗಳಿಂದ ಬಿಡಿಸಿಕೊಂಡು ಮುಕ್ತನಾಗಬಹುದು. ಇಲ್ಲದಿದ್ದರೆ ಈ ಲೋಕಗಳಲ್ಲಿ ಮತ್ತೆ ಹುಟ್ಟಿ ಬರಬೇಕಾಗುತ್ತದೆ.

### ೬. ಏಳಿ! ಎದ್ದೇಳಿ! ಮೈಮರೆಯಬೇಡಿ!

➤ **ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ ।**
**ಕ್ಷುರಸ್ಯ ಧಾರ ನಿಶಿತಾ ದುರತ್ಯಯಾ**
**ದುರ್ಗಂ ಪಥಸ್ತತ್ ಕವಯೋ ವದಂತಿ ॥** [೨೨]

ಏಳಿ, ಎದ್ದೇಳಿ, ಅಜ್ಞಾನದ ನಿದ್ದೆಯಿಂದ ಎದ್ದು ಶ್ರೇಷ್ಠ ಗುರುಗಳ ಬಳಿ ಹೋಗಿ ಆತ್ಮದ ಬಗ್ಗೆ ಕೇಳಿ ಕಲಿತುಕೊಳ್ಳಿರಿ. ಆತ್ಮಜ್ಞಾನದ ಹಾದಿಯು ಸಾಣೆ ಹಿಡಿದ ಕತ್ತಿಯಲಗಿನ ಮೇಲೆ ಹೆಜ್ಜೆಹಾಕಿದಷ್ಟು ಕಠಿಣ. (ಅಂದರೆ ಸ್ವಲ್ಪ ಮೈಮರೆತರೂ ತುಂಡೆರಡಾಗಿ ಮಡಿದಿರುತ್ತಾನೆ ಮಾನವ. ಇತ್ತ ಸುಖಭೋಗವೂ ಇಲ್ಲ, ಅತ್ತ ಅಧ್ಯಾತ್ಮಕ್ಕೂ ಸಲ್ಲ ಎಂದರ್ಥ!)

ಎಂಥ ಕಾಳಜಿಯ ಮಾತಿದು. ಮಾನವನ ಮೇಲ್ಮೆಗಾಗಿ ಒಲ್ಮೆಯಿಂದ ಮಾತೆಯಂತೆ ಮನವೊಲಿಸಿದೆ ಉಪನಿಷತ್ತು ಎನ್ನುತ್ತಾರೆ ಶ್ರೀಶಂಕರಾಚಾರ್ಯರು.

ಇಂತಿಂಥ ಅತ್ಯುಪಯುಕ್ತ ಪ್ರಾಯೋಗಿಕ ಸಲಹೆಗಳ ಸೆಲೆಯಾಗಿದೆ ಉಪನಿಷತ್ತು. ನಮೂನೆಗೆ ಒಂದೆರಡು ತುಣುಕನ್ನಿಟ್ಟು ಇಣುಕುನೋಟ ಕೊಡಲಾಗಿದೆ ಇಲ್ಲಿ. ಉಪನಿಷತ್ತಿನ ಪೂರ್ಣ ಪ್ರಕಾಶವನ್ನು ಅನುಭವಿಸುವ ಹಂಬಲವಿದ್ದರೆ ತಡಮಾಡುವುದೇಕೆ, ಈ ಕೂಡಲೇ ಉಪನಿಷತ್ತನ್ನೋದಲು ಮೊದಲು ಮಾಡಿರಿ. ಉಪನಿಷತ್ ಗ್ರಂಥ ಎಲ್ಲಿ ಸಿಗುತ್ತದೆ? ಮತ್ತೆಲ್ಲಿ, ಪುಸ್ತಕ ಮಳಿಗೆಯಲ್ಲಿ? ಪ್ರಸಿದ್ಧ ಪ್ರಕಾಶನಗಳನ್ನು ಪರಿಚಯಿಸಿದರೆ ಅನುಕೂಲ ಅಲ್ಲವೆ?

**1. Gita Press,** Gorkhpur. Pin: 273 005. Uttar Pradesh. India. Telephone: 0551 2333030/2334721 ಇದು ಅವರ ಮುಖ್ಯ ಕಾರ್ಯಾಲಯದ ವಿಳಾಸ. ಎಲ್ಲ ಮುಖ್ಯ ರಾಜ್ಯಗಳಲ್ಲೂ ಅವರ ಶಾಖೆಗಳಿವೆ. ಹಿಂದಿಯಲ್ಲಲ್ಲದೆ, ಕನ್ನಡ, ತೆಲುಗು, ತಮಿಳು, ಮರಾಠಿ, ಬಂಗಾಳಿ ಮುಂತಾದ ಬಹಳಷ್ಟು ಭಾಷೆಗಳಲ್ಲಿ ಉಪನಿಷತ್ ಪುಸ್ತಕಗಳನ್ನು ಪ್ರಕಟಿಸಿರುವ ಹೆಮ್ಮೆ ಇವರದು.

**2. ಸತ್ಸಾಹಿತ್ಯ ಪ್ರಕಾಶನ,** 'ವಿಪುಲ' 28/16, ಬೀ. ಜೀ. ಖೇರ ಮಾರ್ಗ, ಮಾಲಾವರ ಹಿಲ್, ಮುಂಬಯಿ – 400 006. ದೂರವಾಣಿ: 022–23682055

ಇಲ್ಲಿ ಶ್ರೀ ಸ್ವಾಮಿ ಅಖಂಡಾನಂದ ಸರಸ್ವತಿ ಸ್ವಾಮಿಗಳ ಹಿಂದಿ ವ್ಯಾಖ್ಯಾನವುಳ್ಳ ಉಪನಿಷತ್ ಗ್ರಂಥಗಳು ಲಭ್ಯವಿವೆ. ಶ್ರೀಸ್ವಾಮಿಗಳ ಅದ್ಭುತ ವಿವರಣೆಯು ಬಹುಜನ ಪ್ರಿಯವಾದುದು. ಕಾಲಿದಾಸನ ಕಾವ್ಯಗಳಿಂದ ಹಿಡಿದು ಸೂರದಾಸ, ಕಬೀರದಾಸ ದೋಹೆಗಳ ವರೆಗಿನ ಸಕಲ ಮೌಲಿಕ ನುಡಿಗಳನ್ನು ಅಳವಡಿಸಿಕೊಂಡ ವ್ಯಾಖ್ಯಾನ ಅವರದು. ಸ್ವಾಮಿಗಳ ಅಪಾರ ಪಾಂಡಿತ್ಯ ಹಾಗೂ ತಿಳಿಯ ಹೇಳುವ ಕಲೆಗೆ ಕನ್ನಡಿಯಂತಿರುವ ಪುಸ್ತಕಗಳಿವು. ಹಿಂದಿ ಬಲ್ಲವರು ಖಂಡಿತ ಓದಬೇಕಾದ ಹೊತ್ತಗೆಗಳು. ಪ್ರಶ್ನ, ತೈತ್ತಿರೀಯ ಹಾಗೂ ಐತರೇಯ ಉಪನಿಷತ್ತನ್ನುಳಿದು ಮಿಕ್ಕೆಲ್ಲ ಪ್ರಧಾನ ಉಪನಿಷತ್ತುಗಳನ್ನೂ ಶ್ರೀಗಳು ವ್ಯಾಖ್ಯಾನಿಸಿದ್ದಾರೆ. (ಶ್ವೇತಾಶ್ವರವನ್ನೂ ಕೂಡ). ಈ ಪ್ರಕಾಶನದ ಪುಸ್ತಕಗಳು ದೊರೆವ ಮತ್ತೊಂದು ವಿಳಾಸ–

**3. ಸ್ವಾಮಿ ಶ್ರೀಅಖಂಡಾನಂದ ಪುಸ್ತಕಾಲಯ,** ಆನಂದ ಕುಟೀರ, ಮೋತೀ ಝೀಲ್, ವೃಂದಾವನ – 281121.
ದೂರವಾಣಿ : (0565)2540481, 2540487

**4. Advaita Ashrama,** 5, Dehi Entally Road,
Kolkatta 700 014, West Bengal, India.
Ph: 91-033-2284 0210, 2289 0898, 2286 6450
& 2286 6483 Email: mail@advaitaashrama.org.

ಇಲ್ಲಿ ಶ್ರೀಮತ್ ಸ್ವಾಮಿ ಗಂಭೀರಾನಂದ ಮಹಾರಾಜರಿಂದ ಆಂಗ್ಲಾನುವಾದಗೊಂಡ ''Eight Upanishads''ಎಂಬ ಎರಡು ಸಂಪುಟಗಳ ಗ್ರಂಥವು ಸಾಧಕಸ್ತರದಲ್ಲೂ ವಿದ್ವಾಂಸವಲಯದಲ್ಲೂ ಹೆಸರುವಾಸಿಯಾದುದು. ಪೂಜ್ಯರದ್ದೇ ಛಾಂದೋಗ್ಯೋಪನಿಷತ್ತು ಮತ್ತು ಶ್ವೇತಾಶ್ವತರೋಪನಿಷತ್ತು ಪ್ರತ್ಯೇಕ ಪುಸ್ತಕಗಳಾಗಿ ಲಭ್ಯವಿವೆ.

ಇದೇ ಪ್ರಕಾಶನದ ಬೃಹದಾರಣ್ಯಕೋಪನಿಷತ್ತು ಶ್ರೀಮತ್ ಸ್ವಾಮಿ ಮಾಧವಾನಂದರಿಂದ ಆಂಗ್ಲಕ್ಕೆ ತರ್ಜುಮೆಗೊಂಡದ್ದು, ಇದೊಂದು ಅದ್ವಿತೀಯವಾದ ಕೃತಿ ಎಂಬುದು ಬಲ್ಲಿದರ ಹೇಳಿಕೆ.




೨೦. ಕಠೋಪನಿಷತ್ ೨.೩.೪

೨೧. ಅಂದರೆ ಆತ್ಮತತ್ತ್ವವನ್ನು ಅಥವಾ ಭಗವತ್ ತತ್ತ್ವವನ್ನು ಎಂದರ್ಥ. ಆತ್ಮ ಬ್ರಹ್ಮ ಭಗವಂತ ದೇವರು ಎಂಬ ಈ ಶಬ್ದಗಳಿಗೆಲ್ಲ ಅರ್ಥ ಒಂದೇ ಎಂದು ತಿಳಿಯಬೇಕು. ವಸ್ತುತಃ ಶಾಸ್ತ್ರದ ಪ್ರಕಾರ ಇವುಗಳಲ್ಲಿ ಸೂಕ್ಷ್ಮ ಅರ್ಥಭೇದ ಇದೆ ಎನ್ನುತ್ತಾರೆ ವಿದ್ವಾಂಸರು. ಅದು ನಿಜವೇ ಆದರೂ ಸಾಮಾನ್ಯ ಜನರ ದೃಷ್ಟಿಯಲ್ಲಿ ಇವುಗಳೆಲ್ಲ ಒಂದೇ ದೇವರನ್ನು ಸೂಚಿಸುವ ಬೇರೆ ಬೇರೆ ಶಬ್ದಗಳಿವೆ. ಆದ್ದರಿಂದ ಈ ಲೇಖನದಲ್ಲೂ ಈ ಶಬ್ದಗಳನ್ನು ಪರ್ಯಾಯ ಪದಗಳನ್ನಾಗಿಯೇ ಬಳಸಲಾಗಿದೆ.

೨೨. ಕಠೋಪನಿಷತ್ ೧.೩.೧೪




**5. ಶ್ರೀರಾಮಕೃಷ್ಣ ಆಶ್ರಮ,** ಯಾದವಗಿರಿ, ಮೈಸೂರು –570020 ಫೋನ್: 0821–2412424, 2417444

ಸ್ವಾಮಿ ಆದಿದೇವಾನಂದರು ಪ್ರಮುಖ ಉಪನಿಷತ್ತುಗನ್ನು ಶಾಂಕರಭಾಷ್ಯವನ್ನು ಆಧರಿಸಿ ಪ್ರತಿಪದಾರ್ಥ, ಅನುವಾದ, ಟಿಪ್ಪಣಿ ಗಳೊಂದಿಗೆ ವಿವರಿಸಿರುವ ಕೃತಿಗಳನ್ನು ಮೈಸೂರು ಆಶ್ರಮವು ಪ್ರಕಟಿಸಿದೆ. ಇದರೊಂದಿಗೆ ಸ್ವಾಮಿ ಸೋಮನಾಥಾನಂದರ **'ಉಪನಿಷತ್ ಭಾವಧಾರೆ'** ಎಂಬ ಗ್ರಂಥ ಎಲ್ಲ ಪ್ರಮುಖ ಉಪನಿಷತ್ತುಗಳ ಸರಳ ಅನುವಾದವನ್ನು ಹೃದಯಂಗಮವಾಗಿ ನೀಡಿದೆ.

**6. ಅಧ್ಯಾತ್ಮ ಪ್ರಕಾಶ ಕಾರ್ಯಾಲಯ,** ಹೊಳೆನರಸೀಪುರ, ಹಾಸನ–573211 ಫೋನ್: 91–8175–273820

ಇಮೇಲ್: Email: secretary@adhyatmaprakasha.org

ಇದು ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳಿಂದ ಪ್ರತಿಷ್ಠಾಪಿತವಾದ ಸಂಸ್ಥೆ. ಶಾಂಕರವೇದಂತಪ್ರಚಾರ ಕ್ಷೇತ್ರದಲ್ಲಿ ಶ್ರೀಗಳು ಗೈದ ಕಾರ್ಯ ಅದ್ಭುತವಾದದ್ದು. ಪ್ರಸ್ಥಾನತ್ರಯ ಭಾಷ್ಯವನ್ನು ಅನುವಾದಿಸಿ ಟಿಪ್ಪಣಿಗಳೊಂದಿಗೆ ಪ್ರಕಾಶಿಸಿ ದ್ದಲ್ಲದೆ, ನೂರಾರು ಗ್ರಂಥಗಳನ್ನು ಹೊರತಂದು ವೇದಾಂತ ಪ್ರಚಾರಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ಮಹಾತ್ಮರು ಇವರು. ಕನ್ನಡ ನಾಡಿಗೆ ಪ್ರಾತಃಸ್ಮರಣೀಯರ ಕೊಡುಗೆ ಚಿರಸ್ಮರಣೀಯ ವಾದುದು. ಇವರ ಗ್ರಂಥಗಳು ದೊರೆಯುವ ಮತ್ತೂ ಎರಡು ವಿಳಾಸಗಳು ಹೀಗಿವೆ:

**i) ಅಧ್ಯಾತ್ಮ ಪ್ರಕಾಶ ಕಾರ್ಯಾಲಯ,** 68, 2ನೇ ಬ್ಲಾಕ್, ATL ರಸ್ತೆ, 6ನೇ ಮುಖ್ಯರಸ್ತೆ, ತ್ಯಾಗರಾಜನಗರ, ಬೆಂಗಳೂರು 5690 028 ಫೋನ್: 080 2676 5548

**ii) ವಿವೇಕಹಂಸ ಪ್ರಕಾಶನ,** ಗೋಖಲೆ ಬಸವನಗುಡಿ ರಸ್ತೆ, ಬೆಂಗಳೂರು – 560 019 ಫೋನ್: 3294 9378

**6. Motilal Banarsidas Publishers Private Limited,**
A-44, Naraiana Industria Are, Phase – I,
New Delhi – 110 028 (INDIA)
Tel: (91-11) 25795180, 25792734, 25793423,
Email: web@mlbd.com



# ಭಗವದ್ಗೀತೆ : ಸಾಧಕರ ಅತ್ಯುತ್ತಮ ಕೈಪಿಡಿ

ಡಾ. ಕೆ.ಎಲ್.ಪ್ರಸನ್ನಾಕ್ಷೀ



ಸನಾತನ ಸಂಸ್ಕೃತಿಯ ಅತಿಶ್ರೇಷ್ಠ ಗ್ರಂಥವೆನಿಸಿರುವ ಭಗವದ್ಗೀತೆಯು ಸಾಕ್ಷಾತ್ ಭಗವಂತನೇ ಹೇಳಿದ ಉಪದೇಶಗಳ ತವನಿಧಿಯಾಗಿದೆ. ಆಧ್ಯಾತ್ಮಿಕ ಸಾಧಕರೆಲ್ಲರಿಗೆ ಅತ್ಯಂತ ಪವಿತ್ರವೂ, ಮಾರ್ಗದರ್ಶಿಯೂ ಆಗಿರುವ ಈ ಸುಪ್ರಸಿದ್ಧ ಯೋಗ ಗ್ರಂಥವನ್ನು ಕುರಿತು ವಿವರಿಸಿರುವ ಲೇಖಕಿ ಸಂಸ್ಕೃತ ವಿದ್ವಾಂಸರು. ನಿವೃತ್ತ ಕಾಲೇಜು ಪ್ರಾಂಶುಪಾಲರಾಗಿರುವ ಇವರು ಹಲವು ಸಂಸ್ಕೃತ ಕೃತಿಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಈ ಪತ್ರಿಕೆಯಲ್ಲಿ ಇವರ ಹಲವಾರು ಲೇಖನಗಳು ಪ್ರಕಟವಾಗಿವೆ.

**ಈ** ಶರೀರ ಇರುವುದು ಸುಖವನ್ನು ಅನುಭವಿಸಲು ಎಂಬುದು ಮಾನವನ ಭಾವನೆ. ಆದರೆ **'ಶೀರ್ಯತೇ ಇತಿ ಶರೀರಂ'** – ಎಂದು 'ಶರೀರ' ಶಬ್ದವೇ ಅದು ಪ್ರತಿಕ್ಷಣದಲ್ಲಿ ಕ್ಷಯಿಸುತ್ತಾ ನಾಶವಾಗುತ್ತಾ ಹೋಗುವಂತಹುದು ಎಂದು ತಿಳಿಸುತ್ತದೆ. ಆದುದರಿಂದ ಶರೀರವನ್ನು ಧರ್ಮಸಾಧನೆಗೆ ವಿನಿಯೋಗಿಸಬೇಕು. ಅತ್ಯಂತ ದುರ್ಲಭವಾದ ಅದು ದೊರಕಿರುವಾಗ ಈ ಶರೀರವೆಂಬ ನೌಕೆಯನ್ನು ಉಪಯೋಗಿಸಿಕೊಂಡು ಸಂಸಾರ, ಹುಟ್ಟು-ಸಾವುಗಳ, ಚಕ್ರವನ್ನು ದಾಟಿಬಿಡಬೇಕು. ಯಾರು ಇದರ ಸದುಪಯೋಗ ಮಾಡಿಕೊಳ್ಳುವುದಿಲ್ಲವೋ ಅವನು ತನ್ನ ನಾಶವನ್ನು ತಾನೇ ಮಾಡಿಕೊಂಡಂತೆ.

ನೃದೇಹಮಾದ್ಯಂ ಸುಲಭಂ ಸುದುರ್ಲಭಂ।
ಪ್ಲವಂ ಸುಕಲ್ಪಂ ಗುರುಕರ್ಣಧಾರಂ।
ಯದಾನುಕೂಲೇನ ನಭಸ್ವತೇರಿತಂ।
ಪುಮಾನ್ ಭವಾಬ್ಧಿಂ ನ ತರೇತ್ ಸ ಆತ್ಮಹಾ॥

ಎಂದು ಭಾಗವತ *(೧೧-೨೦-೧೭)* ಹೇಳುತ್ತದೆ. ಹಾಗೆಂದರೆ ಎಲ್ಲರೂ ಕಾಷಾಯ ಧರಿಸಿ ಕಾಡು ಸೇರಿ ತಪಸ್ಸು ಮಾಡಬೇಕೆ ?! ಖಂಡಿತ ಇಲ್ಲ. ಸೃಷ್ಟಿಸಂಕಲ್ಪವೇ ಅದಲ್ಲ. ಸೃಷ್ಟಿಯಾದುದರ ರಕ್ಷಣೆ ಪಾಲನೆ ಪೋಷಣೆಗಾಗಿ, ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಸಂನ್ಯಾಸ – ಎಂದು ಆಶ್ರಮ ವ್ಯವಸ್ಥೆಯನ್ನು, ಸೃಷ್ಟಿರಹಸ್ಯದ ಮರ್ಮವನ್ನರಿತ ಧರ್ಮದರ್ಶಿ ಋಷಿಮುನಿಗಳು, ಕೊಡುಗೆಯಾಗಿ ಕೊಟ್ಟಿರುವುದೇ ಇದಕ್ಕೆ ನಿದರ್ಶನ. ಜೊತೆಗೆ ಮಹಾಭಾರತದಲ್ಲಿ ವೇದವ್ಯಾಸರೂ **'ಧರ್ಮಾರ್ಥಕಾಮಾಃ ಸಮಮೇವ ಸೇವ್ಯಾಃ'** *(ಮಹಾಭಾರತ, ಶಾಂತಿಪರ್ವ, ೧೬೭.೪೦)* ಎಂದು ಧರ್ಮ, ಅರ್ಥ, ಕಾಮ, ರೂಪ, ತ್ರಿವರ್ಗಗಳನ್ನು ಸಮಾನವಾಗಿಯೇ ಸೇವಿಸಬೇಕು ಎಂದು ತಿಳಿಸಿದ್ದಾರೆ. ಈ ತ್ರಿವರ್ಗದ ಉಪಯೋಗ ಹೇಗಾದಾಗ ಹೇಗಿದ್ದಾಗ ಅದು ತಾರಕವಾಗುತ್ತದೆ, ಯೋಗ್ಯವಾಗುತ್ತದೆ ಎಂಬ ಧರ್ಮಸೂಕ್ಷ್ಮಗಳನ್ನು ತಿಳಿಸಿಕೊಡುವುದಕ್ಕೆ ಪ್ರವೃತ್ತವಾಗಿರುವ ಕೃತಿ, **'ಭಗವದ್ಗೀತೆ.'** ಇದು ಸಂಸಾರಿ ಸಾಧು ಸಂನ್ಯಾಸಿ ಎಲ್ಲ ಬಗೆಯ ಸಾಧಕರಿಗೂ, ಸಮಾನವಾಗಿ ಅನ್ವಯವಾಗುವ ತತ್ತ್ವಬೋಧಕ, ಅನುಷ್ಠಾನ ಪ್ರೇರಕ ಕೃತಿಯಾಗಿದೆ.

ಶರೀರವನ್ನು ಪಡೆದು ದಿಗ್ವಿಜಯ ಪ್ರಯಾಣಕ್ಕೆ (ಅಂದರೆ ಮೇಲೆ ಹೇಳಿರುವಂತೆ ಶರೀರಪ್ರಾಪ್ತಿಯ ಸಾರ್ಥಕತೆಯ ಸಾಧಕತೆಗೆ) ಹೊರಟಿರುವ (ಪ್ರಸ್ಥಾನ = ವಿಜಿಗೀಷೋಃ ಪ್ರಯಾಣಂ) ವ್ಯಕ್ತಿಗೆ ಅಗತ್ಯವಾದ ವಿಚಾರಗಳನ್ನು ಅನೇಕ ವೇದಾಂತ ಗ್ರಂಥ

ಗಳು ತಿಳಿಸಿಕೊಡುತ್ತವೆ. ಇಂತಹ ಗ್ರಂಥಗಳಲ್ಲಿ ಪ್ರಧಾನವಾಗಿ ಮೂರು ಗ್ರಂಥಗಳನ್ನು (ಸಮೂಹವನ್ನು) **'ಪ್ರಸ್ಥಾನತ್ರಯ'** ಎಂದು ವೇದಾಂತ-ವಿಜ್ಞಾನ-ಸುನಿಶ್ಚಿತಾರ್ಥರಾದ ತತ್ತ್ವವಿಮರ್ಶಕರು ವಿಭಾಗ ಮಾಡಿದ್ದಾರೆ. ಅವು ವೇದಗಳಲ್ಲಿ ಪ್ರತಿಪಾದಕವಾದ ತತ್ತ್ವಗಳನ್ನು ಸಂಗ್ರಹವಾಗಿ ತಿಳಿಸುವ 'ಬ್ರಹ್ಮಸೂತ್ರ'ಗಳು, ವೇದಗಳ ಉಪಸಂಹಾರರೂಪವಾದ 'ಉಪನಿಷತ್ತು'ಗಳು ಮತ್ತು ಭಗವದ್ಗೀತೆ.

ಭಗವದ್ಗೀತೆ ವ್ಯಾಸರು ಬರೆದಿರುವ ಮಹಾಭಾರತದ ಭೀಷ್ಮ ಪರ್ವದ ಒಂದು ಭಾಗ. ಈ ಪರ್ವದ ೧೩ನೇ ಅಧ್ಯಾಯದಿಂದ ೪೨ನೇ ಅಧ್ಯಾಯದವರೆಗಿನ ಭಾಗವನ್ನು ವ್ಯಾಸರು 'ಭಗವದ್ಗೀತಾ ಪರ್ವ' ಎಂದೇ ಹೆಸರಿಸಿದ್ದಾರೆ. ಆದರೆ ಈ ಗೀತಾಪರ್ವದ ೨೫ನೇ ಅಧ್ಯಾಯದಿಂದ ೪೨ನೇ ಅಧ್ಯಾಯದವರೆಗಿನ ಭಾಗವನ್ನು 'ಭಗವದ್ಗೀತೆ' ಎಂದು ಪರಿಗಣಿಸಿ, ಮೊದಲಿಗೆ ಶ್ರೀ ಶಂಕರಾಚಾರ್ಯರು ಇದಕ್ಕೆ ಭಾಷ್ಯ ಬರೆದಿದ್ದಾರೆ. ಆ ನಂತರ ಎಷ್ಟೋ ಗುರುಗಳು, ಸಾಧಕರು, ಸಂನ್ಯಾಸಿಗಳು ತಮ್ಮ ತಮ್ಮ ಅನುಭವದ ಆಧಾರದ ಮೇಲೆ ಈ ಭಾಗಕ್ಕೆ ಅರ್ಥವಿವರಣೆಗಳನ್ನು ನೀಡಿದ್ದಾರೆ.

ತಾನು ನಿರ್ವಹಿಸಬೇಕಾಗಿದ್ದ ಕರ್ತವ್ಯಕ್ಕೆ ಧರ್ಮದ ಬಣ್ಣ ಹಚ್ಚಿ ಕರ್ತವ್ಯದಿಂದ ಜಾರಿಕೊಳ್ಳಲು ಬಯಸಿದ ಅರ್ಜುನನಿಗೆ – ''ಈ ಕಶ್ಮಲ ಎಲ್ಲಿಂದ ಬಂದು ನಿನ್ನನ್ನು ಸೇರಿತು? ಈ ಕ್ಷುದ್ರವಾದ ಹೃದಯದೌರ್ಬಲ್ಯವನ್ನು ಬಿಡು, ದುಃಖಪಡಬೇಕಿಲ್ಲದ್ದಕ್ಕೆ ದುಃಖಿಸುತ್ತಾ ದೊಡ್ಡ ವಿದ್ವಾಂಸನಂತೆ ಮಾತನಾಡುತ್ತಾ ಇದ್ದೀಯೆ, ಏಳು, ಎದ್ದು ಮೈ ಕೊಡವಿಕೊಂಡು ನಿನ್ನ ಕರ್ತವ್ಯದಲ್ಲಿ ನಿನ್ನನ್ನು ತೊಡಗಿಸಿಕೋ'' ಎಂದು ನಿಜವಾದ ಧರ್ಮದ ಸರಿಯಾದ ವ್ಯಾಖ್ಯೆಯನ್ನು ತಿಳಿಸಲು ಶ್ರೀಕೃಷ್ಣ ಆರಂಭಿಸುತ್ತಾನೆ. ಇಲ್ಲಿ ಕೃಷ್ಣ ಅರ್ಜುನನನ್ನು ಕುರಿತು ಆಡಿದ ಮಾತುಗಳು ನಿತ್ಯಸತ್ಯಗಳು. ಅದು ಎಲ್ಲರಿಗೂ ಎಲ್ಲಾ ಕಾಲಕ್ಕೂ ಅನ್ವಯವಾಗುವಂತಹವು.

ಇಲ್ಲಿ ಪ್ರವೃತ್ತಿ ಧರ್ಮವೂ ಇದೆ. ನಿವೃತ್ತಿಧರ್ಮವೂ ಇದೆ. ಸೃಷ್ಟವಾದ ವಿಶ್ವಾಂಡದ ಸುಸ್ಥಿತಿಗೆ ಈ ಎರಡು ಧರ್ಮಗಳೂ ಅತ್ಯವಶ್ಯಕವಾದವು. ಪ್ರವೃತ್ತಿಯ ಮೂಲಕ ಆರ್ಥಿಕ, ರಾಜಕೀಯ, ಸಾಮಾಜಿಕ ವ್ಯವಸ್ಥೆಗಳ ಉತ್ತಮತೆ ಸಾಧಿತವಾಗಿ, ಸ್ವಸ್ಥ ಸಮಾಜದ ನಿರ್ಮಾಣವಾಗಿ ಸೃಷ್ಟವಾದ ಈ ಪ್ರಪಂಚವು ಸುಕ್ಷೇಮವಾಗಿ ನಿರಂತರ ಸುರಕ್ಷಿತವಾಗಿರುತ್ತದೆ. ನಿವೃತ್ತಿಯ ಮೂಲಕ ವ್ಯಕ್ತಿ ಮೌಲ್ಯಾಧಾರಿತ ಜೀವನವನ್ನು ನಡೆಸಿ ತನ್ನ ಶ್ರೇಯಸ್ಸನ್ನು ಸಾಧಿಸಿಕೊಂಡು ಬಾಳಿನಾಟದ ಸಾರ್ಥಕತೆಯನ್ನು ಹೊಂದಲು ಸಾಧ್ಯವಾಗುತ್ತದೆ. ಹೀಗೆ ಪ್ರವೃತ್ತಿ ನಿವೃತ್ತಿ ಧರ್ಮಗಳ ಪರಿಪಾಲನೆಯಿಂದ ಸಮಷ್ಟಿ-ವ್ಯಷ್ಟಿ ಹಿತ ಸಾಧಿತವಾಗುತ್ತದೆ.

### ಕೃತಿಯ ಸಾರ

ಇಲ್ಲಿ ಪ್ರತಿಯೊಂದು ಅಧ್ಯಾಯವನ್ನೂ 'ಸಾಂಖ್ಯಯೋಗ' 'ಕರ್ಮಯೋಗ' ಮುಂತಾಗಿ ಬೇರೆ ಬೇರೆ ಯೋಗಗಳೆಂದು ಹೆಸರಿಸಲಾಗಿದೆ. ಆದರೂ ಒಟ್ಟು ಹದಿನೆಂಟು ಅಧ್ಯಾಯಗಳಲ್ಲಿ ಪ್ರತಿಪಾದಿತವಾಗಿರುವ ತತ್ತ್ವಸಮಾನತೆಯನ್ನಾಧರಿಸಿ ಕರ್ಮಯೋಗ, ಜ್ಞಾನಯೋಗ, ಧ್ಯಾನಯೋಗ, ಭಕ್ತಿಯೋಗ, ಎಂದು ಇದನ್ನು ನಾಲ್ಕು ಪ್ರಮುಖ ವಿಭಾಗವನ್ನಾಗಿ ಜ್ಞಾನಿಗಳು ವಿಂಗಡಿಸಿದ್ದಾರೆ. ಎಂದ ಮಾತ್ರಕ್ಕೆ ಆ ಯೋಗಗಳು ಆಯಾಯ ತತ್ತ್ವ ಪ್ರತಿಪಾದನೆಗೇ ಸೀಮಿತವಾಗಿದೆ ಎಂದೇನಿಲ್ಲ. ಎಲ್ಲಾ ಯೋಗಗಳಲ್ಲಿ ಎಲ್ಲಾ ಅಧ್ಯಾಯಗಳಲ್ಲಿ ಎಲ್ಲಾ ವಿಚಾರಗಳ ಅಂಶಗಳೂ ಸಂದರ್ಭೋಚಿತವಾಗಿ, ಸೂಕ್ತವಾಗಿ ಸಂಮಿಳಿತಗೊಂಡಿವೆ. ಹಾಗಾಗಿ ಯಾವುದೊಂದು ಅಧ್ಯಾಯವೂ ಪೃಥಕ್ಕಾಗಿ ಒಂದೇ ಯೋಗದೊಡನೆ ಸಂಬಂಧವನ್ನು ಹೊಂದಿಲ್ಲ. ಪ್ರತಿಯೊಂದು ಅಧ್ಯಾಯದಲ್ಲಿ ಪ್ರತಿಪಾದಿತವಾಗಿರುವ ತತ್ತ್ವವು ಉಳಿದವುಗಳಿಗೆ ಪೂರಕವೂ, ಪೋಷಕವೂ ಆಗಿ ಮೂಡಿ ಬಂದಿವೆ.

### ಕರ್ಮಯೋಗ

**'ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್'** *(೩.೫)* ಎಂಬಂತೆ ಯಾವ ಒಂದು ಜೀವಿಯೂ ಏನೂ ಮಾಡದೆ ಒಂದೇ ಒಂದು ಕ್ಷಣವೂ ಸುಮ್ಮನೆ ಇರಲಾರದು. ಹೀಗೆ ಮಾಡುವ ಕರ್ಮ ಯಾವ ರೀತಿ ಇದ್ದರೆ ಅದು ನಮ್ಮನ್ನು ಈ ಲೋಕಕ್ಕೇ ಕಟ್ಟಿ ಹಾಕುವುದಿಲ್ಲವೋ ಆ ರೀತಿ ಕರ್ಮ ಮಾಡಬೇಕು. ಆಗ ಅದು 'ಯೋಗ'ವಾಗುತ್ತದೆ. ಫಲದ ಅಪೇಕ್ಷೆ ಇಲ್ಲದೆ ಪಾಲಿಗೆ ಬಂದ ಹಾಗೂ ಶಾಸ್ತ್ರ , ಸಂಪ್ರದಾಯ, ಪರಂಪರೆಗಳು ವಿಧಿಸಿರುವ ಕರ್ಮ(ಕೆಲಸ)ಗಳನ್ನು ನಿರ್ವಂಚನೆಯಾಗಿ ನಿಷ್ಠೆಯಿಂದ ಮಾಡಬೇಕು. ಕೆಲಸ ಮಾಡುವುದೇ ಫಲಕ್ಕಾಗಿ, ಅದು ಹೇಗೆ ಫಲ ಬೇಡ ಅನ್ನುವುದು? ಹೌದು, ಬೀಜ ಮಣ್ಣು ಸೇರಿದ ಮೇಲೆ ಮೊಳಕೆಯೊಡೆದು, ಚಿಗುರಿ, ಹೂವು ಕಾಯಿ ಹಣ್ಣು ಆಗದೆ ಇರುವುದೇ! ಖಂಡಿತ ಆಗೇ ಆಗುವುದು. ಅಂತೆಯೇ ಕೆಲಸ ಮಾಡಿದ ಮೇಲೆ ಫಲ ಸಿಗದೆ ಇರುವುದಿಲ್ಲ, ಅದರ ಹಂಬಲದಲ್ಲಿ ಅದೇ ಉದ್ದೇಶಕ್ಕಾಗಿ ಬೇರೆ ಎಲ್ಲಾ ಧರ್ಮಗಳನ್ನೂ ಮರೆತು ವ್ಯವಹಾರ ಮಾಡಬಾರದು ಅಷ್ಟೆ. ಜೊತೆಗೆ ಹೀಗೆ ಮಾಡಿದ ಕೆಲಸಕ್ಕೆ ಯೋಗ್ಯವಾದ ಫಲ ಏನು ಸಿಗುತ್ತದೆಯೋ – ಅದು ಸ್ತುತಿಯೋ-ನಿಂದೆಯೋ, ಕೀರ್ತಿಯೋ-ಅಪಕೀರ್ತಿಯೋ, ಪಾಪವೋ-ಪುಣ್ಯವೋ, ಐಶ್ವರ್ಯವೋ-ದಾರಿದ್ರ್ಯವೋ ... ಏನೋ ಅದನ್ನು ವಿಶ್ವಾಂಡದ ಮೂಲಸ್ರೋತವಾದ ಪರತತ್ತ್ವಕ್ಕೆ ಅರ್ಪಣೆ ಮಾಡಿ ಅನುಭವಿಸಬೇಕು – ಎಂಬುದು ಈ ಯೋಗದ ಸಾರ.

ಶ್ರೀರಾಮಕೃಷ್ಣರೂ, 'ಹೇ ತಾಯಿ ತೆಗೆದುಕೋ ನಿನ್ನ ಪಾಪವನ್ನು, ತೆಗೆದುಕೋ ನಿನ್ನ ಪುಣ್ಯವನ್ನು; ತೆಗೆದುಕೋ ನಿನ್ನ ಜ್ಞಾನವನ್ನು, ತೆಗೆದುಕೋ ನಿನ್ನ ಅಜ್ಞಾನವನ್ನು..' ಎಂದು ಧರ್ಮ-ಅಧರ್ಮ, ಶುಚಿ-ಅಶುಚಿ ಎಲ್ಲವನ್ನೂ ಪರಾತ್ಪರೆಯಾದ ತಾಯಿಯಲ್ಲಿ ಅರ್ಪಿಸುತ್ತಾ ತಮ್ಮ ಜೀವನದಲ್ಲಿ ಈ ಆದರ್ಶವನ್ನು ಅನುಷ್ಠಾನಮಾಡಿ ಮಾರ್ಗದರ್ಶಕರಾಗಿದ್ದಾರೆ.

ಈ ರೀತಿ ಕರ್ಮ ಮಾಡಿದರೆ ಅದು ನಮ್ಮನ್ನು ಈ ಸಂಸಾರ ಚಕ್ರದಲ್ಲಿ ಸಿಲುಕಿಸದೆ ನಮ್ಮ ಪರಂಧಾಮಕ್ಕೇ ನಮ್ಮನ್ನು ಸೇರಿಸುತ್ತದೆ.

ಸಾಧಾರಣವಾಗಿ ಪ್ರತಿ ಜೀವಿಯ ಪ್ರತಿ ಚಟುವಟಿಕೆಯ ಹಿಂದೆ ಒಂದು ಉದ್ದೇಶ, ಒಂದು ಪ್ರಯೋಜನ ಇದ್ದೇ ಇರುತ್ತದೆ. ಎಷ್ಟೋ ಸಲ ಅವುಗಳನ್ನು ಸಾಧಿಸುವ ಹಂಬಲಕ್ಕೆ ಬಿದ್ದು ತನ್ನ ಬುದ್ಧಿ, ಶಕ್ತಿ, ಸಾಮರ್ಥ್ಯ ಎಲ್ಲವನ್ನೂ ಅದಕ್ಕಾಗಿ ವಿನಿಯೋಗಿಸಿ ತನ್ನೆಲ್ಲವನ್ನೂ ಕಳೆದುಕೊಳ್ಳಲು ಮಾನವ ಸಿದ್ಧನಿರುತ್ತಾನೆ. ಇಂತಹ ಮಾನವ ಸಹಜ ಆಸಕ್ತಿ, ಆಕರ್ಷಣೆಯಿಂದ ನಡೆಯುವ ಚಟುವಟಿಕೆಗಳನ್ನು ತಡೆಗಟ್ಟಲು ಸಾಧ್ಯವಿಲ್ಲ. ಆದುದರಿಂದ ಅವುಗಳನ್ನು ಯಜ್ಞಭಾವದಲ್ಲಿ ಆಚರಿಸಬೇಕು, ಸ್ವೀಕರಿಸಬೇಕು, ಅನುಭವಿಸಬೇಕು. ಹಾಗಾದಾಗ ಅದು ಬಂಧಕವಾಗುವುದಿಲ್ಲ ಎನ್ನುತ್ತದೆ ಗೀತೆ.

ಕಾಮಾಸಕ್ತಿ ಸಕಲ ಜೀವಿಗಳಿಗೆ ಸಾಧಾರಣವಾದುದು. ಇದನ್ನು ಪಿತೃಗಳ (ತಂದೆ, ತಾಯಿ, ಹಿರಿಯರ) ಪೂಜೆಗೆ, ಸೇವೆಗೆ, ತಮ್ಮನ್ನು ಈ ಸ್ಥಿತಿ ತಲುಪುವಂತೆ ಸಾಕಿ ಸಲಹಿ ಪೋಷಿಸಿದುದಕ್ಕೆ ಅವರಿಗೆ ಕೃತಜ್ಞತೆ ಸಲ್ಲಿಸಲು, ಉಪಯೋಗವಾಗುವಂತಹ ಚಟುವಟಿಕೆಗೆ ಮತ್ತು ಸಂತತಿಯ ಮುಂದುವರಿಕೆಗೆ ಉಪಯೋಗಿಸಿಕೊಳ್ಳಬೇಕು. ಇದರಿಂದ ಇಹಲೋಕದ ಜೀವನವು ಹಿತಕರವೂ ಪ್ರೇಮಮಯವೂ ಸುಖಕರವೂ ಆಗುವುದು. ಅಲ್ಲದೆ ಗತಿಸಿದ ಪಿತೃಗಳಿಗೆ, ಮೇಲಿನ ಲೋಕಗಳಲ್ಲಿನ ಅವರ ಸ್ಥಿತಿ ಆನಂದದಾಯಕವೂ ತೃಪ್ತಿಕರವೂ ಆಗುವುದು. ಹೀಗೆ ನಡೆದುಕೊಳ್ಳುವುದು 'ಪಿತೃಯಜ್ಞ'. ಇಂದ್ರಾದಿ ದೇವತೆಗಳಿಂದ ಕೊಡಲ್ಪಟ್ಟ ಭೂಮಿ, ಮಳೆ-ಬೆಳೆ ದವಸಧಾನ್ಯಗಳಿಂದ ಹವಿಸ್ಸನ್ನು ಸಿದ್ಧಪಡಿಸಿ ಯಜ್ಞದಲ್ಲಿ ಅವುಗಳನ್ನು ಅರ್ಪಿಸಿ ದೇವತೆಗಳಿಗೆ ಕೃತಜ್ಞತೆ ಸಲ್ಲಿಸುವುದು, ಅವರನ್ನು ತೃಪ್ತಿಪಡಿಸುವುದು 'ದೇವಯಜ್ಞ'. ಗುರುಮುಖೇನ ಕಲಿತ ವಿದ್ಯೆಯನ್ನು ಸ್ವತಃ ತಾನೂ ಅಭ್ಯಾಸ ಮಾಡುತ್ತಾ ತನ್ನ ಜ್ಞಾನದ ಆಳ ವಿಸ್ತಾರಗಳನ್ನು ಹೆಚ್ಚಿಸಿಕೊಳ್ಳುತ್ತಾ, ಮುಂದಿನ ಪೀಳಿಗೆಗೆ ವಿದ್ಯೆಯನ್ನು ಕಲಿಸಿಕೊಡುತ್ತಾ ಜ್ಞಾನದೀವಿಗೆಯನ್ನು ಬೆಳಗಿಸಿ ವಿದ್ಯಾದೀವಿಗೆ ನಂದದಂತೆ ನಿತ್ಯನಿರಂತರ ಬೆಳಗುವಂತೆ ಮಾಡುವುದು 'ಋಷಿಯಜ್ಞ'. ಸಹಜೀವಿಗಳಾದ ನೆರೆಹೊರೆ ಬಂಧು ಬಾಂಧವರಲ್ಲೆಲ್ಲಾ ಪ್ರೇಮ ವಾತ್ಸಲ್ಯ ಪೂರ್ಣವ್ಯವಹಾರ ಅವರ ಕಷ್ಟಸುಖಗಳಲ್ಲಿ ಸಹಭಾಗಿತ್ವ, ಅವರ ನೆರವಿಗೆ ಧಾವಿಸುವ ಮನಃ ಪ್ರವೃತ್ತಿ 'ನೃಯಜ್ಞ'. ಸಕಲಜೀವಿಗಳಿಗೂ ಬದುಕುವ ಹಕ್ಕು ಇದೆ. ಭೂಮಂಡಲದ ವಾತಾವರಣದ ಹಾಗೂ ಸಮಾಜದ ವ್ಯವಸ್ಥಿತ ಸಮತೋಲನ ಕಾಯ್ದುಕೊಳ್ಳುವಿಕೆಯಲ್ಲಿ ಸೃಷ್ಟವಾದ ಎಲ್ಲಾ ಜೀವಿಗಳ (ಚರಾಚರ) ಪಾತ್ರವೂ ಗಣನೀಯವಾಗಿರುತ್ತದೆ. ಯಾವುದೂ ವ್ಯರ್ಥವಲ್ಲ, ಭಯಕಾರಿಯೂ ಅಲ್ಲ, ಆದುದರಿಂದ, ನಾಯಿ, ಕೋಳಿ, ಬೆಕ್ಕು, ಕುರಿ, ಮೇಕೆ, ಹಂದಿ, ಹಸು, ನರಿ, ಹುಲಿ, ಸಿಂಹ... ಹೀಗೆ ಎಲ್ಲಾ ಜೀವಿಗಳ ಮೇಲೆ ದಯೆ ಅನುಕಂಪೆ ಹೊಂದಿ ಅವುಗಳ ಉಳಿವಿಗೆ ಬದುಕಿಗೆ ಪೋಷಕವಾಗುವಂತಹ ಚಟುವಟಿಕೆಯನ್ನು ಹೊಂದಿರುವುದು 'ಭೂತಯಜ್ಞ'.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಂ ಏಷ ವೋಽಸ್ತ್ವಿಷ್ಟಕಾಮಧುಕ್॥** *(೩:೧೦)*

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥** *(೩.೧೪)*

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರ ಸಮುದ್ಭವಂ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥** *(೩.೧೫)*

ಹೀಗೆ ಸಂಪೂರ್ಣ ಸೃಷ್ಟಿಚಕ್ರ ಯಜ್ಞದ ಆಧಾರದ ಮೇಲೆ ನಿಂತಿದೆ. ಜೀವಿಗಳನ್ನು ಸೃಷ್ಟಿಸುವಾಗ ಅವುಗಳ ಜೊತೆಯಲ್ಲೇ ಯಜ್ಞವನ್ನು ಸೃಷ್ಟಿಕರ್ತ ಸೃಷ್ಟಿಸಿದ. ''ಯಜ್ಞದಿಂದ ಜೀವಿಗಳ ಪೀಳಿಗೆ ಮುಂದುವರೆಯಲಿ. ಈ ಯಜ್ಞವು ನೀವು ಬಯಸಿದ್ದನ್ನು ಕೊಡಲಿ, ಅನ್ನದಿಂದ ಪ್ರಾಣಿಗಳು, ಮಳೆಯಿಂದ ಅನ್ನ, ಯಜ್ಞದಿಂದ ಮಳೆ, ಕರ್ಮದಿಂದ ಯಜ್ಞ, ಬ್ರಹ್ಮದಿಂದ ಕರ್ಮ, ಅವ್ಯಯವಾದ ಪರಾತ್ಪರ ತತ್ತ್ವದಿಂದ ಬ್ರಹ್ಮ, - ಹೀಗೆ ಎಲ್ಲವೂ 'ಯಜ್ಞ'ವನ್ನೂ, 'ಯಜ್ಞ'ವು ಎಲ್ಲವನ್ನೂ ವ್ಯಾಪಿಸಿಕೊಂಡಿದೆ.''

ಹೀಗೆ ಸರ್ವವ್ಯಾಪಕ ತತ್ತ್ವವು 'ಯಜ್ಞ'ದಲ್ಲಿ ನೆಲೆನಿಂತಿದೆ ಎಂದು ತಿಳಿಸುತ್ತಾ ಮಾನವ ಜೀವನವೇ ಯಜ್ಞಮಯವಾದುದು, ಪೂಜ್ಯತಮವಾದುದು ಎಂದು ಭಗವದ್ಗೀತೆ ಪ್ರತಿಪಾದಿಸುತ್ತದೆ. ಆದುದರಿಂದ 'ಯಜ್ಞ'ದೃಷ್ಟಿ ಮರೆತ ಸ್ವಾರ್ಥದ ಬಾಳು ಮಾನವ ಜೀವನದ ಗುರಿಯಾಗಬಾರದು. ಭಗವಂತನಿಂದ ಸೃಷ್ಟಿಯಲ್ಲಿ ಸೃಷ್ಟವಾದುದೆಲ್ಲವನ್ನೂ ತನ್ನ ಭೋಗಕ್ಕೇ ತನ್ನ ಉಪಯೋಗಕ್ಕೆ ಇರುವುದು ಎಂಬಂತೆ *ಸ್ವಾರ್ಥಪರತೆಯಿಂದ ಭೋಗಿಸುವವನು 'ಕಳ್ಳ'ನೇ.* **'ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ'** *(೩.೧೨)* ಭಗವಂತ ಕೊಟ್ಟಿರುವುದು ಹಂಚಿಕೊಳ್ಳುವುದಕ್ಕೆ. ಕೊಡಬೇಕು, ದಾನಮಾಡಬೇಕು. ನಿರ್ಗತಿಕನಿಗೆ ಹಣ, ನಿರಕ್ಷರಿಗೆ ಅಕ್ಷರಜ್ಞಾನ, ರೋಗಿಗೆ ಔಷಧಿ ಪಥ್ಯ, ಹಸಿದವನಿಗೆ ಅನ್ನ... ಏನು ನಮ್ಮ ಬಳಿ ಇದೆಯೋ ಅದನ್ನು ಅರ್ಪಿತಭಾವದಿಂದ, *ಪ್ರೇಮಭಾವದಿಂದ ಕೊಡಬೇಕು.* ಹೀಗೆ 'ಯಜ್ಞ' ದೃಷ್ಟಿಯಿಂದ ಮಾಡಿದ ಕರ್ಮ ಪರಮಜ್ಞಾನವನ್ನೇ ಕೊಡುತ್ತದೆ - **'ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ'** *(೪.೩೩).* ಯಜ್ಞಭಾವದಿಂದ ಮಾಡಿದ ಕರ್ಮ ಸಂಸಾರ ಚಕ್ರಕ್ಕೆ ಮನುಷ್ಯನನ್ನು ಕಟ್ಟಿಹಾಕಲಾರದು.

ಒಳ್ಳೆಯ ಕೆಲಸವನ್ನೇ ಮಾಡುತ್ತಿರಬಹುದು - ದಾನ ಧರ್ಮ ಯಾಗ ಯಜ್ಞ ವೇದಾಂತಜ್ಞಾನದಾನ ಮಾಡುತ್ತಿರಬಹುದು, ಅಲ್ಲಿ ಹಾರ-ತುರಾಯಿ ಧನಸಮೃದ್ಧಿ ಸನ್ಮಾನ ಕೀರ್ತಿಗಳ ಅಭಿಲಾಷೆಯಿದ್ದರೆ, ಯಜ್ಞಭಾವ ಅರ್ಪಿತಭಾವ ಇಲ್ಲದೆ ಇದ್ದರೆ, ಅದು ನಮ್ಮನ್ನು ಮತ್ತೆ ಮತ್ತೆ ಈ ಚಕ್ರದಲ್ಲಿ ಬೀಳಿಸುತ್ತದೆ: **'ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮ ಬಂಧನಃ'** *(೩.೯).* ಅದೇ ಯಜ್ಞಭಾವದಲ್ಲಿ ಮಾಡಿದ ಕರ್ಮವು (ಏನು ಮಾಡುವೆಯೋ, ಏನು ಊಟಮಾಡುವೆಯೋ, ಅನು

ಭವಿಸುವೆಯೋ, ಯಾಗ ಯಜ್ಞ ಮಾಡುವೆಯೋ, ದಾನ ತಪಸ್ಸು ಮಾಡುವೆಯೋ ಎಲ್ಲವನ್ನೂ ಆ ಪರಾತ್ಪರ ತತ್ತ್ವಕ್ಕೆ *(೯.೨೭)* ಅರ್ಪಿಸುವಿಕೆ) ವ್ಯಕ್ತಿಯನ್ನು ಸಕಲ ಬಂಧನಗಳಿಂದ ಮುಕ್ತನನ್ನಾಗಿ ಮಾಡುತ್ತದೆ : '**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವ ಕಿಲ್ಬಿಷೈಃ।**' *(೩.೧೩)*

ಆದುದರಿಂದಲೇ ಶ್ರೀರಾಮಕೃಷ್ಣರು ಗೀತಾಸಾರ 'ತ್ಯಾಗ'ವೇ ಎಂದು ಘೋಷಿಸಿದ್ದಾರೆ. ಹೀಗೆ ಐಂದ್ರಯಿಕ ಜೀವನದ ಅಪೇಕ್ಷೆ ಇರುವವನಿಗೂ ಭವದಿಂದ ಬಿಡುಗಡೆ ಈ ದಾರಿಯಲ್ಲಿ ನಡೆದಾಗ ಸಾಧ್ಯ ಎಂದು ಗೀತೆ ತಿಳಿಸುತ್ತದೆ.

## ಜ್ಞಾನಯೋಗ

ಸೃಷ್ಟಿಯಾಗಿರುವ ಈ ಸಂಪೂರ್ಣ ವಿಶ್ವಾಂಡ, ಬ್ರಹ್ಮಾಂಡ, ಸ್ಥಾವರ-ಜಂಗಮ ರೂಪವಾದ ಇಂದ್ರಿಯಗಳ ಅರಿವಿಗೆ ಅನುಭವಕ್ಕೆ ಬರುತ್ತಿರುವ ಎಲ್ಲವೂ ಪರಮವಸ್ತುವಿನದೇ ಅಂಶ, ಸ್ವರೂಪ. ಪರಮವಸ್ತುವಿನ ಶಕ್ತಿ 'ಪ್ರಕೃತಿ.' ಅದು ಸತ್ವರಜಸ್ ತಮೋಗುಣಾತ್ಮಕವಾದುದು. ಸತ್ವಗುಣದಿಂದ ಮಹತ್ ಬುದ್ಧಿ ತತ್ತ್ವ , ರಜಸ್ಸಿನಿಂದ ಅಹಂಕಾರ, ತೈಜಸ ವೈಕೃತಿಕ ತಾಮಸ ಅಹಂಕಾರಗಳಿಂದ ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ಮನಸ್ಸೂ , ಅವುಗಳ ಅಭಿಮಾನಿ ದೇವತೆಗಳೂ, ತಮೋಗುಣದಿಂದ ಇಂದ್ರಿಯಗಳು ಅನುಭವಿಸುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ತನ್ಮಾತ್ರಗಳೂ ವಿಕಾಸಗೊಳ್ಳುತ್ತವೆ. ಈ ಎಲ್ಲವೂ ವಿವಿಧ ಅಂಶಗಳಲ್ಲಿ ಬೆರೆತು ಜೀವಕೋಟಿಗಳೊಡಗೂಡಿದ ಬೆಟ್ಟ ಗುಡ್ಡ ಗಿಡ-ಮರ ನದ-ನದಿ ಮೊದಲಾದ ಸಮಸ್ತವೂ ಸೃಷ್ಟಿಯಾಗಲು ಕಾರಣಗಳಾಗಿವೆ. ಈ ಎಲ್ಲದರೊಳಗೆ ಸಕಲ ವಿಧ ಚಟುವಟಿಕೆಗೆ ಕಾರಕನಾಗಿ ಇರುವ ಚೈತನ್ಯ ಈ ಎಲ್ಲದರೊಡನಿದ್ದರೂ ಇವುಗಳೊಡನೆ ಯಾವ ಸಂಬಂಧವನ್ನೂ ಹೊಂದಿರುವುದಿಲ್ಲ. ಈ ವಿಚಾರವನ್ನು ಮತ್ತೆ ಮತ್ತೆ ಮನನ ಮಾಡುತ್ತಲೇ ಇರುವುದರಿಂದ ಚಿತ್ತಶುದ್ಧಿಯಾಗುತ್ತದೆ. ಅದರಿಂದ ಇಂದ್ರಿಯಗಳ ಮೇಲೆ ಹಿಡಿತ ದೊರಕುತ್ತದೆ. ಇಂದ್ರಿಯ ಜಯದಿಂದ ವಿಶ್ವವು ಇಷ್ಟು ವಿಸ್ತಾರವಾಗಿ ವಿಕಾಸಗೊಳ್ಳಲು ಕಾರಣವಾದ ಮೂಲವಸ್ತುವನ್ನೇ ಜೀವ ಸೇರುತ್ತದೆ. ಶಬ್ದ, ಸ್ಪರ್ಶ ಮೊದಲಾದ ಇಂದ್ರಿಯಗಳು ಗ್ರಹಿಸುವ ವಿಷಯಗಳನ್ನು ಅವು ಸ್ವೀಕರಿಸದೆ ಇದ್ದರೆ (ಕಿವುಡನಂತೆ ಕುರುಡನಂತೆ...) ವಿಷಯಗಳು ತಮ್ಮ ಮೂಲವಾದ ತಮಸ್ಸಿನಲ್ಲಿ, ಇಂದ್ರಿಯಗಳು ತಮ್ಮ ಮೂಲವಾದ 'ಅಹಂಕಾರ' ತತ್ತ್ವದಲ್ಲಿ ಸೇರಿಕೊಳ್ಳುತ್ತವೆ. ಹೀಗೆ ಎಲ್ಲವೂ ತಮ್ಮ ತಮ್ಮ ಮೂಲ ಸ್ರೋತವನ್ನು ಸೇರುತ್ತಾ ಕೊನೆಯಲ್ಲಿ ಪರತತ್ತ್ವದಲ್ಲಿ ಲೀನವಾಗುತ್ತವೆ. *(೨.೫೮)*

ಆ ಸ್ಥಿತಿಯನ್ನು ಮುಟ್ಟಿದವನಿಗೆ ಎಲ್ಲವೂ ಬ್ರಹ್ಮವೇ. ಇಂದ್ರಿಯಗಳು ಬ್ರಹ್ಮ, ಅವು ಗ್ರಹಿಸುವ ಶಬ್ದಾದಿಗಳು (ಹವಿ) ಬ್ರಹ್ಮ. ಒಳಗಿರುವ ಚೈತನ್ಯ(ಆತ್ಮ) ಬ್ರಹ್ಮ (ಅಗ್ನಿ). ಅದರಲ್ಲಿ ಹೋಮ ಮಾಡುವ ಈ ಶರೀರ ಬ್ರಹ್ಮ - ಹೀಗೆ ಎಲ್ಲವೂ ಬ್ರಹ್ಮ; ಬ್ರಹ್ಮವಲ್ಲದ್ದು ಬ್ರಹ್ಮನಿಂದಲ್ಲದ್ದು ಬ್ರಹ್ಮನಿಗಲ್ಲದ್ದು ಯಾವುದೂ ಇಲ್ಲ ಎಂಬ ಅನುಭವ ಸದಾ ಅವನಲ್ಲಿ ತುಂಬಿಕೊಂಡಿರುತ್ತದೆ. ಈ ಅಧ್ಯಾತ್ಮದ ಔನ್ನತ್ಯಾನುಭೂತಿಯಲ್ಲಿ ಜೀವಿ ಬ್ರಹ್ಮನನ್ನಲ್ಲದೆ ಬೇರೆ ಏನನ್ನು ತಾನೆ ಕಾಣಬಲ್ಲ! ಸೇರಬಲ್ಲ!

**ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮ-ಕರ್ಮ-ಸಮಾಧಿನಾ॥** *(೪.೨೪)*

ಶ್ರದ್ಧೆ ನಿಷ್ಠೆ ತಾಳ್ಮೆಗಳಿಂದ ಕಷ್ಟಸಾಧ್ಯವಾದ ಈ ಸಾಧನಾನುಷ್ಠಾನವನ್ನು ಸಾಧನೆ ಮಾಡುವ ಛಲವುಳ್ಳಂತಹವರಿಗೆ ಇದೂ ಒಂದು ಸಾಧನಾಮಾರ್ಗ.

## ಧ್ಯಾನಯೋಗ

ತನ್ನ ಹೊರಸತ್ವ ಅಂತಃ ಸತ್ವಗಳನ್ನೆಲ್ಲಾ ಒಗ್ಗೂಡಿಸಿ ಲೌಕಿಕವಾದ ವಸ್ತು ಶಕ್ತಿಗಳ ಮೇಲೆ ಕೇಂದ್ರೀಕರಿಸಿ ಅದ್ಭುತವಾದ ಶಕ್ತಿಪವಾಡಗಳನ್ನು ಗಳಿಸುವುದು, ಲೌಕಿಕವಾದ ಸಕಲ ಶಕ್ತಿಗಳ (ಅಣಿಮಾ ಮಹಿಮಾದಿ) ಆಗರನಾದ ಪರಮಾತ್ಮನನ್ನು ಧ್ಯಾನಮಾಡಿ ಆ ಪರಮಾತ್ಮ ತತ್ತ್ವದೊಡನೆ ಒಂದಾಗುವುದು ಧ್ಯಾನಯೋಗ.

ಈ ಯೋಗದ ಸಾಧನೆಯಲ್ಲಿ ಹೆಚ್ಚು ಎತ್ತರವೂ ಅಲ್ಲದ ಹೆಚ್ಚು ತಗ್ಗೂ ಅಲ್ಲದ ಆಸನದ ಮೇಲೆ ನಿರ್ಜನವಾದ ಪ್ರದೇಶದಲ್ಲಿ ಕುಳಿತುಕೊಳ್ಳಬೇಕು. ತಲೆ-ಬೆನ್ನು-ಕುತ್ತಿಗೆಗಳನ್ನು ಒಂದೇ ನೇರದಲ್ಲಿಟ್ಟು ಕೊಂಡು ಇಂದ್ರಿಯ, ಚಿತ್ತಗಳನ್ನು ಒಳಗೆ ಸೆಳೆದುಕೊಳ್ಳಬೇಕು. ಹೊರ ಇಂದ್ರಿಯ, ಒಳ ಇಂದ್ರಿಯಗಳ ಚಟುವಟಿಕೆಯ ನಿಗ್ರಹಕ್ಕೆ ಅಗತ್ಯವಾದ ಶಮ ದಮ ಮೊದಲಾದ ಸಾಧನೆಗಳನ್ನು ಕ್ರಮವಾಗಿ ಅಭ್ಯಾಸ ಮಾಡಬೇಕು. ಮನಸ್ಸು ಅತ್ಯಂತ ಚಂಚಲ -

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್॥** *(೬.೨೬)*

ಇಂದ್ರಿಯಗಳ ಮೂಲಕ ವಿಷಯ ಭೋಗಾಭಿಲಾಷೆಯಿಂದ ಮನಸ್ಸು ಹೊರಕ್ಕೆ ಹೊರಟಂತೆಲ್ಲ ಅದನ್ನು ನಿಯಮಿಸಬೇಕು. ಅದನ್ನು ಆತ್ಮದಲ್ಲಿ ನೆಲೆ ನಿಲ್ಲಿಸಬೇಕು. ಇದಕ್ಕೆ ಊಟ, ವ್ಯವಹಾರ, ಆಚಾರ-ವಿಚಾರ, ನಡೆ-ನುಡಿ, ಎಲ್ಲದರಲ್ಲೂ ನಿಯತತೆ ಕ್ಲೃಪ್ತತೆ ಮಿತ-ಹಿತವನ್ನು ಸಾಧಿಸಬೇಕು. *(೬-೧೭)*

ಇಷ್ಟೆಲ್ಲ ಸಾಧಿಸಿದಾಗ ಗಾಳಿ ಬೀಸದ ಕಡೆ ಇಟ್ಟ ಸೊಡರು ಅಲುಗಾಡದೆ ಸ್ಥಿರವಾಗಿರುವಂತೆ ಊರ್ಧ್ವಮೂಲವಾಗಿ ಉರಿಯುವಂತೆ, ಯೋಗಿಯ ಚಿತ್ತವೂ ಸ್ಥಿರವಾಗುವುದು. ಈ ರೀತಿ ಕರ್ಮೇಂದ್ರಿಯ ಜ್ಞಾನೇಂದ್ರಿಯ, ಚಿತ್ತ ಮನಸ್ಸು ಬುದ್ಧಿ ಅಹಂಕಾರ ಎಲ್ಲವನ್ನೂ ಹಂತ ಹಂತವಾಗಿ ನಿಗ್ರಹಿಸುತ್ತಾ ಏಕಾಗ್ರಗೊಳಿಸಿ ಆತ್ಮ ಚೈತನ್ಯವನ್ನು ಪರಾತ್ಪರದೊಳಗೆ ಲೀನಗೊಳಿಸಬೇಕು. ಸಮಾಧಿ ಸ್ಥಿತಿಗೇರಿಸಬೇಕು. ಇದು ಧ್ಯಾನಯೋಗ.

ಹೀಗೆ ಧ್ಯಾನವನ್ನು ಅಭ್ಯಾಸಮಾಡುತ್ತಿರುವಾಗಲೇ, ಯೋಗದ ಪರಮೌನ್ನತ್ಯ ಸ್ಥಿತಿಯನ್ನು ಸೇರುವ ಮೊದಲೇ ಸಾಧಕನ ಆಯಸ್ಸು ಮುಗಿದು ಹೋದರೆ ಆಗ ಅವನ ಸಾಧನೆಯ ಕಥೆ ಏನು? ಮತ್ತೆ ಅವನು ಮೊದಲಿನ ಹಂತದಿಂದ ಆರಂಭಿಸಬೇಕೆ? – ಎಂದು ಅರ್ಜುನನು ಕಳವಳದಿಂದ ಕೃಷ್ಣನನ್ನು ಪ್ರಶ್ನೆ ಮಾಡುತ್ತಾನೆ. ''ಸಾಧನಾ ಹಂತದಲ್ಲಿ ಮೃತನಾದವನ ಯೋಗಕ್ಕೆ ಯಾವ ನಾಶವೂ ಇರುವುದಿಲ್ಲ. ಇಹದಲ್ಲಿ ಆಗಲಿ ಪರದಲ್ಲಿ ಆಗಲಿ ಅವನ ಸಾಧನೆಗೆ ನಷ್ಟವಿಲ್ಲ. **'ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ'** *(೬.೪೦)* ಧ್ಯಾನದ ಫಲವಾಗಿ ಅವನು ಪುಣ್ಯಲೋಕಗಳನ್ನು ಸೇರಿ, ಅಲ್ಲಿನ ಸುಖಗಳನ್ನು ಅವನು ಅನುಭವಿಸುವನು. ಆ ಪುಣ್ಯ ಮುಗಿದ ಮೇಲೆ ಶರೀರವನ್ನು ತಳೆದು ಈ ಲೋಕಕ್ಕೆ ಬರುವುದಾದರೆ ತನ್ನ ಹಿಂದಿನ ಆ ಧ್ಯಾನದ ಶಕ್ತಿಯ ಆಧಾರದ ಮೇಲೆ ಶುದ್ಧ ಸದಾಚಾರ ಸಂಪನ್ನರ ಮನೆಯಲ್ಲೋ, ಶ್ರೀಮಂತರ ಕುಲದಲ್ಲೋ, ಯೋಗಿಗಳ ವಂಶದಲ್ಲೋ ಜನ್ಮ ತಳೆಯುವನು '' *(೬.೪೧-೪೨)* ಎಂದು ಕೃಷ್ಣನು ತಿಳಿಸುತ್ತಾನೆ. ಯಾವ ನೆಲೆಯಲ್ಲಿ ಅವನ ಸಾಧನೆ ನಿಂತಿರುವುದೋ ಅಲ್ಲಿಂದ ಮುಂದೆ ಅವನು ತನ್ನ ಸಾಧನೆಯನ್ನು ಮುಂದುವರೆಸಬಹುದು, ಇದು ಸಾಧಕನಿಗೆ ಗೀತೆ ತೋರುವ ಇನ್ನೊಂದು ಭರವಸೆ.

### ಭಕ್ತಿಯೋಗ

ಭಗವದ್ವಸ್ತುವಿನಲ್ಲಿ ನಾವು ಹೊಂದುವ ಪರಮ ಪ್ರೇಮವೇ ಭಕ್ತಿ. ಎಲ್ಲಾ ಜೀವಿಗಳಲ್ಲೂ ಸಹಜವಾಗಿಯೇ ಇರುವ ಗುಣ ಪ್ರೀತಿ. ಯಾವ ಯಾವ ಜೀವಿಗಳಿಗೆ ಯಾವ ಯಾವ ರೂಪದಲ್ಲಿ, ಯಾವ ಯಾವ ಭಾವದಲ್ಲಿ ಪ್ರೀತಿ, ಭಕ್ತಿ ಉಂಟಾಗುವುದೋ ಅಂತಹ ಭಾವದಲ್ಲೇ ಅವರಿಗೆ ಭಗವಂತ ಒಲಿಯುತ್ತಾನೆ.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥** *(೭.೨೧)*

ಎಂದು ಗೀತೆ ಭಕ್ತನಿಗೇ ಅವನ ಇಷ್ಟಮೂರ್ತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರವನ್ನು ನೀಡುತ್ತದೆ. ಸ್ವಾಮಿ ವಿವೇಕಾನಂದರೂ ಈ ಆಧ್ಯಾತ್ಮಿಕ ಔದಾರ್ಯವೇ ಭಾರತೀಯ ಧಾರ್ಮಿಕ ಸಾಮಾಜಿಕ ಸಾಮರಸ್ಯದ ವೈಶಿಷ್ಟ್ಯವೆಂದು ಕೊಂಡಾಡಿದ್ದಾರೆ.

ಆಯಾ ಜೀವಿಗಳ ಭಾವ ಸಂಸ್ಕಾರ ಚಿತ್ತಶುದ್ಧಿ ಮೊದಲಾದುವನ್ನು ಅನುಸರಿಸಿ ಯಾರು ಯಾರಿಗೆ ಯಾವ ರೂಪ ಯಾವ ಭಾವದಲ್ಲಿ ಪ್ರೀತಿ ಉಂಟಾಗುವುದೋ ಆ ರೂಪ ಆ ಭಾವಗಳಲ್ಲಿ ಅವರ ಪ್ರೀತಿ ಸೇವೆಗಳನ್ನು ಭಗವಂತ ಸ್ವೀಕರಿಸುತ್ತಾನೆ. 'ಭಗವಂತ ಮಾತ್ರ ಬೇಕು' ಎಂದು ಭಗವಂತನಲ್ಲಿ ಅನನ್ಯ ಪ್ರೀತಿ ಹೊಂದುವಂತಹ ಭಕ್ತರು, ಭಗವಂತನ ಲೀಲಾ ವಿನೋದಕ್ಕಾಗಿ ಮತ್ತೆ ಮತ್ತೆ ಜನ್ಮ ತಳೆಯಲೂ ಉತ್ಸುಕರಾಗಿರುವಂತಹ ಭಕ್ತರು ಬಹಳ ಕಡಿಮೆ. **ನಾರದ ಭಕ್ತಿ ಸೂತ್ರ**ವೂ ಈ ಭಕ್ತಿಯ ಔನ್ನತ್ಯವನ್ನು ಭಕ್ತ ಸಾಧಿಸಬೇಕು *(ಸೂ.೮೨)* ಎಂದು ತಿಳಿಸುತ್ತದೆ.

ತಮ್ಮ ತಾಳಲಾರದ ಕಷ್ಟ ನೋವು ಸಮಸ್ಯೆಗಳ ಪರಿಹಾರಕ್ಕಾಗಿ ಭಗವಂತನನ್ನು ಮೊರೆಹೋಗುವ ಪ್ರೀತಿಸುವ **'ಆರ್ತ'** ಭಕ್ತರೇ ಹೆಚ್ಚು ಜನ. ಭಗವಂತನ ಸ್ವರೂಪ ಅವನ ಲೀಲೆ ಮುಂತಾದವನ್ನು ತಿಳಿದು ಆನಂದಿಸುವ ಬಯಕೆಯಿಂದ ಭಗವಂತನಿಗೆ ಮೊರೆ ಹೋಗುವ ಭಕ್ತ **'ಜಿಜ್ಞಾಸು'**. ಬೇರೆ ಬೇರೆ ಉದ್ದೇಶ ಪ್ರಯೋಜನಗಳ ಸಾಧನೆಗಾಗಿ ಭಗವಂತನಲ್ಲಿ ಪ್ರೀತಿ ಹೊಂದುವ ಭಕ್ತ **'ಅರ್ಥಾರ್ಥೀ'**. ಇವರೆಲ್ಲರೂ ಉನ್ನತರೇ ಉತ್ತಮರೇ. ಆದರೆ ಭಗವನ್ಮಯವಾಗಿ ವಿಶ್ವವನ್ನೆಲ್ಲಾ ಪರಿಭಾವಿಸಿ ಅನುಭವಿಸುತ್ತಾ ತನ್ನೆಲ್ಲಾ ಚಟುವಟಿಕೆಗಳನ್ನೂ ಭಗವದರ್ಪಿತವಾಗಿ ಮಾಡುತ್ತಾ ಭಗವತ್ಪ್ರಿಯವಾಗುವಂತೆ ತನ್ನ ಆಚಾರ ವಿಚಾರ ವಿಹಾರಗಳನ್ನು ಮಾಡುತ್ತಾ ಜೀವನ ಕಳೆಯುತ್ತಿರುವ **'ಜ್ಞಾನೀ'** ಭಕ್ತ ಸ್ವತಃ ಪರಮಾತ್ಮನೇ ಎಂದು ಶ್ರೀಕೃಷ್ಣ ಹೇಳುತ್ತಾನೆ, **'ಜ್ಞಾನೀ ತ್ವಾತ್ಮೈವ ಮೇ ಮತಂ ।'** *(೭.೧೮)* **'ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।'** *(೭.೧೭)*

ಸದಾಕಾಲ ಭಗವಂತನನ್ನೇ ನೆನೆಯುತ್ತಾ ಮನ ಬುದ್ಧಿ ಇಂದ್ರಿಯಗಳನ್ನು ಭಗವಂತನಲ್ಲೇ ನೆಲೆನಿಲ್ಲಿಸಿ ದೇವರ ಲೀಲಾ ವಿನೋದಕ್ಕಾಗಿ ದೇವರ ಯಂತ್ರವಾಗಿ ತನ್ನನ್ನು ತಾನು ಇಟ್ಟುಕೊಂಡಿರುವ ವಿಶಿಷ್ಟ ಭಕ್ತಿ ಅವನದು. ಅಂತಹವನು ಭಗವಂತನಿಗೆ ಪ್ರಿಯವಾಗುತ್ತಾನೆ. ಅವನಲ್ಲಿ ಲೋಕವನ್ನು ಉದ್ವೇಗಗೊಳಿಸುವಂತಹ ಯಾವ ಗುಣ-ಭಾವ-ಲಕ್ಷಣಗಳೂ ಇರುವುದಿಲ್ಲ, ಸಮಸ್ತವೂ ಭಗವನ್ಮಯವಾದುದರಿಂದ ಯಾವುದರಿಂದಲೂ ಹಾಗೂ ಯಾರಿಂದಲೂ ತಾನು ಉದ್ವೇಗಗೊಳ್ಳುವುದಿಲ್ಲ. ಯಾರ ಮೇಲೂ ಕೋಪ-ತಾಪ ರಾಗ-ದ್ವೇಷ ತಾಳುವುದೂ ಇಲ್ಲ , ಆ ಕಾರಣದಿಂದಲೇ ಸುಖ-ದುಃಖಾದಿ ದ್ವಂದ್ವಗಳ ಬಾಧೆಯೂ ಅವನಿಗಿರುವುದಿಲ್ಲ. ಮಮಕಾರ ಅಹಂಕಾರರಹಿತನಾಗಿ ಸದಾ ಸಂತೋಷದಿಂದಲೇ ಇರುತ್ತಾನೆ. *(೧೨. ೧೪-೧೬)*

### ಉಪಸಂಹಾರ

ಅವರವರ ಸಂಸ್ಕಾರ, ಅವರವರ ಭಾವ ಶಕ್ತಿ ಸಾಮರ್ಥ್ಯಗಳನ್ನನುಸರಿಸಿ ಅವರಿಗಪೇಕ್ಷಿತರಾದ ಯಾವ ಮಾರ್ಗವನ್ನು ಬೇಕಾದರೂ ಸಾಧಕ ಆಯ್ದುಕೊಳ್ಳಬಹುದು. ಇದರಲ್ಲಿ ನಿರ್ದೇಶಿಸಿರುವ ಈ ಮಾರ್ಗವನ್ನು ಪೂರ್ಣವಾಗಿ ಆಶ್ರಯಿಸಲಾಗದಿದ್ದರೆ ಸ್ವಲ್ಪವನ್ನು ಆಶ್ರಯಿಸಿದರೂ ಸಾಕು ಅದು ಅವನನ್ನು ಮಹಾಭಯದಿಂದ ಪಾರುಮಾಡುವುದು. (**'ತ್ರಾಯತೇ ಮಹತೋ ಭಯಾತ್.'**) ಗೀತೆಯ ಒಂದೊಂದು ಪಾದ, ಪಾದದ ಒಂದೊಂದು ಭಾಗ, ಒಂದೊಂದು ಪದವೂ ಮಂತ್ರವೇ, ಮಹಾ ಮಂತ್ರವೇ. ಅದನ್ನು ಮನನ ಮಾಡುತ್ತಾ ಮಾಡುತ್ತಾ ಅನುಷ್ಠಾನಕ್ಕೆ ತಂದರೆ ಅದೇ ವ್ಯಕ್ತಿಯನ್ನು ಭವದಿಂದ ದಾಟಿಸಿಬಿಡುತ್ತದೆ. ಉದಾಹರಣೆಗೆ, **'ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ...'** *(೧೮.೬೫)* ಈ ಶ್ಲೋಕದ ಒಂದು ಭಾಗವಾದ 'ಮನ್ಮನಾ ಭವ' ಇದೊಂದೇ ಮಹಾತಾರಕ ಮಂತ್ರವಾಗಬಲ್ಲದು. 'ಮನಸ್ಸನ್ನು ಭಗವಂತನಲ್ಲಿಡು' – ಇದನ್ನೇ ಮನನ ಮಾಡುತ್ತಾ ಪ್ರತಿದಿನದಲ್ಲಿ







ಒಂದೊಂದು ಕ್ಷಣ ಭಗವಂತನಲ್ಲಿ ಮನಸ್ಸಿಡುವ ಪ್ರಯತ್ನ ಮಾಡುತ್ತಿದ್ದರೆ, ಒಂದಲ್ಲ ಒಂದು ದಿನ ಮನಸ್ಸು ಪೂರ್ಣವಾಗಿ ಭಗವಂತನದೇ ಆಗಿಬಿಡುತ್ತದೆ. ಯಾವ ಮನಸ್ಸು ನಮ್ಮ ಇಷ್ಟ ಅಭಿಪ್ರಾಯವೇ ತನ್ನದು ಎಂಬಂತೆ ನಾಟಕವಾಡಿ ನಮ್ಮನ್ನು ಅಧಃ ಪಾತಾಳಕ್ಕೆ ಎಳೆದು ತಂದಿರುತ್ತದೋ ಅದೇ ನಮ್ಮನ್ನು ಅವನಲ್ಲಿ ಸೇರಿಸಿಬಿಡುತ್ತದೆ.

ಅಷ್ಟೆಲ್ಲಾ ಏಕೆ ಗೀತೆಯ ಆರಂಭದ ಶ್ಲೋಕದ ಭಾಗವಾದ **'ಧರ್ಮಕ್ಷೇತ್ರೇ ಕುರುಕ್ಷೇತ್ರೇ'** ಇದೇ ಸಾಕು. 'ಕ್ಷೇತ್ರೇ ಕ್ಷೇತ್ರೇ ಧರ್ಮ ಕುರು' - ನೀನು ನಿಂತಿರುವ ಜೀವಿಸುತ್ತಿರುವ ಕ್ಷೇತ್ರ (ವಿದ್ಯಾರ್ಥಿ, ಗೃಹಸ್ಥ, ಉದ್ಯೋಗಿ, ಶಿಕ್ಷಕ, ಆರಕ್ಷಕ, ವಿಜ್ಞಾನಿ ಸಂಶೋಧಕ, ವೈದ್ಯ) ಯಾವುದೇ ಇರಲಿ, ಆಯಾ ಕ್ಷೇತ್ರದಲ್ಲಿ ನ್ಯಾಯಬದ್ಧವಾಗಿ ಆ ಕ್ಷೇತ್ರಧರ್ಮಕ್ಕೆ ಯೋಗ್ಯವಾಗಿ ನಡೆದುಕೋ - ಇಷ್ಟೇ ಸಾಕಲ್ಲ, **ನಾದತ್ತೇ ಕಸ್ಯಚಿತ್‌ಪಾಪಂ ನ ಚೈವ ಸುಕೃತಂ ವಿಭುಃ** *(೫-೧೫)* ಎಂಬಂತೆ ಅದು ಪಾಪವನ್ನಾಗಲೀ ಪುಣ್ಯವನ್ನಾಗಲೀ (ಫಲರೂಪವಾಗಿ) ಕೊಡದೆ, ವ್ಯಕ್ತಿಯನ್ನು (ಕರ್ಮ) ಯೋಗಿಯನ್ನಾಗಿ ಮಾಡಲು!

ಆದುದರಿಂದಲೇ ಶ್ರೀಶಂಕರರು **'ಭಗವದ್ಗೀತಾ ಕಿಂಚಿದಧೀತಾ'** ಎಂದೂ, ವೇದವ್ಯಾಸರು ಸ್ವತಃ ತಾವೇ, **'ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ'** - ಬೇರೆ ಯಾವ ಯಾವ ಲಕ್ಷಾಂತರ ಶಾಸ್ತ್ರಗ್ರಂಥಗಳ ಅಧ್ಯಯನದಿಂದ ತತ್ತ್ವವಿಮರ್ಶೆಯಿಂದ ಏನೂ ಆಗುವುದಿಲ್ಲ, ಗೀತೆ ಒಂದನ್ನು ಚೆನ್ನಾಗಿ ಮನನ ಮಾಡಿ (ಒಂದನ್ನಾದರೂ) ಅನುಷ್ಠಾನಕ್ಕೆ ತಂದರೆ **(ಸುಗೀತಾ ಕರ್ತವ್ಯಾ)** ಸಾಕು ಎಂದು ಹೇಳಿದ್ದಾರೆ.

ಹೀಗೆ ಸರ್ವಜನಹಿತಕಾರಿ, ಸಕಲ ಹೃದಯವಿಕಾಸಕಾರಿ, ಸಮಸ್ತ ಸನ್ಮಂಗಲ ವಿಧಾಯಿ, ಸಕಲಲೋಕಶ್ರೇಯಃಕರಿ, ಸಕಲ ಮನರಂಜನಕರಿಯಾದ, ಅತ್ಯಂತ ಸರಳವೂ ಸುಲಭವೂ ಆದ ತತ್ತ್ವವಿಚಾರಗಳನ್ನು ಹೃದಯಂಗಮವಾಗಿ ಬೋಧಿಸಿ, ಕೈಹಿಡಿದು ಶ್ರೇಯೋಮಾರ್ಗದಲ್ಲಿ ನಡೆಸುವ - ಎದ್ದು ನಿಲ್ಲಲೂ ಆಗದ ಎಳೆ ಕಂದಮ್ಮನನ್ನು ಕೈಹಿಡಿದು ಮೇಲೆತ್ತಿ ದೃಢಹೆಜ್ಜೆ ಇಟ್ಟು ನಡೆಯುವಂತೆ ಮಾಡುವ, ತಾಯಿ ತಂದೆ ಗುರು ಬಂಧು - ಎಲ್ಲಾ ಆದ ಶ್ರೀಮದ್ಭಗವದ್ಗೀತೆಗೆ ಸಮನಾದ ಸಾಧಕನ ಮಾರ್ಗದರ್ಶಿ ಬೇರಾರು, ಬೇರಾವುದು ಇರಲು ಸಾಧ್ಯ?

### *ಕೃತಿಯ ಆವೃತ್ತಿಗಳು:*

ಗೀತೆ ಬಹುಶಃ ವಿಶ್ವದಲ್ಲಿ ಅತ್ಯಧಿಕ ಆವೃತ್ತಿಗಳನ್ನು ಕಂಡ ಕೃತಿ ಇರಬಹುದು. ಇದು ಅನೇಕ ದೇಶದ, ಎಲ್ಲಾ ಭಾಷೆಗಳಿಗೂ ಭಾಷಾಂತರಗೊಂಡಿದೆ. ಇದರ ಜೀವನೋಪಯುಕ್ತತೆಯನ್ನು ಮನಗಂಡ ಮಹಿಮರೆಲ್ಲರೂ ಜನಮಾನಸವನ್ನು ಇದು ಸುಲಭವಾಗಿ ತಟ್ಟುವಂತೆ ತಮ್ಮ ತಮ್ಮ ಅನುಭವದ ಹಿನ್ನೆಲೆಯಲ್ಲಿ ತಾವು ವಿಶ್ವಾಸ ಇಟ್ಟಿರುವ ಪ್ರತಿಪಾದಿಸುವ ಮತ ತತ್ತ್ವದ ಆಧಾರದ ಮೇಲೆ ವಿಭಿನ್ನ ರೀತಿಯಲ್ಲಿ ತಮ್ಮದೇ ಆದ ಅರ್ಥವಿವರಣೆಯನ್ನು ಪ್ರಕಟಿಸಿದ್ದಾರೆ. ಕ್ರಿ.ಶ. ೮ನೇ ಶತಮಾನದ ಶ್ರೀ ಶಂಕರರಿಂದ ಆರಂಭವಾಗಿ ಇಂದು ಕ್ರಿ.ಶ. ೨೧ನೇ ಶತಮಾನದವರೆಗಿನ ಅನೇಕ ಮಹನೀಯರು ಈ ಕೃತಿಗೆ ವ್ಯಾಖ್ಯೆಯನ್ನು ನೀಡುತ್ತಲೇ ಬಂದಿದ್ದಾರೆ. ಶ್ರೀ ಶಂಕರರು (ಕ್ರಿ.ಶ. ೮), ಶ್ರೀರಾಮಾನುಜರು(ಕ್ರಿ.ಶ. ೧೨), ಶ್ರೀ ಮಧ್ವಾಚಾರ್ಯರು (ಕ್ರಿ.ಶ.೧೨), ಶ್ರೀ ನಿಂಬಾರ್ಕರು (ಕ್ರಿ.ಶ.೧೫), ವಲ್ಲಭಾಚಾರ್ಯರು ತಾವು ಅನುಭವಿಸಿ ಆನಂದಿಸಿದ ಸಿದ್ಧಾಂತದ ಹಿನ್ನೆಲೆಯಲ್ಲಿ ಇದಕ್ಕೆ ಭಾಷ್ಯ ಬರೆದಿದ್ದಾರೆ. ಶ್ರೀ ವೇದಾಂತದೇಶಿಕರು (ಕ್ರಿ.ಶ.೧೩), ಶ್ರೀ ಆನಂದಗಿರಿ(ಕ್ರಿ.ಶ.೧೩) ಶ್ರೀ ಜಯತೀರ್ಥರು(ಕ್ರಿ.ಶ.೧೩) ಆಚಾರ್ಯತ್ರಯರ ಭಾಷ್ಯಕ್ಕೆ ಅನುವ್ಯಾಖ್ಯಾನಗಳನ್ನು ರಚಿಸಿದ್ದಾರೆ. ೧೫ನೇ ಶತಮಾನದ ಶ್ರೀಧರಸ್ವಾಮಿಗಳು, ೧೬ನೇ ಶತಮಾನದ ಮಧುಸೂಧನ ಸರಸ್ವತೀ, ೧೭ನೇ ಶತಮಾನದ ರಾಘವೇಂದ್ರ ಇವರೆಲ್ಲರ ಗೀತಾ ವ್ಯಾಖ್ಯಾನಗಳೂ ಪ್ರಸಿದ್ಧವಾಗಿದೆ. ಕ್ರಿ.ಶ. ೧೯-೨೦ ನೇ ಶತಮಾನದಲ್ಲಿ ಶ್ರೀ ವಿನೋಬಾ ಭಾವೆ, ಶ್ರೀ ಲೋಕಮಾನ್ಯ ತಿಲಕರು, ಶ್ರೀ ಅರವಿಂದರು, ಹೊಳೆನರಸೀಪುರದ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು, ಸ್ವಾಮಿ ಆದಿದೇವಾನಂದರು, ಸ್ವಾಮಿ ಸೋಮನಾಥಾನಂದರು, ಸ್ವಾಮಿ ರಂಗನಾಥಾನಂದರು, ಶ್ರೀ ಡಿ.ವಿ. ಗುಂಡಪ್ಪ ಇವರು ಆಯಾ ಕಾಲದ ಜನತೆಗೆ ಅಗತ್ಯವಿರುವಂತೆ ಗೀತಾರ್ಥ ತಾತ್ಪರ್ಯ ವಿವರಣೆ ನೀಡಿದ್ದಾರೆ. ಈ ಎಲ್ಲವೂ ಅವರವರ ಭಾವ, ಯೋಗ್ಯತೆ, ಶಕ್ತಿ, ಅಧಿಕಾರಗಳಿಗೆ ಅನುಗುಣವಾಗಿ ಚಿಂತನಯೋಗ್ಯವೂ ಮನನಯೋಗ್ಯವೂ ಅನುಷ್ಠಾನಾರ್ಹವೂ ಆಗಿವೆ.





# ಭಾಗವತದಲ್ಲಿ ಆಧ್ಯಾತ್ಮಿಕ ಸಾಧನೆ

**ಸ್ವಾಮಿ ವೀರೇಶಾನಂದ**

ಭಕ್ತಿಪರಂಪರೆಯ ಸಾಧನೆಗಳಿಗೆಲ್ಲ ಆಧಾರಗ್ರಂಥವಾಗಿರುವ ಶ್ರೀಮದ್ಭಾಗವತವು ಭಗವಾನ್ ಶ್ರೀಕೃಷ್ಣನ ದಿವ್ಯಚರಿತೆಯನ್ನು ವಿಸ್ತಾರವಾಗಿ ವರ್ಣಿಸುವುದರೊಂದಿಗೆ, ಹಲವು ಬಗೆಯ ಆಧ್ಯಾತ್ಮಿಕ ತತ್ತ್ವಗಳನ್ನೂ ಒಳಗೊಂಡಿದೆ. ಶ್ರೀರಾಮಕೃಷ್ಣರಂತೂ, ''ಭಾಗವತ, ಭಕ್ತ, ಭಗವಾನ್ ಮೂರೂ ಒಂದೇ'' ಎನ್ನುತ್ತಿದ್ದರು. ಈ ಶ್ರೇಷ್ಠ ಗ್ರಂಥವನ್ನು ಕುರಿತು ಬರೆದಿರುವ ಪೂಜ್ಯ ಸ್ವಾಮೀಜಿಯವರು **'ವಿವೇಕಪ್ರಭ'**ದ ಹಿಂದಿನ ಸಂಪಾದಕರಾಗಿದ್ದರು. ಉತ್ತಮ ವಾಗ್ಮಿಗಳೂ, ಸಂಸ್ಕೃತ ವಿದ್ವಾಂಸರೂ ಆಗಿರುವ ಅವರು ಪ್ರಸ್ತುತ ಬೇಲೂರು ಮಠದಲ್ಲಿರುವ ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಕೃತಿಯ ಪರಿಚಯ

ನಮ್ಮ ದೇಶದ ಧಾರ್ಮಿಕ ಸಾಹಿತ್ಯದಲ್ಲಿ ಪುರಾಣಗಳಿಗೆ ವಿಶಿಷ್ಟ ಸ್ಥಾನವಿದೆ. ಪುರಾಣಗಳಲ್ಲಿ ಮಹಾಪುರಾಣ ಶ್ರೀಮದ್ಭಾಗವತ. **''ಶ್ರೀಮದ್ಭಾಗವತಂ ಪುರಾಣಮಮಲಂ ಶ್ರೀಕೃಷ್ಣಲೀಲಾಮೃತಂ''** – ಶ್ರೀಕೃಷ್ಣನ ಲೀಲಾಕಥನವೆಂಬ ಅಮೃತವನ್ನು ಹೊಂದಿರುವ ಭಾಗವತವು ಪುರಾಣಗಳಲ್ಲಿಯೇ ಪುಣ್ಯತಮವಾದದ್ದು ಎಂಬ ಪ್ರಸಿದ್ಧ ಉಕ್ತಿಯಿದೆ.

ಭಗವಾನ್ ವ್ಯಾಸರು ವೇದಗಳನ್ನು ವಿಂಗಡಿಸಿದರು; ಪುರಾಣಗಳನ್ನು ರಚಿಸಿದರು; ಮಹಾಭಾರತವನ್ನೂ ಬರೆದರು. ಆದರೂ ಅವರ ಮನಸ್ಸಿನಲ್ಲಿ ಏನೋ ಕಳವಳ, ವ್ಯಥೆ. ತಮ್ಮ ಬಳಿ ಬಂದ ನಾರದರ ಹತ್ತಿರ ಇದನ್ನು ತೋಡಿಕೊಂಡರು. ಅದಕ್ಕೆ ನಾರದರು ಹೀಗೆ ಉತ್ತರವಿತ್ತರು: ''ಪೂಜ್ಯ ವ್ಯಾಸರೇ, ಇಷ್ಟೊಂದು ಗ್ರಂಥಗಳನ್ನು ಬರೆದಿದ್ದೀರಿ. ಆದರೆ ಅವುಗಳಲ್ಲಿ ಭಗವಂತನ ಚರಿತ್ರೆಯನ್ನು ವಿಶೇಷವಾಗಿ ಬಣ್ಣಿಸದೆ ಕೇವಲ ಧರ್ಮ, ಅರ್ಥ, ಕಾಮಗಳನ್ನು ಬೋಧಿಸಿದ್ದೀರಿ. ಇದರಿಂದ ಮೋಹಿತರಾದ ಜನರು ಕಾಮ್ಯಕರ್ಮಗಳೇ ಮುಖ್ಯಧರ್ಮವೆಂದು ತಿಳಿದುಕೊಂಡು, ಅವುಗಳಲ್ಲೇ ನಿರತರಾಗಿದ್ದಾರೆ. ಇದರಿಂದ ನಿಮಗೆ ದೋಷವು ಉಂಟಾಗಿದೆ. ನೀವು ಮನೋವ್ಯಥೆಯಿಂದ ನರಳುತ್ತಿರುವುದು ಈ ಕಾರಣದಿಂದಲೇ. ವ್ಯಾಸರೇ, ನೀವು ಸಾಧಾರಣ ಮನುಷ್ಯರಲ್ಲ. ನಿಮ್ಮ ದೋಷವನ್ನು ಕಳೆದುಕೊಳ್ಳಲು ಮಹಾನುಭಾವನಾದ ಪರಮಾತ್ಮನ ಲೀಲೆಗಳನ್ನು ವಿಸ್ತಾರವಾಗಿ ಬಣ್ಣಿಸಿರಿ. ಎಲ್ಲರಿಗೂ ನೆಚ್ಚಿನವನಾದ ಭಗವಂತನ ಚರಿತ್ರೆಗಳನ್ನು ವರ್ಣಿಸುವುದೇ ಎಲ್ಲ ಧರ್ಮಕಾರ್ಯಗಳಿಗೂ ಪರಮಫಲವಾಗಿದೆ.''

ನಾರದರು ಹೊರಟುಹೋದ ಮೇಲೆ ವ್ಯಾಸರು ಭಕ್ತಿಯೋಗದಿಂದ ನಿರ್ಮಲವಾದ ತಮ್ಮ ಬುದ್ಧಿಯನ್ನು ಪರಮಾತ್ಮನಲ್ಲಿ ನಿಶ್ಚಲವಾಗಿ ನಿಲ್ಲಿಸಿದರು. ಈ ಧ್ಯಾನದಲ್ಲಿ ಭಗವಂತನ ಪುಣ್ಯಮೂರ್ತಿಯ ದರ್ಶನವನ್ನು ಪಡೆದುಕೊಂಡರು. ದರ್ಶನದಿಂದ ಪಡೆದುಕೊಂಡ ಜ್ಞಾನವನ್ನು ಭಾಗವತ ಶಾಸ್ತ್ರದ ರೂಪದಲ್ಲಿ ಭಟ್ಟಿ ಇಳಿಸಿದರು. ಮೊಟ್ಟಮೊದಲು ಇದನ್ನು ತಮ್ಮ ಪುತ್ರನಾದ ಶುಕಮುನಿಗೆ ಬೋಧಿಸಿದರು. ಶುಕಮಹರ್ಷಿ ಇದನ್ನು ಮೃತ್ಯುವನ್ನು ನಿರೀಕ್ಷಿಸುತ್ತಿದ್ದ ರಾಜ ಪರೀಕ್ಷಿತನಿಗೆ ಉಪದೇಶಿಸಿದನು. ಅಲ್ಲಿ ನೆರೆದಿದ್ದ ಅನೇಕ ಸಾಧುಸಂತರು ಇದನ್ನು ಕೇಳಿಸಿಕೊಂಡರು. ಅವರಲ್ಲಿ ಸೂತಪುರಾಣಿಕನೂ ಒಬ್ಬನು. ಅವನು ನೈಮಿಷಾರಣ್ಯದಲ್ಲಿ ಸಾವಿರ ವರ್ಷಗಳ ಕಾಲ ನಡೆಯುವ ಸತ್ರಯಾಗವನ್ನು ಮಾಡುತ್ತಿದ್ದ ಶೌನಕಾದಿ ಮುನಿಗಳಿಗೆ ಭಾಗವತವನ್ನು ಪ್ರವಚನ ಮಾಡಿದನು. ಹೀಗೆ ಭಾಗವತವು ಪ್ರಚಾರವಾಗುತ್ತ ಸಾಗಿತು.

‘ಭಾಗವತ’ ಈ ಪದದ ಅರ್ಥವೇನು? ಭಗ ಎಂದರೆ ಷಡೈಶ್ವರ್ಯಗಳನ್ನು ಹೊಂದಿರುವವನೇ ಭಗವಂತ ಅಥವಾ ಭಗವತ್. ಭಾಗವತ ಎಂದರೆ ಭಗವದ್ಭಕ್ತ ಎಂದರ್ಥ. ಭಗವದ್ಭಕ್ತರ ಹಾಗೂ ಭಗವದವತಾರಗಳ ವೃತ್ತಾಂತಗಳು ಇಲ್ಲಿ ವಿಶೇಷವಾಗಿ ಕಂಡು ಬರುತ್ತವೆ. ಆದ್ದರಿಂದ ಈ ಗ್ರಂಥವು **‘ಭಾಗವತ’** ಎಂದು ಪ್ರಸಿದ್ಧವಾಗಿದೆ.

### ಮುಖ್ಯ ಸಾಧನೆ : ಭಕ್ತಿ

ಭಾಗವತವು ಮುಖ್ಯವಾಗಿ ಭಕ್ತಿಶಾಸ್ತ್ರ. ಮಿಕ್ಕೆಲ್ಲ ಸಾಧನೆಗಳೂ ಭಕ್ತಿಗೆ ಅಧೀನ ಎಂದು ಭಾಗವತವು ಸಾರುತ್ತದೆ. ಭಾಗವತದ ಪ್ರಕಾರ ಭಕ್ತಿ ಎನ್ನುವುದು ಬರಿಯ ಭಾವೋದ್ವೇಗವಲ್ಲ; ಅದು ಜೀವನತತ್ತ್ವ, ಪರಮಾತ್ಮನಲ್ಲಿ ನಮ್ಮ ವ್ಯಕ್ತಿತ್ವದ ಎಲ್ಲ ಅಂಶಗಳನ್ನೂ ಸಮರ್ಪಿಸುವುದು. ಇದನ್ನು ಈ ಶ್ಲೋಕವು ಸುಂದರವಾಗಿ ಬಣ್ಣಿಸುತ್ತದೆ:

**ದೇವಾನಾಂ ಗುಣಲಿಂಗಾನಾಮ್ ಆನುಶ್ರವಿಕಕರ್ಮಣಾಮ್**
**ಸತ್ತ್ವ ಏವೈಕಮನಸೋ ವೃತ್ತಿಃ ಸ್ವಾಭಾವಿಕೀ ತು ಯಾ ।**
**ಅನಿಮಿತ್ತಾ ಭಾಗವತೀ ಭಕ್ತಿಃ ಸಿದ್ಧೇಃ ಗರೀಯಸೀ**
**ಜರಯತ್ಯಾಶು ಯಾ ಕೋಶಂ ನಿಗೀರ್ಣಮನಲೋ ಯಥಾ ॥**

*(೩:೨೫:೩೨-೩೩)*

‘‘ಮನುಷ್ಯನೊಬ್ಬನ ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳೆಲ್ಲದರ ಶಕ್ತಿಗಳು ಒಂದುಗೂಡಿದ ಮಾನಸಿಕ ವೃತ್ತಿಯು ಸ್ವಾಭಾವಿಕವಾಗಿ, ತಾನೇತಾನಾಗಿ, ಬೇರೆ ಯಾವ ಕಾರಣವೂ ಇಲ್ಲದೆ ಭಗವಂತನ ಕಡೆಗೆ ಹರಿದಾಗ ಅದು ‘ಭಕ್ತಿ’ ಎಂದೆನಿಸಿಕೊಳ್ಳುತ್ತದೆ. ಇದು ಮೋಕ್ಷಕ್ಕಿಂತಲೂ ಹೆಚ್ಚಿನದು. ಅಗ್ನಿಯು ಎಲ್ಲ ಬಗೆಯ ಕೊಳಕನ್ನು ಸುಟ್ಟುಹಾಕಿಬಿಡುವಂತೆ, ಇದು ಬಹು ಬೇಗನೆ ಜೀವಿಯ ಅಜ್ಞಾನ ಕೋಶಗಳನ್ನು ಕರಗಿಸಿಬಿಡುತ್ತದೆ.’’

ಭಾಗವತದ ಪ್ರಕಾರ, ಇಂಥ ಭಕ್ತಿಯೇ ಶ್ರೇಷ್ಠವಾದ ಧರ್ಮ.

**ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೇ।**
**ಅಹೈತುಕೀ ಅಪ್ರತಿಹತಾ ಯಯಾತ್ಮಾ ಸುಪ್ರಸೀದತಿ ॥** *(೧:೨:೬)*

‘‘ಯಾವ ಆಚರಣೆಗಳಿಂದ ಭಗವಂತನಲ್ಲಿ ಭಕ್ತಿಯು ಉತ್ಪನ್ನವಾಗುವುದೋ, ಅದೇ ಶ್ರೇಷ್ಠವಾದ ಧರ್ಮ. ಅಂಥ ಭಕ್ತಿಗೆ ಬೇರೆ ಯಾವುದೇ ಹೊರಗಿನ ಕಾರಣಗಳು ಇರಬಾರದು. ಯಾವ ಬಗೆಯ ಪರಿಸ್ಥಿತಿಯೂ ಅದನ್ನು ಅಲುಗಾಡಿಸಬಾರದು. ಅಂಥ ಭಕ್ತಿಯಿಂದ ಮನುಷ್ಯನ ಮನಸ್ಸು ಪರಮಶಾಂತಿಯನ್ನು ಹೊಂದುತ್ತದೆ.’’

ಎಲ್ಲ ಬಗೆಯ ಪುರುಷಾರ್ಥಗಳೂ ಭಗವದ್ಭಕ್ತಿಯಿಂದಲೇ ದೊರಕಿಬಿಡುತ್ತವೆ ಎಂದು ಭಾಗವತ ಹೇಳುತ್ತದೆ. ಅದರ ಪ್ರಕಾರ, ವಾಸುದೇವನಲ್ಲಿ ಮಾಡುವ ಭಕ್ತಿಯು ವೈರಾಗ್ಯವನ್ನೂ ಹಾಗೆಯೇ ಜ್ಞಾನವನ್ನೂ ಬೇರೆ ಯಾವುದೇ ಸಾಧನಗಳು ಬೇಕಾಗಿಲ್ಲದೆ



ಹುಟ್ಟಿಸುತ್ತದೆ. ಮನುಷ್ಯನೊಬ್ಬನ ಜೀವನದಲ್ಲಿ ಅತ್ಯಂತ ಅಮೂಲ್ಯವಾದ ವಸ್ತುವೇ ಭಕ್ತಿ. ಅವನು ಕಾಮರಹಿತನೋ, ಕಾಮಸಹಿತನೋ – ಎಂಥವನೇ ಆಗಿರಲಿ ಅವನು ನಿಜವಾಗಿಯೂ ಬುದ್ಧಿವಂತನೂ, ಪ್ರಾಮಾಣಿಕನೂ ಆಗಿದ್ದಲ್ಲಿ, **‘ತೀವ್ರೇಣ ಭಕ್ತಿಯೋಗೇನ ಭಜೇತ ಪುರುಷಂ ಪರಂ’** – ಉತ್ಕಟವಾದ ಭಕ್ತಿಯೋಗದಿಂದ ಪರಮಪುರುಷನನ್ನು ಭಜಿಸಬೇಕು. ಧ್ಯಾನವನ್ನು ಮಾಡುವುದಕ್ಕೂ ಭಕ್ತಿಯೇ ಮುಖ್ಯ ಸಾಧನ. ಅದಕ್ಕೆ ವ್ಯಾಸನ ಉದಾಹರಣೆಯನ್ನೇ ಕೊಡುತ್ತದೆ ಭಾಗವತ. ವ್ಯಾಸನು ಭಕ್ತಿಯೋಗದ ಮೂಲಕವೇ ಮನಸ್ಸನ್ನು ನಿಯಂತ್ರಿಸಿಕೊಂಡನು; ಪವಿತ್ರವನ್ನಾಗಿ ಮಾಡಿಕೊಂಡನು; ಆ ಮೂಲಕವೇ ಪರಮಾತ್ಮನ ದರ್ಶನವನ್ನು ಪಡೆದನು ಎಂದು ಭಾಗವತ ಬಣ್ಣಿಸುತ್ತದೆ.

ಮುಕ್ತಿಗಿಂತಲೂ ಭಕ್ತಿಯೇ ಶ್ರೇಷ್ಠವಾದುದು. ಭಗವದವತಾರನಾದ ಕಪಿಲ ಮಹಾಮುನಿಯು ತನ್ನ ತಾಯಿ ದೇವಹೂತಿಗೆ ಹೀಗೆ ಉಪದೇಶ ಮಾಡುತ್ತಾನೆ: ‘‘ಅಮ್ಮಾ, ಕೆಲವರು ಅತ್ಯಂತ ವಿರಳವಾದ ಸಾಧಕರಿದ್ದಾರೆ. ಅವರು ನನ್ನೊಂದಿಗೆ ಏಕೀಭಾವವನ್ನು (ಅದ್ವೈತ ಸ್ಥಿತಿ) ಹೊಂದಲು ಕೂಡ ಆಶಿಸರು. ಅವರು ಯಾವತ್ತೂ ನನ್ನ ಸೇವೆಯನ್ನು ಮಾಡಲು ಕಾತುರರಾಗಿರುತ್ತಾರೆ. ಅವರು ನನ್ನೊಡನೆ ಒಂದಾಗುವ ಪರಮಮೋಕ್ಷವನ್ನೂ ತಿರಸ್ಕರಿಸುತ್ತಾರೆ. ಏಕೆಂದರೆ ಅವರು ಯಾವತ್ತೂ ನನ್ನ ಸುಮನೋಹರ ರೂಪದೆಡೆಗೆ ಆಕರ್ಷಿತರಾಗುತ್ತಾರೆ.

‘‘ಅಮ್ಮಾ, ಅಂಥ ಪರಮಭಕ್ತರು ಇಹ ಮತ್ತು ಪರಲೋಕಗಳ ಭೋಗವನ್ನು ತ್ಯಜಿಸಿಬಿಡುತ್ತಾರೆ; ಈ ಭೌತಿಕ ದೇಹಕ್ಕೆ ಸೇರಿದ ಸಂಪತ್ತು, ಭವನಗಳು, ಇತರೆ ಸ್ವತ್ತುಗಳು – ಎಲ್ಲವನ್ನೂ ತ್ಯಾಗ ಮಾಡುತ್ತಾರೆ.’’

**ವಿಸೃಜ್ಯ ಸರ್ವಾನನ್ಯಾಂಶ್ಚ ಮಾಮೇವಂ ವಿಶ್ವತೋಮುಖಮ್ ।**
**ಭಜಂತಿ ಅನನ್ಯಯಾ ಭಕ್ತ್ಯಾ ತಾನ್ ಮೃತ್ಯೋಃ ಅತಿಪಾರಯೇ ॥**

*(೩:೨೫:೪೦)*

‘‘ಹೀಗೆ ಮೇಲೆ ಹೇಳಿದ ಎಲ್ಲವನ್ನೂ, ಹಾಗೆಯೇ ಮಿಕ್ಕೆಲ್ಲವುಗಳನ್ನೂ ಸಂಪೂರ್ಣವಾಗಿ ತ್ಯಾಗಮಾಡಿದ ಅವರು ವಿಶ್ವಸ್ವರೂಪ







ನಾದ ನನ್ನನ್ನೇ ಎಲ್ಲ ವಿಧದಿಂದಲೂ, ಅನನ್ಯ ಭಾವದಿಂದ ಪೂಜಿಸುತ್ತಾರೆ. ಅಂತಹವರನ್ನು ನಾನು ಸಂಸಾರದ ಬಂಧನದಿಂದ ಬಿಡಿಸುತ್ತೇನೆ.''

ಪ್ರಹ್ಲಾದ ಭಕ್ತಶಿರೋಮಣಿ. ಅವನು ಭಗವಂತನನ್ನು ಹೀಗೆ ಕೇಳಿಕೊಳ್ಳುತ್ತಾನೆ: ''ಬ್ರಾಹ್ಮಣ ಪದವಿಯಾಗಲಿ, ದೇವಪದವಿಯಾಗಲಿ ಋಷಿಪದವಿಯಾಗಲಿ, ಒಳ್ಳೆಯ ನಡತೆಯಾಗಲಿ, ಪಾಂಡಿತ್ಯವಾಗಲಿ, ದಾನ, ತಪ, ಯಾಗ, ಶೌಚ, ವ್ರತ – **ಪ್ರೀಣನಾಯ ಮುಕುಂದಸ್ಯ ನ** – ಇದಾವುದೇ ಆಗಲಿ ಭಗವಂತನನ್ನು ಸಂತೃಪ್ತಗೊಳಿಸುವುದಿಲ್ಲ.'' ಹಾಗಾದರೆ ಭಗವಂತನು ಯಾವುದರಿಂದ ಸಂತುಷ್ಟಿಹೊಂದುತ್ತಾನೆ? ಇದಕ್ಕೆ ಉತ್ತರವಾಗಿ ಪ್ರಹ್ಲಾದನು ಒಂದು ಸುಂದರವಾದ ಮಾತನ್ನು ಹೇಳುತ್ತಾನೆ: **ಪ್ರೀಯತೇ ಅಮಲಯಾ ಭಕ್ತ್ಯಾ ಹರಿಃ ಅನ್ಯದ್ ವಿಡಂಬನಮ್** – ''ಹರಿಯು ಪರಿಶುದ್ಧವಾದ ಭಕ್ತಿಯಿಂದ ಮಾತ್ರವೇ ಸಂತೋಷ ಹೊಂದುತ್ತಾನೆ. ಉಳಿದವೆಲ್ಲ (ಮೇಲೆ ಉಲ್ಲೇಖಿಸಿದ ದಾನ, ತಪ, ಬ್ರಾಹ್ಮಣತ್ವ ಮುಂತಾದವು) ಬರಿಯ ಬೂಟಾಟಿಕೆ ಮಾತ್ರ.''

ತನ್ನ ಈ ಘೋಷಣೆಗೆ ಉದಾಹರಣೆಯಾಗಿ ಪ್ರಹ್ಲಾದನು ಗಜೇಂದ್ರನ ಉದಾಹರಣೆಯನ್ನು ಕೊಡುತ್ತಾನೆ: ''ಸಂಪತ್ತು, ಉನ್ನತ ಕುಲ, ರೂಪ, ತಪಸ್ಸು, ಪಾಂಡಿತ್ಯ, ತೇಜಸ್ಸು, ಪ್ರಭಾವಶಾಲಿ ವ್ಯಕ್ತಿತ್ವ, ಬಲ, ಪೌರುಷ, ಬುದ್ಧಿಶಕ್ತಿ, ಯೋಗಾಭ್ಯಾಸ – **ನ ಆರಾಧನಾಯ ಹಿ ಭವಂತಿ ಪರಸ್ಯ ಪುಂಸಃ** – ಇವು ಯಾವುವೂ ಭಗವಂತನನ್ನು ಆರಾಧಿಸಲು ಬೇಕಾದ ಅರ್ಹತೆಗಳಾಗಲು ಸಾಧ್ಯವಿಲ್ಲ. **ಭಕ್ತ್ಯಾ ತುತೋಷ ಭಗವಾನ್ ಗಜಯೂಥಪಾಯ** –ಏಕೆಂದರೆ, ಈ ಯಾವ ಅರ್ಹತೆಗಳೂ ಇಲ್ಲದ ಬರೀ ಆನೆಯಾದ ಗಜೇಂದ್ರನ ಮೇಲೆಯೂ ಭಗವಂತನು ಅನುಗ್ರಹವನ್ನು ಮಾಡಿದನು.''

ಭಕ್ತಿಸಾಧನೆಗೆ ಶಾಸ್ತ್ರಾಧ್ಯಯನದ ಆವಶ್ಯಕತೆ ಇಲ್ಲ. ಯಾಗ ಕರ್ಮಗಳ ಗೊಡವೆ ಇಲ್ಲ. ಅತ್ಯಂತ ಸುಲಭವಾದ ಈ ಭಾಗವತ ಧರ್ಮವನ್ನು ಎಲ್ಲರಿಗೂ ಅನುಕೂಲವಾಗಲೆಂದು ಭಗವಂತನು ದಯಪಾಲಿಸಿದ್ದಾನೆ. ಈ ಮಾರ್ಗವನ್ನು ಕ್ರಮಿಸುವವನು ಎಂದಿಗೂ ದಾರಿ ತಪ್ಪುವುದಿಲ್ಲ. ಅವನು ಕಣ್ಣು ಮುಚ್ಚಿಕೊಂಡು ಓಡಿಕೊಂಡು ಹೋದರೂ, ಬೀಳುವ ಅಥವಾ ಜಾರುವ ಸಂಭವವೇ ಇಲ್ಲ. ಇಂಥ ಸ್ಥಿತಿ ಯಾವುದರಿಂದ ಪ್ರಾಪ್ತವಾಗುತ್ತದೆ, ಗೊತ್ತೆ?

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಅನುಸೃತಸ್ವಭಾವಾತ್ ।**
**ಕರೋಮಿ ಯದ್ಯತ್ ಸಕಲಂ ಪರಸ್ಮೈ**
**ನಾರಾಯಣಾಯ ಇತಿ ಸಮರ್ಪಯೇತ್ತತ್ ॥** *(೧೧:೨:೩೬)*

''ಭಕ್ತನಾದವನು ತನ್ನ ದೇಹದಿಂದ, ಮಾತಿನಿಂದ, ಮನಸ್ಸಿನಿಂದ, ಬುದ್ಧಿಯಿಂದ ಏನೇನು ಮಾಡುತ್ತಾನೆಯೋ, 'ನಾನು ಮಾಡುವುದೆಲ್ಲವನ್ನೂ ಪರಮಾತ್ಮನಾದ ನಾರಾಯಣನಿಗೋಸ್ಕರ ಮಾಡುತ್ತೇನೆ' ಎಂಬ ಭಾವನೆಯಿಂದ ಸಮರ್ಪಣೆ ಮಾಡಬೇಕು.''

ಭಕ್ತಿಯು ಎಲ್ಲವನ್ನೂ ಪವಿತ್ರವನ್ನಾಗಿ ಮಾಡಿಬಿಡುತ್ತದೆ. ಶ್ರೀಕೃಷ್ಣನೇ ಭಾಗವತದಲ್ಲಿ ಹೀಗೆ ಹೇಳುತ್ತಾನೆ:

**ಯಥಾಗ್ನಿಃ ಸುಸಮೃದ್ಧಾರ್ಚಿಃ ಕರೋತಿ ಏಧಾಂಸಿ ಭಸ್ಮಸಾತ್।**
**ತಥಾ ಮದ್ವಿಷಯಾ ಭಕ್ತಿಃ ಉದ್ಧವ ಏನಾಂಸಿ ಕೃತ್ಸ್ನಶಃ ॥** *(೧೧:೧೪:೧೯)*

''ಓ ಉದ್ಧವ, ಉರಿಯುತ್ತಿರುವ ಅಗ್ನಿಯು ಹೇಗೆ ಇಂಧನವನ್ನು ಸುಟ್ಟು ಬೂದಿ ಮಾಡಿಬಿಡುತ್ತದೆಯೋ, ಹಾಗೆಯೇ ನನ್ನನ್ನು ಕುರಿತಾದ ಭಕ್ತಿಯು ಎಲ್ಲ ಪಾಪಗಳನ್ನೂ ನಾಶಮಾಡಿಬಿಡುತ್ತದೆ.'' ಮುಂದುವರೆದು ಕೃಷ್ಣನು ಉದ್ಧವನಿಗೆ ಹೇಳುತ್ತಾನೆ: ''ಉದ್ಧವ, ನನ್ನನ್ನು ಪಡೆಯಲು ಯೋಗವಾಗಲಿ, ಜ್ಞಾನವಾಗಲಿ, ಧರ್ಮವಾಗಲಿ, ಸ್ವಾಧ್ಯಾಯ, ತಪ ಅಥವಾ ಸಂನ್ಯಾಸವಾಗಲಿ ಸಾಧನಗಳಾಗುವುದಿಲ್ಲ.''

**ಭಕ್ತ್ಯಾ ಅಹಮೇಕಯಾ ಗ್ರಾಹ್ಯಃ ಶ್ರದ್ಧಯಾಽಽತ್ಮಾ ಪ್ರಿಯಃ ಸತಾಮ್।**
**ಭಕ್ತಿಃ ಪುನಾತಿ ಮನ್ನಿಷ್ಠಾ ಶ್ವಪಾಕಾನಪಿ ಸಂಭವಾತ್ ॥** *(೧೧:೧೪:೨೧)*

''ಶ್ರದ್ಧೆಯಿಂದ ಒಡಗೂಡಿದ ಭಕ್ತಿಯಿಂದ ಮಾತ್ರವೇ ಸಾಧುಗಳಿಗೆ ಅತ್ಯಂತ ಪ್ರಿಯನಾದ ನನ್ನನ್ನು ಪಡೆಯಲು ಸಾಧ್ಯ. ನಿಷ್ಠೆಯಿಂದ ಒಡಗೂಡಿದ ಭಕ್ತಿಯೊಂದೇ ಅತ್ಯಂತ ಅಧಮನನ್ನೂ ಪವಿತ್ರನನ್ನಾಗಿ ಮಾಡುವ ಶಕ್ತಿಯುಳ್ಳದ್ದು.''

ಜಗತ್ತಿನ ಎಲ್ಲ ಆಕರ್ಷಣೆಗಳಿಗಿಂತಲೂ ಭಗವಂತನ ಆಕರ್ಷಣೆ ಅತ್ಯಂತ ತೀವ್ರತರವಾದುದು ಎಂದು ಭಾಗವತವು ಬಣ್ಣಿಸುತ್ತದೆ.

**ಆತ್ಮಾರಾಮಾಶ್ಚ ಮುನಯಃ ನಿರ್ಗ್ರಂಥಾ ಅಪಿ ಉರುಕ್ರಮೇ ।**
**ಕುರ್ವಂತಿ ಅಹೈತುಕೀಂ ಭಕ್ತಿಮ್ ಇತ್ಥಂ ಭೂತಗುಣೋ ಹರಿಃ ॥**
*(೧:೭:೧೦)*

''ತಮ್ಮ ಆತ್ಮನಲ್ಲಿಯೇ ಪರಮಸುಖವನ್ನು ಕಂಡುಕೊಂಡು, ಅಹಂಕಾರ ಮುಂತಾದ ಎಲ್ಲ ರೀತಿಯ ಹೃದಯ ಗ್ರಂಥಿಗಳನ್ನೂ ಕಿತ್ತೆಸೆದ ಮುನಿಗಳು ಕೂಡ ಭಗವಂತನಲ್ಲಿ ನಿಷ್ಕಾರಣವಾದ ಭಕ್ತಿಯನ್ನು ಮಾಡುತ್ತಾರೆ. ಹರಿಯು ಇಂಥ ಅದ್ಭುತವಾದ ಕಲ್ಯಾಣ ಗುಣಗಳನ್ನು ಹೊಂದಿದ್ದಾನೆ!''

### ಸಾಧು-ಸಂಗ

ಪರಮಾತ್ಮನಲ್ಲಿ ನಿಕಟವಾದ ಪ್ರೀತಿಯನ್ನು ಬೆಳೆಸಿಕೊಳ್ಳುವುದೇ ಪರಮಸಾಧನೆ ಎನ್ನುವುದನ್ನು ನೋಡಿದೆವು. ಈ ಬಗೆಯ ಭಕ್ತಿಯನ್ನು ಬೆಳೆಸಿಕೊಳ್ಳುವುದು ಹೇಗೆ? ಅದಕ್ಕೆ ಬೇಕಾದ ಸಹಕಾರಿ ಸಾಧನೆಯೆಂದರೆ **ಸಾಧುಸಂಗ** ಎನ್ನುತ್ತದೆ ಭಾಗವತ. ಶ್ರೀಶುಕ ಮುನಿ ಸಾಧುಸಂಗದ ಮಹಿಮೆಯನ್ನು ಹೀಗೆ ಕೊಂಡಾಡುತ್ತಾನೆ:

**ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತ ಸೇವಯಾ ।**
**ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥** *(೧:೨:೧೮)*

''ಅಮಂಗಳಕರವಾದ ಪಾಪವೃತ್ತಿಗಳು ಭಕ್ತಿಯ ಉಗಮಕ್ಕೆ ಅಡೆತಡೆಗಳನ್ನು ಒಡ್ಡುತ್ತವೆ. ಅವುಗಳನ್ನು ನಿವಾರಿಸಿಕೊಳ್ಳುವ ಒಂದೇ ಉಪಾಯವೆಂದರೆ ಭಗವದ್ಭಕ್ತರ ಸೇವೆ. ಅದರಿಂದ ಭಗವಂತನಲ್ಲಿ ನಿಷ್ಠೆಯಿಂದ ಒಡಗೂಡಿದ ಭಕ್ತಿಯ ಸಿದ್ಧಿಸುತ್ತದೆ.''

ಚಕ್ರವರ್ತಿಯಾದ ಪೃಥು ಮಹಾರಾಜನು ಹೀಗೆ ಉದ್ಗರಿಸುತ್ತಾನೆ: ''ನಾನು ಜೀವಿಸಿರುವವರೆಗೂ ಮಹಾತ್ಮರ ಪಾದರೇಣುವನ್ನು ನನ್ನ ಕಿರೀಟದಲ್ಲಿ ಯಾವತ್ತೂ ಧರಿಸಿರುವಂತಾಗಲಿ! ಈ ರೀತಿ ಮಾಡಿದವರು ಮಾಡುವ ದಿನನಿತ್ಯದ ಪಾಪಗಳು ತೊಳೆದು ಹೋಗುತ್ತವೆ. ಅದರ ಸ್ಥಾನದಲ್ಲಿ ಸರ್ವಸದ್ಗುಣಗಳೂ ಮೈದೋರುತ್ತವೆ.''

ಭಗವಂತ ಭಕ್ತಪರಾಧೀನ! ಇದನ್ನು ಕೃಷ್ಣನೇ ಹೀಗೆ ಒಪ್ಪಿಕೊಳ್ಳುತ್ತಾನೆ: ''ದಾಸನಂತೆ ನಾನು ಭಕ್ತರ ಅಧೀನನಾಗಿದ್ದೇನೆ. ಭಕ್ತರಿಗೆ ನಾನು ಅತ್ಯಂತ ಪ್ರಿಯನಾಗಿರುವುದರಿಂದ, ನನ್ನ ಹೃದಯವನ್ನು ಅವರು ಸೆಳೆದೊಯ್ದಿದ್ದಾರೆ.''

**ಸಾಧವೋ ಹೃದಯಂ ಮಹ್ಯಂ, ಸಾಧೂನಾಂ ಹೃದಯಂ ತ್ವಹಂ।**
**ಮದನ್ಯತ್ ತೇ ನ ಜಾನಂತಿ, ನಾಹಂ ತೇಭ್ಯೋ ಮನಾಗಪಿ ॥**
*(೯:೪:೬೮)*

''ನನ್ನ ಹೃದಯ ಸಾಧುಗಳಲ್ಲಿಯೇ ನೆಲೆನಿಂತಿದೆ; ಸಾಧುಗಳ ಹೃದಯ ಕೂಡ ನನ್ನಲ್ಲಿಯೇ ನೆಲೆನಿಂತಿದೆ. ನನ್ನನ್ನು ಬಿಟ್ಟು ಅವರು ಮನಸ್ಸಿನಲ್ಲಿ ಏನೂ ಭಾವಿಸರು. ಅವರನ್ನು ಬಿಟ್ಟು ನನಗೆ ಕೂಡ ಯಾರೂ ಇಲ್ಲ.''

ಸರ್ವವನ್ನೂ ತ್ಯಾಗ ಮಾಡಿ, ಶಾಂತರೂ ಬ್ರಹ್ಮನಿಷ್ಠರೂ ಆಗಿರುವ ಸಾಧುಗಳು **ಲೋಕಪಾವನಾಃ** - ಮೂರು ಲೋಕಗಳನ್ನೂ ಪಾವನಗೊಳಿಸುವ ಮಹಾತ್ಮರು. ಅವರ ಸಂಪರ್ಕಮಾತ್ರದಿಂದ ಪಾಪಗಳೆಲ್ಲವೂ ಕಳೆದುಹೋಗುತ್ತವೆ. ಏಕೆಂದರೆ ಪತಿತಪಾವನನಾದ ಹರಿಯು ಅವರ ಹೃದಯಗಳಲ್ಲಿ ಎಂದಿಗೂ ನೆಲೆಸಿರುತ್ತಾನೆ.

### ನವವಿಧಾ ಭಕ್ತಿ

ಸಾಧುಪುರುಷರ ಸಂಗ, ಗುರುಗಳ ಅನುಗ್ರಹ - ಇವು ಭಕ್ತಿಯನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತವೆ. ಸಾಧಕನು ಮಾಡುವ ಭಕ್ತಿಯು ಒಂಭತ್ತು ವಿಧಗಳಲ್ಲಿ ವ್ಯಕ್ತವಾಗುತ್ತದೆ ಎಂದು ಭಾಗವತ ಹೇಳುತ್ತದೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥**
**ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ।**
**ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇ ಅಧೀತಮುತ್ತಮಮ್ ॥**
*(೭:೫:೨೩-೨೪)*

ಭಕ್ತಿ ಸಾಧನೆಯು ಈ ಒಂಭತ್ತು ರೂಪಗಳನ್ನು ತಾಳುತ್ತದೆ :

೧. **ಶ್ರವಣಂ :** ಹರಿಯ ಮಹಿಮೆಯನ್ನು ಅನವರತವೂ ಕೇಳುತ್ತಿರುವುದು.

೨. **ಕೀರ್ತನಂ :** ಆತನ ಸಂಕೀರ್ತನವನ್ನು ಯಾವತ್ತೂ ಮಾಡುತ್ತಿರುವುದು.

೩. **ಸ್ಮರಣಂ :** ಹಾಗೆಯೇ ಭಗವಂತನ ಸ್ಮರಣೆಯನ್ನೂ ಮಾಡುವುದು.

೪. **ಪಾದಸೇವನಂ:** ಭಗವಾನ್ ಶ್ರೀಹರಿಯನ್ನು (ವಿಗ್ರಹಗಳ ಸೇವೆ, ಸಾಧುಸಂತರ ಸೇವೆ ಮತ್ತು ಎಲ್ಲ ಜೀವಿರಾಶಿಗಳಿಗೆ ಸೇವೆ ಸಲ್ಲಿಸುವುದರ) ಮೂಲಕ ಸೇವಿಸುವುದು.

೫. **ಅರ್ಚನಂ :** ಪವಿತ್ರ ವಿಗ್ರಹಗಳಲ್ಲಿ ಭಗವಂತನನ್ನು ಆವಾಹಿಸಿ ಪೂಜಿಸುವುದು.

೬. **ವಂದನಂ :** ಪರಮಾತ್ಮನನ್ನು ಎಲ್ಲ ಜೀವರಾಶಿಗಳಲ್ಲಿ ಕಂಡು ವಂದನೆಯನ್ನು ಸಲ್ಲಿಸುವುದು.

೭. **ದಾಸ್ಯಂ :** ತಾನು ಶ್ರೀಹರಿಯ ಸೇವಕ ಎಂಬ ಭಾವವನ್ನು ತಳೆಯುವುದು.

೮. **ಸಖ್ಯಂ :** ಪರಮಾತ್ಮನಲ್ಲಿ ಸ್ನೇಹಭಾವವನ್ನು ಹೊಂದುವುದು .

೯. **ಆತ್ಮನಿವೇದನಂ :** ತನ್ನನ್ನು ಭಗವಂತನಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವುದು.

ಯಾವ ವ್ಯಕ್ತಿಯು ಈ **ನವವಿಧಾಭಕ್ತಿ**ಯನ್ನು ಶ್ರದ್ಧೆ ಮತ್ತು ನಿಸ್ಪೃಹ ಬುದ್ಧಿಗಳಿಂದ ಶ್ರೀಹರಿಗೆ ಅರ್ಪಿಸುತ್ತಾನೆಯೋ ಅವನೇ ನಿಜವಾಗಿಯೂ ಉತ್ತಮ ಶಿಕ್ಷಣವನ್ನು ಪಡೆದ ವಿದ್ವಾಂಸನು. ಇದು ಭಾಗವತದ ಖಚಿತ ಅಭಿಪ್ರಾಯ. ಹೀಗಾಗಿ ಕೇವಲ ಲೌಕಿಕ ಅಥವಾ ಆಧ್ಯಾತ್ಮಿಕ ವಿದ್ಯೆಗಳು ಅಪ್ರಯೋಜಕವಾದುವು ಎನ್ನುವುದು ಗೊತ್ತಾಗುತ್ತದೆ.

ಇಂಥ ಭಕ್ತಿಯನ್ನು ಯಾರಾದರೂ ಪರಿಪೂರ್ಣ ಭಾವದಿಂದ ಆಚರಿಸಿದ ಬಗ್ಗೆ ನಮಗೆ ಒಳ್ಳೆಯ ನಿದರ್ಶನ ಲಭಿಸುತ್ತದೆಯೆ? ಅದಕ್ಕೆ ಭಾಗವತವು ಪರಮ ಭಾಗವತೋತ್ತಮನಾದ ಅಂಬರೀಶನ ಉದಾಹರಣೆಯನ್ನು ನೀಡುತ್ತದೆ. ಆತನ ನಡೆನುಡಿ ಸ್ವಭಾವಗಳ ಸುಂದರ ವರ್ಣನೆಯನ್ನು ಭಾಗವತದಲ್ಲಿ ಹೀಗೆ ನೋಡುತ್ತೇವೆ. ಆತನ ಸರ್ವಾಂಗಗಳೂ, ಎಲ್ಲ ಆಚರಣೆಗಳೂ ಭಗವತ್‌ಕೇಂದ್ರಿತವಾಗಿಯೇ ಇದ್ದವು ಎನ್ನುವುದನ್ನು ಈ ನಿರೂಪಣೆಯಲ್ಲಿ ಸ್ವಭಾವ ಸಹಜ ರೂಪದಲ್ಲಿ ಕಾಣುತ್ತೇವೆ :

೧. ಅಂಬರೀಶನ ಮನಸ್ಸು ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಸಂಪೂರ್ಣವಾಗಿ ನೆಲೆಗೊಂಡಿತ್ತು.

೨. ಅವನ ಮಾತುಗಳು ಯಾವತ್ತೂ ವೈಕುಂಠಪತಿಯ ಗುಣಗಳನ್ನು ಬಣ್ಣಿಸುವುದರಲ್ಲಿಯೇ ನಿರತವಾಗಿತ್ತು.

೩. ಆತನ ಕೈಗಳು ಹರಿಮಂದಿರಗಳನ್ನು ಸ್ವಚ್ಛಮಾಡುವುದರಲ್ಲಿಯೇ ತೊಡಗಿದ್ದವು.

೪. ಅಂಬರೀಶನ ಕಿವಿಗಳು ಯಾವತ್ತೂ ಹರಿಯ ಕಥೆಗಳನ್ನು ಕೇಳುವುದರಲ್ಲಿಯೇ ತತ್ಪರವಾಗಿಬಿಟ್ಟಿದ್ದವು.

೫. ಅವನ ಕಣ್ಣುಗಳು ಮುಕುಂದನ ವಿಗ್ರಹಗಳನ್ನು ನೋಡುವುದರಲ್ಲಿಯೇ ತಮ್ಮ ಶಕ್ತಿಯನ್ನೆಲ್ಲ ವ್ಯಯಿಸುತ್ತಿದ್ದವು.

೬. ಅವನ ಸ್ಪರ್ಶೇಂದ್ರಿಯವು ಭಗವದ್ಭಕ್ತರ ಪಾದಸ್ಪರ್ಶದಲ್ಲಿಯೇ ಆನಂದವನ್ನು ಹೊಂದುತ್ತಿತ್ತು.

೭. ಅವನ ಘ್ರಾಣೇಂದ್ರಿಯವು ಭಗವಂತನ ಪೂಜೆಗೆ ಉಪಯೋಗವಾದ ತುಲಸೀದಳಗಳ ಆಸ್ವಾದನೆಯಲ್ಲಿಯೇ ನಿರತವಾಗಿತ್ತು.

೮. ಅವನ ನಾಲಗೆಯು ಭಗವಂತನ ಪ್ರಸಾದವನ್ನು ಭುಂಜಿಸುತ್ತಿತ್ತು.

೯. ಅಂಬರೀಶನ ಕಾಲುಗಳು ತೀರ್ಥಕ್ಷೇತ್ರಗಳ ಪ್ರವಾಸದಲ್ಲಿಯೇ ಸವೆಯುತ್ತಿದ್ದವು.

೧೦. ಆತನ ಶಿರಸ್ಸು ಹೃಷೀಕೇಶನ ಪಾದಗಳಿಗೆ ಸದಾ ವಂದಿಸುತ್ತಿತ್ತು (ಅಂಬರೀಶನು ಸಕಲ ಜೀವರಾಶಿಗಳಲ್ಲಿಯೂ ಪರಮಾತ್ಮನನ್ನೇ ಕಂಡು, ಎಲ್ಲರೊಡನೆ ವಿನೀತಭಾವದಿಂದ ಇರುತ್ತಿದ್ದನು.)

೧೧. ಭಗವಂತನ ದಾಸನಾಗಿ ಇರಬೇಕು ಎಂಬ ಒಂದೇ ಕಾಮನೆಯನ್ನು ಅವನು ಹೊಂದಿದ್ದನು. ಯಾವ ರೀತಿಯ ಸ್ವಾರ್ಥ ಭಾವನೆಯ ಕಾಮನೆಯೂ ಅವನ ಮನಸ್ಸಿನಲ್ಲಿ ಸುಳಿಯುತ್ತಿರಲಿಲ್ಲ.

ಈ ಬಗೆಯ ಭಕ್ತಿಯು ಅತ್ಯಂತ ಪ್ರಭಾವಶಾಲಿಯಾದುದು, ಅತ್ಯಂತ ಸಹಜವೂ ಸರಳವೂ ಆದದ್ದು. ವೃತ್ರನೆಂಬ ಭಕ್ತನು ತನ್ನ ಈ ಪ್ರಾರ್ಥನೆಯಲ್ಲಿ ನಿಜವಾದ ಭಕ್ತನ ಮಾನಸಿಕ ತುಮುಲವನ್ನು ಸಂವೇದನಾತ್ಮಕವಾಗಿ ಹೀಗೆ ತೋಡಿಕೊಂಡಿದ್ದಾನೆ:

**ಅಹಂ ಹರೇ ತವ ಪಾದೈಕಮೂಲ-**
**ದಾಸಾನುದಾಸೋ ಭವಿತಾಽಸ್ಮಿ ಭೂಯಃ ।**
**ಮನಃ ಸ್ಮರೇತಾಽಸುಪತೇಃ ಗುಣಾಂಸ್ತೇ**
**ಗೃಣೀತ ವಾಕ್ ಕರ್ಮ ಕರೋತು ಕಾಯಃ ॥** *(೬:೧೧:೨೪)*

''ಪ್ರಭೂ, ಓ ಹರಿ! ನಿನ್ನ ಪಾದಗಳ ದಾಸಾನುದಾಸನಾಗಿ ನಾನು ಮತ್ತೆ ಮತ್ತೆ ಹುಟ್ಟಿಬರುವಂತೆ ಆಗಲಿ. ಹಾಗೆ ಆದಾಗಲೆಲ್ಲ ಮನಸ್ಸು ಭಗವಂತನನ್ನು ಸ್ಮರಿಸುತ್ತಿರಲಿ; ವಾಕ್ಕು ಭಗವಂತನ ಗುಣಗಳನ್ನು ಕೊಂಡಾಡುತ್ತಿರಲಿ; ನನ್ನ ಶರೀರವು ಭಗವಂತನ ಸೇವೆಯಲ್ಲಿಯೇ ನಿರತವಾಗಿರಲಿ.''

ಮೈತ್ರೇಯ ಮಹರ್ಷಿಗಳು ಹೀಗೆ ಉದ್ಗರಿಸುತ್ತಾರೆ: ''ಭಗವಂತನ ಕಲ್ಯಾಣಗುಣಗಳ ವರ್ಣನೆಯನ್ನು ಕೇಳುವುದರಲ್ಲಿಯೇ ಸಂಸಾರದುಃಖವೆಲ್ಲವೂ ಕಳೆದು ಹೋಗುತ್ತದೆ. ಇನ್ನು ಮನಸ್ಸಿನಲ್ಲಿ ಆತನ ಪಾದಕಮಲಗಳನ್ನು ಧ್ಯಾನಿಸುವುದು ಅದೆಷ್ಟು ಆನಂದವನ್ನು ಉಂಟುಮಾಡಬಹುದು!''

ಭಗವಂತನ ಪುಣ್ಯಕಥೆಗಳ ಶ್ರವಣ ಮತ್ತು ಕೀರ್ತನೆಗಳು ವ್ರತ-ಉಪವಾಸಗಳಿಗಿಂತಲೂ ಶ್ರೇಷ್ಠವಾದುವು ಎಂದು ಯಮಧರ್ಮರಾಯನೇ ಹೇಳುತ್ತಾನೆ:

**ಶ್ರುಣ್ವತಾಂ ಗೃಣತಾಂ ವೀರ್ಯಾಣಿ ಉದ್ದಾಮಾನಿ ಹರೇರ್ಮುಹುಃ ।**
**ಯಥಾ ಸುಜಾತಯಾ ಭಕ್ತ್ಯಾ ಶುದ್ಧಯೇತ್ ಆತ್ಮಾ ವ್ರತಾದಿಭಿಃ ॥**
*(೬:೩:೩೨)*

''ಭಗವಂತನ ಪರಾಕ್ರಮಗಳ ಬಗ್ಗೆ ಮತ್ತೆ ಮತ್ತೆ ಕೇಳುತ್ತಿರುವುದು, ಕೊಂಡಾಡುತ್ತಿರುವುದು ಭಕ್ತಿಯನ್ನು ಉದ್ದೀಪಿಸುತ್ತದೆ; ಅಂಥ ಭಕ್ತಿಯು ಭಕ್ತನಲ್ಲಿ ಆತ್ಮಶುದ್ಧಿಯನ್ನು ಉಂಟುಮಾಡುತ್ತದೆ. ಈ ಬಗೆಯ ಪರಿಶುದ್ಧತೆಯು ಯಾವ ಬಗೆಯ ವ್ರತದಿಂದಲೂ ಉಂಟಾಗುವುದಿಲ್ಲ.''

ಈಗ ಪ್ರತಿಯೊಂದು ಸಾಧನೆಯ ಬಗ್ಗೆ ಭಾಗವತ ಏನು ಹೇಳುತ್ತದೆ ಎನ್ನುವುದನ್ನು ಸಂಕ್ಷಿಪ್ತವಾಗಿ ತಿಳಿದುಕೊಳ್ಳೋಣ:

### ಶ್ರವಣ

ಭಾಗವತದ ಪ್ರಕಾರ ಎಲ್ಲ ಧರ್ಮಗಳ ಉದ್ದೇಶವೇ ಭಗವಂತನ ಕೀರ್ತನೆಗಳನ್ನು ಕೇಳುವುದರಲ್ಲಿ ಆಸಕ್ತಿಯನ್ನೂ, ರುಚಿಯನ್ನೂ ಕೆರಳಿಸುವುದು. ಭಗವತ್ಕಥಾಶ್ರವಣದಲ್ಲಿ 'ರತಿ' ಅಥವಾ ಆನಂದವನ್ನು ಉಂಟುಮಾಡದ ಧರ್ಮಾಚರಣೆಗಳು ವ್ಯರ್ಥವೇ ಸರಿ! ಅದು ಬರಿಯ ಶ್ರಮ ಮಾತ್ರ.

ಭಗವತ್ಕಥಾಶ್ರವಣವು ಹಸಿವು, ನೀರಡಿಕೆಗಳನ್ನೂ ಇಂಗಿಸಿಬಿಡುತ್ತದೆ. ಪರೀಕ್ಷಿತನು ಏಳು ದಿವಸಗಳ ಕಾಲ ಸತತವಾಗಿ ಭಾಗವತ ಶ್ರವಣವನ್ನು ಮಾಡಿದನು. ಅವನು ತನ್ನ ಅನುಭವವನ್ನು ಶುಕ ಮಹರ್ಷಿಯಲ್ಲಿ ಹೀಗೆ ತೋಡಿಕೊಳ್ಳುತ್ತಾನೆ:

**ನೈಷಾತಿದುಃಸಹಾ ಕ್ಷುನ್ಮಾಂ ತ್ಯಕ್ತೋದಕಮಪಿ ಬಾಧತೇ ।**
**ಪಿಬಂತಂ ತ್ವನ್ಮುಖಾಂಭೋಜಚ್ಯುತಂ ಹರಿಕಥಾಮೃತಂ ॥**
*(೧೦:೧:೧೩)*

''ಒಂದು ಹನಿ ನೀರನ್ನೂ ಕುಡಿಯದೆ ನಿನ್ನ ಮುಖಕಮಲಗಳಿಂದ ಹೊರಸೂಸುತ್ತಿರುವ ಹರಿಕಥಾಮೃತವನ್ನು ಪಾನ ಮಾಡುತ್ತಿದ್ದೇನೆ. ಹೀಗಾಗಿ ಸಹಿಸಲು ಅತ್ಯಂತ ಕಷ್ಟವಾದ ಹಸಿವು ಕೂಡ ನನ್ನನ್ನು ಬಾಧಿಸುತ್ತಲೇ ಇಲ್ಲ.''

ಭಗವಂತನ ಕಥಾಶ್ರವಣವು ಅತಿಶಯವಾದ ಆನಂದವನ್ನು ತಂದುಕೊಡುತ್ತದೆ ಎಂದು ಶುಕನು ಹೇಳುತ್ತಾನೆ. ಭಗವದ್ಭಕ್ತರ, ಮಹಾತ್ಮರ ಕಥೆಗಳನ್ನು ಕೇಳುವುದೇ ಮಹತ್ತರವಾದ ಸಂತೋಷವನ್ನು ನೀಡುತ್ತದೆ. ಇನ್ನು ಭಗವಂತನ ಕಥೆಗಳನ್ನು ಕೇಳುವುದರಿಂದ ಅದೆಷ್ಟು ಮಿಗಿಲಾದ ಆನಂದ ಲಭಿಸುತ್ತದೆ, ಊಹಿಸಿಕೊಳ್ಳಿ ಎನ್ನುವುದು ಅವನ ವಾದ.

**ಕೀರ್ತನೆ**

ನಾರದ ಕೀರ್ತನಶಿರೋಮಣಿ. ಯಾವತ್ತೂ ಭಗವಂತನ ಲೀಲಾಕಥನದಲ್ಲಿಯೇ ಕಾಲವನ್ನು ಕಳೆಯುವವನು. ಅಂಥವನ ಅನುಭವವನ್ನು ಕೇಳೋಣ:

**ಪ್ರಗಾಯತಃ ಸ್ವವೀರ್ಯಾಣಿ ತೀರ್ಥಪಾದಃ ಪ್ರಿಯಶ್ರವಾಃ ।**
**ಆಹೂತ ಇವ ಮೇ ಶೀಘ್ರಂ ದರ್ಶನಂ ಯಾತಿ ಚೇತಸಿ ॥** *(೧:೬:೩೪)*

‘‘ಭಗವಂತನು ತೀರ್ಥಪಾದನು (ಪವಿತ್ರತೆಯ ಪ್ರತಿರೂಪ). ಪ್ರಿಯಶ್ರವನು (ತನ್ನ ಗುಣಗಳಿಂದಾಗಿ ಪ್ರಸಿದ್ಧನು). ಅವನ ಉದಾತ್ತ ಲಕ್ಷಣಗಳ ಬಗ್ಗೆ ನಾನು ಹಾಡುತ್ತಿದ್ದರೆ, ಕರೆಸಿಕೊಂಡವನಂತೆ, ಅವನೇ ನನ್ನ ಮನಸ್ಸನ್ನು ಪ್ರವೇಶಿಸಿಬಿಡುತ್ತಾನೆ; ಶೀಘ್ರವೇ ದರ್ಶನವನ್ನು ಕೊಡುತ್ತಾನೆ.’’

ಹೀಗೆ ಅನವರತವೂ ಭಗವಂತನನ್ನು ಕೊಂಡಾಡುವುದರಿಂದ ಅಂತ್ಯಕಾಲದಲ್ಲಿಯೂ ಭಗವಂತನ ನಾಮಸ್ಮರಣೆಯು ಬಹಳ ಸುಲಭವಾಗಿ ಉಂಟಾಗಿಬಿಡುತ್ತದೆ. ಬ್ರಹ್ಮದೇವನೇ ಭಗವನ್ನಾಮವನ್ನು ದೇಹಾವಸಾನ ಕಾಲದಲ್ಲಿ ಸ್ಮರಿಸುವುದರ ಮಹತ್ವವನ್ನು ಒತ್ತಿ ಹೇಳುತ್ತಾನೆ. ಇದಕ್ಕೆ ಅಜಾಮಿಳನ ಉದಾಹರಣೆಯನ್ನು ಭಾಗವತ ಹೀಗೆ ನೀಡುತ್ತದೆ:

**ಮ್ರಿಯಮಾಣೋ ಹರೇರ್ನಾಮ ಗೃಣನ್ ಪುತ್ರೋಽಪಚಾರಿತಮ್ ।**
**ಅಜಾಮಿಲೋಽಪ್ಯಗಾತ್ ಧಾಮ ಕಿಂ ಪುನಃ ಶ್ರದ್ಧಯಾ ಗೃಣನ್ ॥**
*(೬:೨:೪೯)*

‘‘ಅಜಾಮಿಳನು ತನ್ನ ಪುತ್ರನನ್ನು ಕರೆಯುತ್ತ ಹರಿಯ ನಾಮವನ್ನು ಉಚ್ಚರಿಸಿದನು. ಅಂಥವನೂ ಪರಂಧಾಮವನ್ನು ಪಡೆದುಕೊಂಡನು. ಇನ್ನು ಶ್ರದ್ಧೆಯಿಂದ ಭಗವಂತನ ನಾಮವನ್ನು ಕೀರ್ತನೆ ಮಾಡುವವರ ವಿಷಯದಲ್ಲಿ ಹೇಳುವುದೇನಿದೆ?’’

***ಭಾಗವತದ ಆವೃತ್ತಿಗಳು:***

1. **ಶ್ರೀಮದ್ಭಾಗವತ ಮಹಾಪುರಾಣ,** (ಸಂಸ್ಕೃತ ಮೂಲ ಮತ್ತು ಹಿಂದೀ ಅನುವಾದ), ಗೀತಾ ಪ್ರೆಸ್, ಗೋರಖ್‌ಪುರ

2. **ಶ್ರೀ ಭಾಗವತ ಮಹಾಪುರಾಣ** (ದಿ. ಮೋಟಗಾನಹಳ್ಳಿ ರಾಮಶೇಷಶಾಸ್ತ್ರೀ ಇವರ ಕನ್ನಡಾನುವಾದ, ಟೀಕಾತಾತ್ಪರ್ಯ ಸಹಿತ, 8 ಸಂಪುಟಗಳಲ್ಲಿ) ಶ್ರೀವಿದ್ಯಾಗಣಪತಿ ಪ್ರಕಾಶನ, 76, 3ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು 560028

3. **ಶ್ರೀಮದ್ಭಾಗವತ,** (ಮೂಲದೊಡನೆ ಸರಳ ಕನ್ನಡಾನುವಾದ – 9 ಸಂಪುಟಗಳಲ್ಲಿ) ಭಾರತ ದರ್ಶನ ಪ್ರಕಾಶನ, ಭಾರತ ದರ್ಶನ ಮುದ್ರಣಾಲಯ, 163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು 560 028, ಫೋ: 26765381

4. **ವಚನ ಭಾಗವತ,** (ಸರಳ ಸಂಗ್ರಹ ಕನ್ನಡ ಗದ್ಯರೂಪದ ಭಾಗವತ ನಿರೂಪಣೆ), ತ. ಸು. ಶಾಮರಾಯ, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು 570 020, ಪು. 380, ಬೆಲೆ: ರೂ.130/–





ಪತಂಜಲಿ ಮಹರ್ಷಿ

# 'ಪಾತಂಜಲ ಯೋಗ ದರ್ಶನ'ದ ಸಾಧನ ಮಾರ್ಗ

ಸ್ವಾಮಿ ಮುಕ್ತಿದಾನಂದ

**'ಪಾತಂಜಲ ಯೋಗ ದರ್ಶನ'ವು ಭಾರತೀಯ ಷಡ್ದರ್ಶನಗಳಲ್ಲಿ ಒಂದಾದ ಯೋಗದರ್ಶನದ ಆಧಾರಗ್ರಂಥವಾಗಿದ್ದರೂ, ಸಾಧನೆಗೆ ಸಂಬಂಧಿಸಿದಂತೆ ಇದರ ಪ್ರಾಯೋಗಿಕ ವಿಧಾನಗಳನ್ನು ಎಲ್ಲ ದರ್ಶನಗಳ, ಎಲ್ಲ ಪಂಥಗಳ ಆಚಾರ್ಯರೂ ಸ್ವೀಕರಿಸಿರುವುದು ಈ ಕೃತಿಯ ಮಹತ್ವವನ್ನು ಸೂಚಿಸುತ್ತದೆ. ಈ ಕೃತಿಯನ್ನು ತಾತ್ತ್ವಿಕವಾಗಿ ವಿವರಿಸಿ ವಿಶ್ಲೇಷಿಸಿರುವ ಪೂಜ್ಯ ಸ್ವಾಮೀಜಿಯವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರು. ರಾಮಕೃಷ್ಣ ಮಹಾಸಂಘದ ವಿಶ್ವಸ್ತ ಮಂಡಲಿಯ ಸದಸ್ಯರಾಗಿರುವ ಅವರು ಉತ್ತಮ ಚಿಂತಕರೂ, ಪ್ರವಚನಕಾರರೂ, ಲೇಖಕರೂ ಆಗಿದ್ದಾರೆ.**

'**ಪಾತಂಜಲ ಯೋಗ ಸೂತ್ರ**'ವೆಂಬುದು ಪತಂಜಲಿ ಮಹರ್ಷಿಯ ಸಮಕಾಲೀನ ಮತ್ತು ಅದಕ್ಕೂ ಪೂರ್ವಭಾವಿಯಾಗಿ ಅನುಷ್ಠಾನಕ್ಕೆ ಬಂದಂತಹ ಆಧ್ಯಾತ್ಮಿಕ ಚಿಂತನೆ ಮತ್ತು ಅದರ ಪ್ರಾಯೋಗಿಕ ಅಭ್ಯಾಸಗಳ ಸಾರ. ಇದು ಅತಿ ಸಂಕ್ಷಿಪ್ತವಾಗಿ ಆಧ್ಯಾತ್ಮಿಕ ಸತ್ಯ ಮತ್ತು ಅದರ ಸಾಧನ ಮಾರ್ಗವನ್ನು ತಿಳಿಸುವ ಸೂತ್ರಸಾಹಿತ್ಯ.

'ಯೋಗಸೂತ್ರ' ಮಾನವನ ಮುಖ್ಯ ಉಪಕರಣವಾದ ಮನಸ್ಸಿನ ಪ್ರಕ್ರಿಯೆಗಳನ್ನು ಆಳವಾಗಿ ಅರಿತು ನೇರವಾಗಿ ಮತ್ತು ಹಂತಹಂತವಾಗಿ ನಮಗೆ ಆಧ್ಯಾತ್ಮಿಕ ಸಾಧನೆಗೆ ಮಾರ್ಗದರ್ಶನವನ್ನು ಮಾಡುವ ಪ್ರಾಯೋಗಿಕ ಗ್ರಂಥ. ಆದ್ದರಿಂದ ಆಧ್ಯಾತ್ಮಿಕ ಸಾಧಕರ ಜೀವನದಲ್ಲಿ ಇದಕ್ಕೊಂದು ವಿಶಿಷ್ಟವಾದ ಸ್ಥಾನವಿದೆ.

ಭಾರತದಲ್ಲಿ ಪತಂಜಲಿ ಮಹರ್ಷಿಗಿಂತ ಮೊದಲೇ ಯೋಗ ಸಾಧನೆಯು ಬೇರೆ ಬೇರೆ ಮೂಲಗಳಿಂದ ಉಗಮವಾದ ಆಧ್ಯಾತ್ಮಿಕ ಪರಂಪರೆಗಳಲ್ಲಿ ಪ್ರಚಲಿತವಾಗಿತ್ತು. ಪತಂಜಲಿ ಮಹರ್ಷಿಯು ಅವುಗಳನ್ನು ಕ್ರೋಢೀಕರಿಸಿ, ಅವುಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ, ಸಮನ್ವಯೀಕರಿಸಿ ಅದರ ಮುಖ್ಯಾಂಶಗಳನ್ನು ಅನುಕ್ರಮವಾಗಿ ಸೂತ್ರರೂಪದಲ್ಲಿ ನಮಗೆ ನೀಡಿದ್ದಾರೆ.

### ಯೋಗ ಸಾಧನೆಯ ಪಕ್ಷಿನೋಟ :

ಯೋಗಸೂತ್ರವು ಸಾಂಖ್ಯತತ್ವವನ್ನು ಆಧರಿಸಿದೆ. ಯೋಗದ ಆತ್ಯಂತಿಕ ಗುರಿಯೇ ಪ್ರಕೃತಿ-ಪುರುಷರ ವಿಯೋಗ ಮತ್ತು ತನ್ಮೂಲಕ ಕೈವಲ್ಯವನ್ನು ಪಡೆಯುವುದು.

ಯೋಗಸಾಧನೆಯ ಮುಖ್ಯ ಉದ್ದೇಶ ಚಿತ್ತವೃತ್ತಿ* ನಿರೋಧದ ಮೂಲಕ ಏಕಾಗ್ರತೆಯನ್ನು ಪಡೆಯುವುದು. ನಿರೋಧವೆಂದರೆ ಕ್ಲೇಶ-ಸಂಸ್ಕಾರಗಳನ್ನು ಹಾಗೂ ಕ್ಲೇಶವೃತ್ತಿಯನ್ನು ನಿಷ್ಕ್ರಿಯಗೊಳಿಸುವುದು; ಇದಕ್ಕೂ ಮೊದಲು 'ಸಂಸ್ಕಾರಗಳ ತನೂಕರಣ' ವಾಗಬೇಕೆಂದು ಯೋಗಸೂತ್ರದಲ್ಲಿ ಹೇಳಲಾಗಿದೆ.

ಯೋಗ ಶಬ್ದದ ಮೂಲ ಧಾತುವಾದ '**ಯುಜ್**'ನ ಅರ್ಥ ವಿವರಣೆಯಾದ '**ಯುಜ್ ಸಮಾಧೌ**' ಎಂಬುದು ಯೋಗಸೂತ್ರದ ಆಧಾರವಾಗಿದೆ. **ಯುಜಿರ್ ಯೋಗೇ** ಎಂಬುದು ಯುಜ್ ಧಾತುವಿನ ಇನ್ನೊಂದು ವಿವರಣೆ ಜೀವಾತ್ಮ-ಪರಮಾತ್ಮರ ಐಕ್ಯತೆಯನ್ನು ಸೂಚಿಸುವ ಇತರ ಯೋಗಮಾರ್ಗಗಳ ಆಧಾರ. ಯೋಗಮಾರ್ಗವು ಪ್ರಕೃತಿ ಆಶ್ರಯವುಳ್ಳದ್ದಾದರೆ, ವೇದಾಂತವು ಪುರುಷ ಕೇಂದ್ರಿತವಾಗಿರುವಂತಹದು.

---

* ಚಿತ್ತದಲ್ಲಿ ಉದ್ಭವವಾಗುವ ಚಿಂತನೆಯ ಅಲೆಗಳಿಗೆ '**ವೃತ್ತಿ**'ಗಳೆಂದು ಹೆಸರು. ಶ್ರೀಶಂಕರರು ಚಿತ್ತವೃತ್ತಿಯನ್ನು **ಪ್ರತ್ಯಯ** ಎಂದು ಕರೆದಿದ್ದಾರೆ. ಚಿತ್ತದಲ್ಲಿ ಏಳುವ ವೃತ್ತಿಗಳ ಮೂಲಕ ಮಾತ್ರ ಪ್ರಪಂಚದಲ್ಲಿರುವ ವಿಷಯಗಳ ಮತ್ತು ವಸ್ತುಗಳ ಜ್ಞಾನವುಂಟಾಗುವುದು. ಆದ್ದರಿಂದ ಪಂಚಶಿಖಾಚಾರ್ಯರು '**ಏಕಮೇವ ದರ್ಶನಂ ವೃತ್ತಿರೇವ ದರ್ಶನಂ**' ಎಂದು ಹೇಳುತ್ತಾರೆ. ಈ ವೃತ್ತಿಜ್ಞಾನವನ್ನೇ '**ಖ್ಯಾತಿ**'ಯೆಂದು ಕರೆದಿದ್ದಾರೆ. ಮನಸ್ಸಿನ ಮೂಲಕ ಪಡೆಯುವ ಎಲ್ಲ ಜ್ಞಾನಗಳಿಗೂ 'ಖ್ಯಾತಿ' ಎಂದು ಹೆಸರು.

ಮನುಷ್ಯನ ರಚನೆಯಲ್ಲಿ ಪ್ರಕೃತಿಯ ಆಶ್ರಯದಲ್ಲಿದ್ದ ಮನಸ್ಸನ್ನು ಅಷ್ಟಾಂಗಮಾರ್ಗಗಳ ಮೂಲಕ ಮತ್ತು ಕ್ರಿಯಾ ಯೋಗದ ಮೂಲಕ ಮನಸ್ಸಿನಲ್ಲಿರುವ ಕ್ಲೇಶ-ಸಂಸ್ಕಾರಗಳನ್ನು ನಿರೋಧಿಸುವುದು, ಅಂದರೆ ನಿಷ್ಕ್ರಿಯಯಗೊಳಿಸುವುದು - ಇದು ಯೋಗಸಾಧನೆಯ ಒಂದು ಪ್ರಮುಖ ಘಟ್ಟವಾಗಿದೆ. **ಅಭ್ಯಾಸ** ಮತ್ತು **ವೈರಾಗ್ಯ**ದಿಂದ ಕೂಡ ಮನಸ್ಸಿನ ವೃತ್ತಿಗೆ ಮೂಲ ಕಾರಣ ವಾದ ಅವಿದ್ಯಾ ಜನಿತ ಸಂಸ್ಕಾರಗಳನ್ನು ನಿರೋಧಿಸಲಾಗುತ್ತದೆ.

ಮನುಷ್ಯನ ರಚನೆಯಲ್ಲಿ ಅಭಿವ್ಯಕ್ತವಾದ ಮತ್ತು ಅವಿದ್ಯೆಗೆ ಕಾರಣವಾದ ಪ್ರಕೃತಿಯ ವಿವಿಧ ಸ್ತರಗಳ ಕೋಟೆಯನ್ನು ಭೇದಿಸಿ, ಪುರುಷನ ಎಂದರೆ ಚೈತನ್ಯದ ಅನುಭೂತಿಯನ್ನು ಕೊಡುವ **ಅಸಂಪ್ರಜ್ಞಾತ** ಎಂಬ ಸಮಾಧಿಯ ಅಂತಿಮ ಸ್ಥಿತಿಯ ಮೂಲಕ ಕೈವಲ್ಯವನ್ನು ಪಡೆಯುವುದು ಯೋಗಸಾಧನೆಯ ಪರಮಗುರಿ ಯಾಗಿದೆ. ಹೀಗೆ ಚಿತ್ತವೃತ್ತಿ ನಿರೋಧದ ಮೂಲಕ ಪುರುಷ ಮತ್ತು ಪ್ರಕೃತಿಯ ಸಂಯೋಗವನ್ನು ವಿಂಗಡಿಸಿದಾಗ ಯೋಗ ಸೂತ್ರವು ಹೇಳುವಂತೆ, **'ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಮ್'** - ಅಂದರೆ, ಪುರುಷನು ಮಾತ್ರ ತಾನು ತಾನಾಗಿಯೇ ಧ್ಯಾನದಲ್ಲಿ ನೆಲೆನಿಂತಾಗ ಸಮಾಧಿಯ ಅನುಭವವಾಗುವುದು.

ಕೈವಲ್ಯವನ್ನು ಪಡೆಯಲು 'ಯೋಗಸೂತ್ರ'ವು ಮುಖ್ಯವಾಗಿ ಅಷ್ಟಾಂಗಯೋಗದ ಸಾಧನಾಪ್ರಣಾಳಿಯನ್ನು ಸೂಚಿಸುತ್ತದೆ. ಆದರೆ **ಕ್ರಿಯಾಯೋಗ** ಮತ್ತು **ಪರವೈರಾಗ್ಯ**ದ ಅಭ್ಯಾಸದ ಮೂಲ ಕವೂ ಕೂಡ ಕ್ಲೇಶ ಸಂಸ್ಕಾರಗಳನ್ನು ತನೂಕರಣಗೊಳಿಸಬಹುದು. ಈ ರೀತಿ ಸಂಸ್ಕಾರಗಳು ತನೂಕರಣಗೊಂಡ ನಂತರ ಧ್ಯಾನದ ಅಭ್ಯಾಸದಿಂದ ಉತ್ಪನ್ನವಾದ ಅಂತಃಪ್ರಜ್ಞೆಯ ಮೂಲಕ **ವಿವೇಕ ಖ್ಯಾತಿ** ಎಂಬ ಪ್ರಜ್ಞಾವೃತ್ತಿಯು ಪ್ರಾಪ್ತವಾಗುವುದು. ಈ ಅನು ಭವದ ಸ್ಥಿತಿಯಲ್ಲಿ ಜನಿತವಾದ ಪ್ರಸಂಖ್ಯಾನಾಗ್ನಿಯು ಸಂಸ್ಕಾರ ಗಳನ್ನು ದಗ್ಧಬೀಜವಾಗಿಸಿ ಪುನಃ ಅವುಗಳು ಅಂಕುರಿಸುವ ಶಕ್ತಿ ಯನ್ನು ನಾಶಮಾಡುತ್ತದೆ. ಈ ತೀವ್ರವಾದ **ಸಂಪ್ರಜ್ಞಾತ** ಸ್ಥಿತಿಯ ಧ್ಯಾನದಿಂದ ಉತ್ಪನ್ನವಾದ ಪ್ರಜ್ಞೆಯ ಬೆಳಕಾದ, ಪ್ರಸಂಖ್ಯಾನಾಗ್ನಿ ಯಿಂದ ಸಮಸ್ತ ಸಂಸ್ಕಾರವೂ ನಾಶವಾಗಿ, ಯೋಗಿಯು **ಅಸಂಪ್ರ ಜ್ಞಾತ** ಎಂಬ ಉನ್ನತ ಸಮಾಧಿಸ್ಥಿತಿಯಲ್ಲಿ ಆರೂಢನಾಗುತ್ತಾನೆ. ಹೀಗೆ ಯೋಗಸಾಧಕನು **ಅಸಂಪ್ರಜ್ಞಾತ ಸಮಾಧಿ**ಯ ಮೂಲಕ ಪುರಷ-ಪ್ರಕೃತಿ ವಿಯೋಗ ಹೊಂದಿ ಕೈವಲ್ಯ ಪದವನ್ನು ಪಡೆಯುತ್ತಾನೆ.

ಹೀಗೆ 'ಯೋಗಸೂತ್ರ'ದಲ್ಲಿ ಮೂರು ರೀತಿಯ ಸಾಧನಾಕ್ರಮ ಗಳನ್ನು ಗುರುತಿಸಬಹುದು. ಇದರ ಒಂದು ಪಕ್ಷಿನೋಟವನ್ನು ಈ ಕೆಳಗೆ ಸಂಕ್ಷಿಪ್ತವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

೧. **ಅಷ್ಟಾಂಗಯೋಗ:** ಇದು ಯೋಗ ಜೀವನದಲ್ಲಿ ಆಸಕ್ತಿಯುಳ್ಳ ಜನಸಾಮಾನ್ಯರು ಅನುಸರಿಸಬಹುದಾದ ಅತ್ಯಂತ ಪ್ರಚಲಿತ ವಾದ ಸಾಧನ ಪ್ರಣಾಳಿ.

೨. **ಕ್ರಿಯಾಯೋಗ:** ಇದು ಮಧ್ಯಮಾಧಿಕಾರಿಗಳಿಗೆ. ಯೋಗ ಜೀವನಕ್ಕೆ ಬೇಕಾದ ಪ್ರಾಥಮಿಕ ಸಂಸ್ಕಾರವುಳ್ಳವರು ಅನು ಷ್ಠಾನ ಮಾಡಬಹುದಾದ ಪಥ.

೩. **ಪರವೈರಾಗ್ಯದ ಪಥ:** ಇದು ಮುಖ್ಯವಾಗಿ ಉತ್ತಮಾಧಿ ಕಾರಿಗಳಿಗೆ.

### ೧. ಅಷ್ಟಾಂಗಯೋಗ:

**'ಪಾತಂಜಲ ಯೋಗಸೂತ್ರ'**ದಲ್ಲಿ ಕಂಡುಬರುವ ಸಾಧನ ಮಾರ್ಗಗಳಲ್ಲಿ **ಅಷ್ಟಾಂಗ ಯೋಗ**ವು ಅತ್ಯಂತ ಪ್ರಚಲಿತ. ಇದು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ - ಎಂಬ ಎಂಟು ಹಂತಗಳನ್ನು ಒಳ ಗೊಂಡಿದೆ. ಪಾತಂಜಲ ಮಹರ್ಷಿಯ ಸಮಕಾಲೀನ ಭಾರತದಲ್ಲಿ ಪ್ರಚಲಿತವಾದ ಎಲ್ಲ ಸಾಧನ ವಿಜ್ಞಾನದ ವಿವಿಧ ಪ್ರಾಯೋಗಿಕ ವಿಷಯಗಳನ್ನು ಇಲ್ಲಿ ಸಮುಚ್ಚಯಗೊಳಿಸಲಾಗಿದೆ. ಇದು ಮನು ಷ್ಯನ ವ್ಯಕ್ತಿತ್ವದ ರಚನೆ, ಮನೋವಿಜ್ಞಾನ, ಸಂಸ್ಕಾರ, ಜೀವನ ಕ್ರಮ, ಪ್ರಕೃತಿ ನಿಯಮ ಮತ್ತು ಮನುಷ್ಯನಲ್ಲಿ ಅಂತರ್ಗತವಾಗಿರುವ ದೈವೀ ಚೈತನ್ಯ (ಪುರುಷ) ಮುಂತಾದವುಗಳನ್ನು ಪರಿಗಣಿಸಿ ಆತ್ಯಂತಿಕ ಆಧ್ಯಾತ್ಮಿಕ ಗುರಿಯನ್ನು ಸಾಧಿಸಲು ಅನುವು ಮಾಡಿ ಕೊಡುವ ಅತ್ಯಂತ ಸೂಕ್ತವೂ, ಸ್ಪಷ್ಟವೂ ಆದ ಸಾಧನ ಮಾರ್ಗ. ಎಲ್ಲ ಆವಶ್ಯಕ ವಿಷಯಗಳನ್ನು ಅಳವಡಿಸಿಕೊಂಡು, ಅವುಗಳನ್ನು ಎಂಟು ಹಂತಗಳನ್ನಾಗಿ ಕ್ರಮವಾಗಿ ವಿಂಗಡಿಸಿ, ಅಭ್ಯಾಸ ಮಾಡಲು ಸುಲಭವಾಗುವಂತೆ ಸಿದ್ಧಪಡಿಸಿದ ಪರಿಣಾಮಕಾರಿ ಸಾಧನ ಮಾರ್ಗ ವಾಗಿದೆ ಇದು. ಗೀತೆಯಲ್ಲಿ ಉಲ್ಲೇಖಿಸಿದ ಸಾಂಖ್ಯಯೋಗ, ಕರ್ಮಯೋಗ, ಭಕ್ತಿಯೋಗ, ಧ್ಯಾನಯೋಗ, ಜ್ಞಾನಯೋಗ, ಮೊದಲಾದ ವಿವಿಧ ಯೋಗ ಮಾರ್ಗಗಳ ಪ್ರಾಯೋಗಿಕ ಸಾರವನ್ನು ಈ **ಅಷ್ಟಾಂಗಯೋಗ**ದಲ್ಲಿ ಅಳವಡಿಸಿಕೊಂಡಂತೆ ತೋರುತ್ತದೆ. ಆದುದರಿಂದ ನಿಜವಾಗಿ ಆಧ್ಯಾತ್ಮ ಸಾಧನೆಯನ್ನು ಕೈಗೊಳ್ಳಲು ಬಯಸುವ ಸಾಧಕರು ಪಾತಂಜಲ ಅಷ್ಟಾಂಗ ಯೋಗವನ್ನು ಅಧ್ಯ ಯನ ಮಾಡಿ ತಮ್ಮದೇ ಆದ ರೀತಿಯಲ್ಲಿ ಅಳವಡಿಸಿಕೊಂಡರೆ ಸಾಧ ನೆಯ ಪಥ ಸುಗಮವಾಗುವುದು. ಸಾಧನೆಗೆ ಅತ್ಯಗತ್ಯವಾದ ಮನೋನಿಗ್ರಹ ಮತ್ತು ಇಂದ್ರಿಯ ನಿಗ್ರಹವನ್ನು ಸಾಧಿಸಲು ಬೇಕಾದ ಮನೋವೈಜ್ಞಾನಿಕ ತಿಳುವಳಿಕೆ ಇದರಿಂದ ದೊರಕುವುದು.

ಯಮ-ನಿಯಮದಿಂದ ಸಮಾಧಿಯವರೆಗೆ ಹಂತ ಹಂತ ವಾಗಿ ಸಾಧನೆ ಮಾಡುತ್ತ, ಚಿತ್ತವೃತ್ತಿ ನಿರೋಧವನ್ನು ಸಾಧಿಸಿ - ಅಂದರೆ ಮನಸ್ಸಿನಲ್ಲಿರುವ ಅಲೆಗಳನ್ನು ವಿವಿಧ ಯೋಗಾಭ್ಯಾಸ ಗಳಿಂದ ನಿಯಂತ್ರಿಸಿ, ಸ್ತಬ್ಧೀಕರಿಸಿ, ಮತ್ತು ಕ್ಲೇಶ ಸಂಸ್ಕಾರಗಳನ್ನು ಸಂಪೂರ್ಣವಾಗಿ ಶಮನಗೊಳಿಸಿ ಯೋಗಿಯು ಸಮಾಧಿ ಸ್ಥಿತಿ ಯನ್ನು ಅನುಭವಿಸುತ್ತಾನೆ.

**ಅಷ್ಟಾಂಗ ಮಾರ್ಗದ ಎಂಟು ಅಂಗಗಳು:**

**ಯಮನಿಯಮಾಸನ ಪ್ರಾಣಾಯಾಮಪ್ರತ್ಯಾಹಾರಧಾರಣಧ್ಯಾನ ಸಮಾಧಯೋಽಷ್ಟಾವಂಗಾನಿ।** *(ಪಾತಂಜಲ ಯೋಗಸೂತ್ರ, ೨.೩೯)*

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿ ಇವು ಅಷ್ಟಾಂಗಗಳು.

ಅಷ್ಟಾಂಗ ಮಾರ್ಗದ ಮೊದಲನೆಯ ಸಾಧನ ಕ್ರಮದ ಬಾಹ್ಯ ಮತ್ತು ಆಂತರಿಕ ಜೀವನದ ಮೌಲ್ಯಗಳ ಅಭ್ಯಾಸ ಮಾಡಲು ಪಾಲಿಸಬೇಕಾದ ಶಿಸ್ತೆಂದರೆ **ಯಮ** ಮತ್ತು **ನಿಯಮ**ಗಳಾಗಿವೆ. ಇವು ಆಧ್ಯಾತ್ಮಿಕ ಜೀವನಕ್ಕೆ ಒಂದು ಸೂಕ್ತ ತಳಹದಿಯನ್ನು ಕೊಡುತ್ತವೆ. ಇವು ವಿಶ್ವಮಾನ್ಯವೂ ಸಾರ್ವತ್ರಿಕವೂ ಆದ ನೈತಿಕ ಆಚಾರ ಸಂಹಿತೆಯಾಗಿದೆ; ಇವುಗಳ ಆಧಾರದಿಂದ ಮಾತ್ರವೇ ಯೋಗದ ಸೌಧವನ್ನು ಸುಭದ್ರವಾಗಿ ನಿರ್ಮಿಸಬಹುದು.

**ಯಮ:**

**ಅಹಿಂಸಾಸತ್ಯಾಸ್ತೇಯಬ್ರಹ್ಮಚರ್ಯಾಪರಿಗ್ರಹಾ ಯಮಾಃ ।**
*(ಪಾ.ಯೋ., ೨.೩೦)*

ಅಹಿಂಸೆ, ಸತ್ಯ, ಅಸ್ತೇಯ ಬ್ರಹ್ಮಚರ್ಯ ಮತ್ತು ಅಪರಿಗ್ರಹ ಇವುಗಳು **ಯಮ** ಎನಿಸುತ್ತವೆ. ಯಮ ಎಂಬುದು ಸಾಧಕನು ನಿತ್ಯಜೀವನದಲ್ಲಿ ಅನುಸರಿಸಬೇಕಾದ ಬಾಹ್ಯ ನಿಯಮಗಳು.

**ಅಹಿಂಸೆ:** ಇಲ್ಲಿ **ಅಹಿಂಸೆ** ಎಂದರೆ ಇತರ ಜೀವರಾಶಿಗಳಿಗೆ, ನಮ್ಮೊಂದಿಗೆ ಸಹಬಾಳ್ವೆ ನಡೆಸುತ್ತಿರುವ ವ್ಯಕ್ತಿಗಳಿಗೆ ದೈಹಿಕವಾಗಿ ಅಥವಾ ಮಾನಸಿಕವಾಗಿ, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಹಾನಿ ಉಂಟುಮಾಡದೇ ಇರುವುದು. ಅಹಿಂಸೆಯು ಪ್ರತಿಷ್ಠಿತನಾದವನ ಸನ್ನಿಧಿಯಲ್ಲಿ ಹಿಂಸಾಪ್ರವೃತ್ತಿಯ ಪ್ರಾಣಿಗಳು ಮತ್ತು ಕ್ರೂರ ವ್ಯಕ್ತಿಗಳು ಕೂಡ ವೈರತ್ಯಾಗವನ್ನು ಮಾಡಿ ಶಾಂತಿಯನ್ನು ಅನುಭವಿಸುತ್ತವೆ – ಬುದ್ಧದೇವನ ಸನ್ನಿಧಿಯಲ್ಲಿ ಕ್ರೂರಿಯಾದ ಅಂಗುಲಿಮಾಲನು ಪರಿವರ್ತನೆಗೊಂಡಂತೆ. ಸ್ವಾಮಿ ವಿವೇಕಾನಂದರ ಸಾನ್ನಿಧ್ಯದಲ್ಲಿ ಒಮ್ಮೆ ಒಂದು ಹುಲಿ ಶಾಂತಗೊಂಡಂತೆ. ಮಹಾತ್ಮಾ ಗಾಂಧಿಯವರ ಪ್ರಾಮಾಣಿಕ ಅಹಿಂಸಾತ್ಮಕ ಚಳವಳಿಯನ್ನು ಎದುರಿಸಲಾಗದ ಬಲಿಷ್ಠ ಮತ್ತು ಕ್ರೂರ ರಾಜಕೀಯ ಶಕ್ತಿಯನ್ನು ಹೊಂದಿದ ಬ್ರಿಟಿಷ್ ಸಾಮ್ರಾಜ್ಯವು ಕ್ರಮೇಣ ತನ್ನ ರಾಜ್ಯಭಾರ ಶಕ್ತಿಯನ್ನು ಕಳೆದುಕೊಂಡು ಅಹಿಂಸಾ ಚಳವಳಿಯ ನಾಯಕತ್ವಕ್ಕೆ ಮಣಿದಂತೆ.

**ಅಹಿಂಸಾಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ ।** *(ಪಾ., ೨.೩೫)*

**ಸತ್ಯ:** ಮನಸ್ಸು ಮತ್ತು ವಚನದಲ್ಲಿ ಯಥಾರ್ಥತೆಯೇ ಸತ್ಯ. ಸತ್ಯವನ್ನೇ ಹೇಳುವುದರಲ್ಲಿ ನಿರತನಾಗಿದ್ದವನ ಪ್ರತಿಯೊಂದು ಸಾಧನಾಕ್ರಿಯೆಯೂ ಅತಿಶಯವಾಗಿ ಪರಿಣಾಮಕಾರಿಯಾಗುವುದು ಮತ್ತು ಅವನನ್ನು ಪರಿವರ್ತನೆಗೊಳಿಸುವುದು. ಸತ್ಯಸ್ವರೂಪವಾದ ಚೈತನ್ಯದ ಅನುಭೂತಿಯ ಪಥದಲ್ಲಿ ಸಾಧಕನು ಬಹುಬೇಗ ಮುಂದುವರೆಯುತ್ತಾನೆ. ಅವನ ಸತ್ಕರ್ಮಗಳು ಶೀಘ್ರ ಫಲಪ್ರದವಾಗಿ ಅವನನ್ನು ರಕ್ಷಿಸುತ್ತವೆ.

**ಸತ್ಯಪ್ರತಿಷ್ಠಾಯಾ ಕ್ರಿಯಾಫಲಾಶ್ರಯತ್ವಮ್ ಅಸ್ತೇಯಃ ।**
*(ಪಾ., ೨.೩೬)*

**ಅಸ್ತೇಯ:** ಅಸ್ತೇಯವೆಂದರೆ ಇತರರ ವಸ್ತುಗಳನ್ನು ಬಯಸದೆ ಹಾಗೂ ಅವಲಂಬಿಸದೆ, ತನ್ನಿಂದ ತಾನೇ ನ್ಯಾಯ ಸಮ್ಮತವಾಗಿ ಸಹಜವಾಗಿ ಒದಗಿ ಬಂದ ವಸ್ತುಗಳಲ್ಲಿ ಸಂತೃಪ್ತನಾಗಿರಬೇಕು. ಅಸ್ತೇಯದಲ್ಲಿ ನೆಲೆ ನಿಂತ ಯೋಗಿಗೆ ಅತ್ಯಂತ ಶ್ರೇಷ್ಠವಾದ ವಸ್ತುಗಳು ದೊರಕುತ್ತವೆ.

**ಬ್ರಹ್ಮಚರ್ಯ:**

**ಬ್ರಹ್ಮಚರ್ಯ ಪ್ರತಿಷ್ಠಾಯಾಂ ವೀರ್ಯಲಾಭಃ ।** *(ಪಾ., ೨.೩೮)*

ಬ್ರಹ್ಮಚರ್ಯದಲ್ಲಿ ಅವನು ಪ್ರತಿಷ್ಠಿತನಾದ ಮೇಲೆ ಅವನಿಗೆ ವೀರ್ಯಶಕ್ತಿಯ ಲಾಭವಾಗುತ್ತದೆ. ಇಂದ್ರಿಯ ನಿಗ್ರಹಕ್ಕೆ ಬ್ರಹ್ಮಚರ್ಯವೇ ಆಧಾರ. ಇದು ಅಂತಃಶಕ್ತಿ ಮತ್ತು ಸದ್ಗುಣಗಳಿಂದ ಕೂಡಿದ ಬುದ್ಧಿ ಬಲವನ್ನು ವರ್ಧಿಸುತ್ತವೆ. ಬ್ರಹ್ಮಚರ್ಯವೂ ಸ್ಮೃತಿಶಕ್ತಿಯನ್ನು ಕೂಡ ತೀಕ್ಷ್ಣವಾಗಿಸುತ್ತದೆ. ತನ್ಮೂಲಕ ಜ್ಞಾನವನ್ನು ಸ್ಮೃತಿಯಲ್ಲಿ ಧರಿಸಿ ಅದರಂತೆ ಅಭ್ಯಾಸ ಮಾಡುವ ಪ್ರವೃತ್ತಿಯನ್ನು ಹೆಚ್ಚಿಸುತ್ತದೆ.. ಸ್ವಾಮಿ ವಿವೇಕಾನಂದರು, ಸಂತ ರಾಮತೀರ್ಥರು ಮೊದಲಾದ ನೂರಾರು ಸಂತಶ್ರೇಷ್ಠರು ಜೀವನ ಮತ್ತು ಸಂದೇಶದಿಂದ ಬ್ರಹ್ಮಚರ್ಯದ ಪಾಲನೆಯಿಂದ ಹೀಗೆ ಅಸಾಧಾರಣ ಮೇಧಾಶಕ್ತಿ ಮತ್ತು ಸ್ಮೃತಿಶಕ್ತಿ ಉತ್ಪನ್ನವಾಗುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

**ಅಪರಿಗ್ರಹ:**

**ಅಪರಿಗ್ರಹಸ್ಥೈರ್ಯೇ ಜನ್ಮಕಥಂತಾಸಂಬೋಧಃ ।** *(ಪಾ., ೨-೩೯)*

ಅಪರಿಗ್ರಹವೆಂದರೆ ಇನ್ನೊಬ್ಬರಿಂದ ವಸ್ತುಗಳನ್ನು ಸ್ವೀಕರಿಸದೇ ಇರುವುದು ಮತ್ತು ಮಾನಸಿಕವಾಗಿ ಇತರರ ವಸ್ತುಗಳನ್ನು ಬಯಸದೆ ಇರುವುದು. ಈ ಗುಣದಲ್ಲಿ ನೆಲೆನಿಂತವನಿಗೆ ಅವನ ಪೂರ್ವಜನ್ಮದ ಜ್ಞಾನ ಉಂಟಾಗುವುದು. ಮಾತ್ರವಲ್ಲ, ಪುನರ್ಜನ್ಮವು ಯಾವ ಕಾರಣದಿಂದ ಪ್ರಾಪ್ತವಾಯಿತು ಎಂಬ ತಿಳುವಳಿಕೆ ಉಂಟಾಗಿ ಮುಂದಿನ ಜನ್ಮದಿಂದ ಮುಕ್ತನಾಗಲು ಬೇಕಾದ ಮುಕ್ತಿ ಸಾಧನ ಮಾರ್ಗವು ಸ್ಪಷ್ಟವಾಗುವುದು. ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವು ಪುನರಾವರ್ತನೆಯಾಗದಂತೆ ಎಚ್ಚರ ವಹಿಸಲು ಬೇಕಾದ ಸ್ಪಷ್ಟ ವಿವೇಕವು ಸಾಧಕನಿಗೆ ದೊರಕುವುದು. ಆದುದರಿಂದ ಸಾಧಕನು ಪಾರಾವಲಂಬನೆಯಿಂದ ಮುಕ್ತನಾಗಬೇಕು. ಸಾಧ್ಯವಾದ ಮಟ್ಟಿಗೆ ಸ್ವತಂತ್ರವಾಗಿ ಜೀವನ ನಡೆಸುವುದು ಅಪರಿಗ್ರಹದಲ್ಲಿ ಅವನು ಪ್ರತಿಷ್ಠಿತನಾದ ಮೇಲೆ ಅವನ ಜನ್ಮಗಳು ಏಕೆ? ಯಾವ ಕಾರಣದಿಂದ ಎಂಬ ಜ್ಞಾನವು ಅವನಿಗೆ ಬರುತ್ತದೆ.

**ನಿಯಮ:**

ಇವು ಯೋಗಿಯು ಆಂತರಿಕ ಜೀವನದಲ್ಲಿ ಪಾಲಿಸಬೇಕಾದ ನಿಯಮಗಳು.

**ಶೌಚಸಂತೋಷತಪಃಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ।**
*(ಪಾ., ೨.೩೨)*

'ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರನಲ್ಲಿ ಭಕ್ತಿ ಇವು ನಿಯಮಗಳು.'

**ಶೌಚ:**

ಶೌಚದ ಅಭ್ಯಾಸದಿಂದ ಸತ್ತ್ವಶುದ್ಧಿ (ಮನಶ್ಶುದ್ಧಿ), ಸೌಮನಸ್ಯ (ಪ್ರಸನ್ನ ಮನಸ್ಥಿತಿ) ಏಕಾಗ್ರತೆ, ಇಂದ್ರಿಯ ಜಯ ಮತ್ತು ಆತ್ಮ ಸಾಕ್ಷಾತ್ಕಾರಕ್ಕೆ ಯೋಗ್ಯತೆ – ಇವು ಕೂಡ ಉಂಟಾಗುತ್ತವೆ. ತನ್ನ ಶರೀರದ ಶುದ್ಧಿಯನ್ನು ಸಾಧಕನು ಮಾಡಿದ್ದಲ್ಲಿ ಅವನಿಗೆ ಸ್ವಾಂಗ ಜುಗುಪ್ಸೆ ಮತ್ತು ಜನ್ಮ ಮೃತ್ಯು ಜರಾವ್ಯಾಧಿಗಳಿಗೆ ಒಳಗಾಗುವ ಇತರ ಶರೀರಗಳ ಸಂಗದ ಜುಗುಪ್ಸೆಯು ಉಂಟಾಗುವುದು; ಏಕಾಂತದ ಬಯಕೆಯು ತೀವ್ರವಾಗುವುದು. ಅಸಂಪರ್ಕ ಅಥವಾ ನಿಸ್ಸಂಗತ್ವವು ಸಿದ್ಧಿಸುವುದು. ಅವನು ಸದ್ಗುಣ ಸಂಪನ್ನತೆಯಿಂದ ಕ್ರಮೇಣ ಆಂತರಿಕವೂ ಸೂಕ್ಷ್ಮವೂ ಆದ ಆತ್ಮಚೈತನ್ಯದ ಆನಂದ ದಲ್ಲಿನೆಲೆನಿಂತಾಗ, ಏಕಾಂಗಿಯಾಗಿ ಇರುವ ಹಂಬಲ ಹೆಚ್ಚುವುದು.

**ಸಂತೋಷ:**

**ಸಂತೋಷಾದನುತ್ತಮಃ ಸುಖಲಾಭಃ ।** *(ಪಾ., ೨.೪೨)*

'ಸಂತೋಷದಿಂದ ಶ್ರೇಷ್ಠವಾದ ಸುಖಲಾಭವುಂಟಾಗುತ್ತದೆ.'

ಯೋಗ ಸಾಧಕನು ಮಾನಸಿಕ ಸಂತೋಷವನ್ನು ಅಭ್ಯಾಸ ಮಾಡಬೇಕು. ವಿಷಯಸುಖ, ಕೀರ್ತಿಸುಖ, ಸ್ವರ್ಗಸುಖಕ್ಕಿಂತಲೂ ಅತಿಶಯವಾದ, ಶ್ರೇಷ್ಠ ಮಟ್ಟದ ಸತತ ಸುಖವನ್ನು ಯೋಗ ಜೀವನವು ಸಾಧಕನಿಗೆ ಕೊಡುವುದು. ಸಂತೋಷದ ಸತತ ಅಭ್ಯಾಸದಿಂದ ಮನಸ್ಸು ಮುಂದೆ ಅಪರಿಮಿತ ದೈವೀ ಆನಂದ ವನ್ನು ಧರಿಸುವ ಸಾಮರ್ಥ್ಯವನ್ನು ಪಡೆಯುತ್ತದೆ.

**ತಪಸ್ಸು:**

ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರ ಪ್ರಣಿಧಾನವನ್ನು ಮುಂದೆ ಸಂಕ್ಷಿಪ್ತವಾಗಿ ಕ್ರಿಯಾಯೋಗದ ವಿವರಣೆಯಲ್ಲಿ ಉಲ್ಲೇಖಿಸಿ ವಿವರಿಸಿದೆ. ತಪಸ್ಸಿನಿಂದ ಅಶುದ್ಧಿಯು ಕ್ಷೀಣವಾಗು ತ್ತದೆ. ಅನಂತರ ಶರೀರ – ಇಂದ್ರಿಯಗಳಿಗೆ ಸಂಬಂಧಿಸಿದ ಸಿದ್ಧಿ ಗಳು ಉಂಟಾಗುತ್ತವೆ.

**ಸ್ವಾಧ್ಯಾಯ ಮತ್ತು ಈಶ್ವರ ಪ್ರಣಿಧಾನ:**

ಸ್ವಾಧ್ಯಾಯದಿಂದ ಅಂದರೆ ಶಾಸ್ತ್ರಗಳ ಮಹಾಪುರುಷರ ಜೀವನ – ಸಂದೇಶಗಳ ನಿಯಮಿತವಾದ ಶ್ರದ್ಧಾಪೂರ್ಣ ಅಧ್ಯ ಯನದಿಂದ, ಚಿತ್ತವೃತ್ತಿಗಳು ಸಾತ್ತ್ವಿಕವಾಗಿ, ಮನಸ್ಸು ಊರ್ಧ್ವ ಗಾಮಿಯಾಗುವುದು. ಸ್ವಾಧ್ಯಾಯದಿಂದ ಇಷ್ಟದೇವತೆಯ ದರ್ಶ ನವು ಪ್ರಾಪ್ತವಾಗುವುದು ಮತ್ತು ಈಶ್ವರನಲ್ಲಿ ಇರುವ ಭಕ್ತಿಯಿಂದ ಸಮಾಧಿಯು ಉಂಟಾಗುವುದು. ಸ್ವಾಧ್ಯಾಯದಲ್ಲಿ ತತ್ಪರ ನಾದ ವನಿಗೆ ಸಂತರು, ಸಿದ್ಧಪುರುಷರು ದರ್ಶನವನ್ನು ಕೊಟ್ಟು ಅವನು ಸಾಧನಾಪಥದಲ್ಲಿ ಮುಂದುವರೆಯುವಂತೆ ಸಹಾಯ ಮಾಡು ತ್ತಾರೆ. ಈಶ್ವರನಿಗೆ ಸರ್ವಭಾವವನ್ನೂ ಅರ್ಪಿಸುವುದರಿಂದ ಎಲ್ಲಾ ಪರಿಸ್ಥಿತಿಯಲ್ಲಿ, ಎಲ್ಲಾ ಕಾಲಗಳಲ್ಲಿ ಸಾಧಕನಿಗೆ ಈಶ್ವರನ ಆವಿರ್ಭೂತ ಸತ್ಯಗಳ ಅರಿವಾಗುವುದು ಮತ್ತು ಅವನ ಪ್ರಜ್ಞೆಯು ಭಗವಂತನ ಅರಿವಿನಲ್ಲಿ ಸ್ಥಿರಗೊಳ್ಳುವುದು.

**ಸ್ವಾಧ್ಯಾಯಾದಿಷ್ಟದೇವತಾಸಂಪ್ರಯೋಗಃ ।** *(ಪಾ., ೨.೪೪)*
**ಸಮಾಧಿಸಿದ್ಧಿರೀಶ್ವರ ಪ್ರಣಿಧಾನಾತ್ ।** (ಪಾ., ೨.೪೫)

**ಆಸನ:**

**ತತ್ರಸ್ಥಿರಸುಖಮಾಸನಮ್:** *(ಪಾ., ೨.೪೬)*

'ಸ್ಥಿರವಾಗಿ ಸುಖವಾಗಿರುವ ಶರೀರದ ಸ್ಥಿತಿಯೇ ಆಸನ.'

ವಿವಿಧ ಆಸನಗಳನ್ನು ಅಭ್ಯಾಸ ಮಾಡುವುದರ ಮೂಲಕ ಯೋಗಿಯು ಏಕಾಸನದಲ್ಲಿ ದೀರ್ಘಕಾಲ ಕುಳಿತು ಧ್ಯಾನ ಮಾಡುವ ಅಭ್ಯಾಸವನ್ನು ಮಾಡಬೇಕು. ಇದರಿಂದ ಅವನು ಮನಸ್ಸನ್ನು ಸ್ಥಿರಗೊಳಿಸಲು ಸಹಾಯವಾಗುವುದು. ಯೋಗಾಸನ ವಿದ್ಯೆಯನ್ನು ನುರಿತವರಿಂದ ಕಲಿತು ಅಭ್ಯಾಸ ಮಾಡಬೇಕು. ಆಸನವು ಸಿದ್ಧಿಸಿದಾಗ ಶರೀರದ ಅಡಚಣೆಗಳ ಬಾಧೆ ಇರುವು ದಿಲ್ಲ. ಶರೀರವು ಸಾಧಕನ ಕಠಿಣ ಸಾಧನೆಯ ಒತ್ತಡವನ್ನು ಸುಲಭವಾಗಿ ತಡೆದುಕೊಳ್ಳುವುದು.

**ಪ್ರಾಣಾಯಾಮ:**

**ತಸ್ಮಿನ್ ಸತಿ ಶ್ವಾಸಪ್ರಶ್ವಾಸಯೋರ್ಗತಿವಿಚ್ಛೇದಃ ಪ್ರಾಣಾಯಮಃ।** *(ಪಾ., ೨.೪೯)*

'ಅನಂತರ ಶ್ವಾಸ ಪ್ರಶ್ವಾಸಗಳ ಕ್ರಿಯೆಗಳನ್ನು ನಿಯಂತ್ರಿಸುವ ಪ್ರಕ್ರಿಯೆಯೇ ಪ್ರಾಣಾಯಾಮ.'

ಈ ಪ್ರಾಣಾಯಾಮವು ಬಾಹ್ಯ, ಆಂತರಿಕ ಅಥವ ನಿಶ್ಚಲ ವಾಗಿರಬಹುದು. ಇದನ್ನು ಗುರು ಮುಖೇನ ಕಲಿತು ನಿಯಮಿತ ವಾಗಿ ಅಭ್ಯಸಿಸಬೇಕು. ಪ್ರಾಣಾಯಾಮಕ್ಕೂ ಮನಸ್ಸಿನ ಏಕಾಗ್ರತೆಗೂ ನಿಕಟವಾದ ಸಂಬಂಧವಿದೆ. ಪ್ರಾಣಾಯಾಮದಿಂದ ನಾವು ಸುಲಭ ವಾಗಿ ಮನಸ್ಸಿನ ಮೇಲೆ ಪ್ರಭುತ್ವವನ್ನು ಸಾಧಿಸಬಹುದು.

**ಪ್ರತ್ಯಾಹಾರ:**

**ಸ್ವವಿಷಯಾಸಂಪ್ರಯೋಗೇ ಚಿತ್ತಸ್ಯ ಸ್ವರೂಪಾನುಕಾರ ಇವೇಂದ್ರಿಯಾಣಾಂ ಪ್ರತ್ಯಾಹಾರಃ ।** *(ಪಾ., ೨.೫೪)*

ಇಂದ್ರಿಯಗಳು ಸ್ವವಿಷಯಗಳಿಂದ ನಿವೃತ್ತಿ ಹೊಂದಿದಾಗ ಅವು ಮನಸ್ಸನ್ನೇ ಹೋಲುತ್ತವೆ; ಇದೇ ಪ್ರತ್ಯಾಹಾರ.

ಅಂದರೆ ಮನಸ್ಸು ನಿರುದ್ಧವಾದಾಗ ಇಂದ್ರಿಯಗಳೂ ಕೂಡ ನಿರುದ್ಧವಾಗುತ್ತವೆ. ಪ್ರತ್ಯಾಹಾರದಿಂದ ಇಂದ್ರಿಯಗಳ ಮೇಲೆ ಸಂಪೂರ್ಣ ಹತೋಟಿ ಸಿದ್ಧಿಸುತ್ತದೆ. ಪ್ರತ್ಯಾಹಾರದಿಂದ ಮನ ಸ್ಸನ್ನು ಸುಲಭವಾಗಿ ಅಂತರ್ಮುಖಗೊಳಿಸಬಹುದು. ಇದರಿಂದ ಚಿತ್ತವೃತ್ತಿಗಳು ಬಾಹ್ಯವಿಷಯಗಳ ಆಕಾರಗಳನ್ನು ತಾಳದೆ ಮನಸ್ಸು ತನ್ನ ಶುದ್ಧವಾದ ಮೂಲ ಸ್ಥಿತಿಗೆ ಸುಲಭವಾಗಿ ಹಿಂತಿರುಗಲು ಸಹಾ ಯಕವಾಗುವುದು.

**ಧಾರಣ:**

**ದೇಶಬಂಧಶ್ಚಿತ್ತಸ್ಯ ಧಾರಣಾಃ ।** *(ಪಾ., ೩.೧)*

ಧಾರಣೆ ಎಂದರೆ ಒಂದು ನಿರ್ದಿಷ್ಟವಾದ ಸ್ಥಾನದ ಮೇಲೆ ಚಿತ್ತವನ್ನು ನಿಲ್ಲಿಸುವುದು.

ನಾಭಿಚಕ್ರದಲ್ಲಿ, ಹೃದಯಕಮಲದಲ್ಲಿ, ತಲೆಯ ಜ್ಯೋತಿಯಲ್ಲಿ, ನಾಸಿಕಾಗ್ರದಲ್ಲಿ, ನಾಲಗೆಯ ತುದಿಯಲ್ಲಿ – ಇವೇ ಮೊದ ಲಾದ ಸ್ಥಾನಗಳಲ್ಲಿ ಅಥವಾ ಯಾವುದೇ ಯೋಗ್ಯ ಬಾಹ್ಯ ವಸ್ತುವಿ ನಲ್ಲಿ ಚಿತ್ತದ ವೃತ್ತಿಯನ್ನು ನಿಲ್ಲಿಸುವುದು ಧಾರಣೆ ಎನಿಸುವುದು. ನಾಮಜಪ ಸಾಧನೆ, ಮಾನಸ ಪೂಜೆ, ವಿವಿಧ ರೀತಿಯ ತ್ರಾಟಕದ ಅಭ್ಯಾಸ, ಜ್ಯೋತಿಯನ್ನು ದಿಟ್ಟಿಸಿ ನೋಡುವುದು ಇವೆಲ್ಲ ಧಾರಣಾ ಶಕ್ತಿಯನ್ನು ವರ್ಧಿಸುತ್ತದೆ.

**ಧ್ಯಾನ:**

**ತತ್ರ ಪ್ರತ್ಯಯೈಕತಾನತಾ ಧ್ಯಾನಮ್ ।** *(ಪಾ., ೩.೨)*

(ಧ್ಯಾನವೆಂದರೆ ಮನಸ್ಸಿನಲ್ಲಿ ಸಮಾನ ಪ್ರತ್ಯಯವು ನಿರಂತರವಾಗಿ ಉಳಿಯುವಿಕೆ).

ಧಾರಣೆಯ ಅಭ್ಯಾಸದಲ್ಲಿ ಮುಂದುವರೆದಂತೆ ಧ್ಯಾನ ಸ್ಥಿತಿಗೆ ಕ್ರಮೇಣ ತಲುಪುತ್ತೇವೆ. ಧ್ಯಾನವೆಂದರೆ ಧ್ಯೇಯ ವಸ್ತುವಿನ ಮೇಲೆ ನಿರಂತರವಾದ ಮತ್ತು ಏಕರೀತಿಯ ಪ್ರತ್ಯಯಗಳ ಪ್ರವಾಹ. ಈ ಪ್ರವಾಹವು ಅನ್ಯ ಪ್ರತ್ಯಯಗಳಿಂದ ಬಾಧಿತ ವಾಗುವುದಿಲ್ಲ. ಮನಸ್ಸಿನ ಏಕಪ್ರಕಾರವಾದ ಸ್ವಾಭಾವಿಕ ವೃತ್ತಿಗಳು ಹರಿಯುವಂತೆ ಮಾಡುವುದೇ ಧ್ಯಾನ. ಇಂತಹ ಏಕಪ್ರಕಾರದ ಧ್ಯಾನದ ವೃತ್ತಿಯನ್ನು ಶ್ರೀ ರಾಮಾನುಜಾಚಾರ್ಯರು **'ಅನುವೃತ್ತಿ'** ಎಂದು ಕರೆದಿದ್ದಾರೆ. ಧ್ಯಾನದಲ್ಲಿ ಏಕರೂಪದ ಅನುವೃತ್ತಿಗಳು ಮಾತ್ರ ಉದಯಿಸುತ್ತವೆ. ಧ್ಯಾನವು ಸಿದ್ಧಿಯಾದಾಗ ಮನಸ್ಸು ಆನಂದದಲ್ಲಿ ಮುಳುಗುವುದು ಮತ್ತು ಕ್ರಮೇಣ ಸಮಾಧಿ ಮಗ್ನವಾಗುವುದು.




ಧ್ಯಾನದ ಸಮಯದಲ್ಲಿ ರೂಪವನ್ನು ಸ್ಮರಿಸುವ ಪ್ರಕ್ರಿಯೆಯು ನಿರಂತರ ವಾಗಿರುವುದಿಲ್ಲ ಎಂಬುದನ್ನು ಈ ಚಿತ್ರ ತೋರಿಸುತ್ತದೆ.



**ಸಂಸ್ಕಾರ – ಅನುವೃತ್ತಿ ಇಷ್ಟದೇವತಾ ಸ್ವರೂಪ**

ಧ್ಯಾನವೆಂಬುದು ಉನ್ನತ ಆಧ್ಯಾತ್ಮಿಕ ವಲಯದ ಒಂದು ಪ್ರಸಿದ್ಧವಾದ ಸಾಧನಾಪ್ರಕ್ರಿಯೆ. ಧ್ಯಾನವು ಎಲ್ಲ ಧರ್ಮದ ಆಧ್ಯಾತ್ಮಿಕ ಸಾಧಕರನ್ನೂ ಒಗ್ಗೂಡಿಸುವ ಒಂದು ಮನೋವೈಜ್ಞಾನಿಕ, ಆಧ್ಯಾತ್ಮಿಕ ಪ್ರಕ್ರಿಯೆ. ಇದು ಪರಮಸತ್ಯದ ಅನ್ವೇಷಣೆಗೆ ಎಲ್ಲರಿಗೂ ಒಂದು ಹೆಬ್ಬಾಗಿಲಿನಂತಿದೆ. ಪತಂಜಲಿ ಮುನಿಯು ಹೇಳಿದ ಯಮ, ನಿಯಮಾದಿ ಏಳು ಹಂತಗಳನ್ನು ಪರಿಗಣಿಸದೆ, ನೇರವಾಗಿ ಧ್ಯಾನಕ್ರಮವನ್ನೇ ಅಭ್ಯಾಸಮಾಡುವ ಹೊಸ ಪರಂಪರೆಗಳು ಈ ಆಧುನಿಕ ಕಾಲದಲ್ಲಿ ಪ್ರಚಲಿತವಾಗುತ್ತಿವೆ. ಇದು ಒಂದು ದೃಷ್ಟಿಕೋನದಲ್ಲಿ ನಿಜಕ್ಕೂ ಸ್ವಾಗತಾರ್ಹ. ಆಸಕ್ತಿಯುಳ್ಳ ಸಂಸ್ಕಾರವಂತ ಯೋಗ್ಯ ಸಾಧಕನು ಯಾವುದೇ ಹಂತದಲ್ಲಿ ಧ್ಯಾನವನ್ನು ಅಭ್ಯಸಿಸಬಹುದು; ಅದರಿಂದ ಸಾಕಷ್ಟು ಪ್ರಯೋಜನ ಪಡೆಯಬಹುದಾದರೂ, ಧ್ಯಾನದ ನಿಜವಾದ ಉತ್ತುಂಗ ಸ್ಥಿತಿಯನ್ನು ಪಡೆಯಲು ಅಷ್ಟಾಂಗಯೋಗದ ಏಳು ಹಂತಗಳನ್ನೂ ಅನುಸರಿಸುವುದು ಸೂಕ್ತ. ಇದರಿಂದ ಧ್ಯಾನಸ್ಥಿತಿಯು ಹೆಚ್ಚು ಅಡಚಣೆಗಳಿಲ್ಲದೆ ಯಥಾರ್ಥವಾಗಿ ಸಿದ್ಧಿಸುವುದು. ಸಮಾಧಿಯ ಸ್ಥಿತಿಯನ್ನು ಕೊಡಬಲ್ಲ ಪ್ರತ್ಯಯಗಳು ಧ್ಯಾನದಲ್ಲಿ (ಉನ್ನತ ಪ್ರಜ್ಞಾವೃತ್ತಿಯ ಜ್ಞಾನ) ಸ್ಥಿರವಾಗಬೇಕಾದರೆ ನಾವು ಪತಂಜಲಿ ಮುನಿಯು ಅಷ್ಟಾಂಗಯೋಗದಲ್ಲಿ ಹೇಳಿದ ವಿಧಾನವನ್ನು ಕ್ರಮಬದ್ಧವಾಗಿ ಅನುಸರಿಸಿ ಚಿತ್ತಶುದ್ಧಿ, ಕ್ಲೇಶನಿವೃತ್ತಿ, ಮತ್ತು ಏಕಪ್ರಕಾರದ ದಿವ್ಯ ವೃತ್ತಿಯ ನಿರಂತರ ಅಭ್ಯಾಸವನ್ನು ಮಾಡಬೇಕು. ಏಕೆಂದರೆ ಚಿತ್ತೈಕಾಗ್ರತೆ ಮತ್ತು ಸಂಸ್ಕಾರಗಳ ನಿಷ್ಕ್ರಿಯತೆಯನ್ನು ಪಡೆಯದೆ ನಿಜವಾದ ಧ್ಯಾನಸ್ಥಿತಿಯನ್ನು ಹೊಂದುವುದು ಅಸಂಭವ. ಶ್ರೀರಾಮಕೃಷ್ಣರು ಹೇಳಿದಂತೆ ಶುದ್ಧ ಮನಸ್ಸೇ ಶುದ್ಧ ಆತ್ಮ. ವ್ಯಾಕುಲತೆ, ಏಕಾಗ್ರತೆ, ಪವಿತ್ರತೆ – ಈ ಮೂರೂ ಲಕ್ಷಣಗಳನ್ನು ಸಮರ್ಥವಾಗಿ ಬೆಳೆಸಿಕೊಂಡರೆ ಮಾತ್ರ ನಿಜವಾದ ಧ್ಯಾನಸ್ಥಿತಿಯು ಪ್ರಾಪ್ತವಾಗುವುದು; ಆಧ್ಯಾತ್ಮಿಕ ಅನುಭೂತಿಯ ದೊರಕುವುದು.

**ಸಮಾಧಿ:**

ಧ್ಯಾನದಲ್ಲಿ ಅದೇ ಧ್ಯೇಯವಸ್ತುವೊಂದೇ ಬೆಳಗುತ್ತಿದ್ದು ತನ್ನ ಸ್ವರೂಪದಲ್ಲಿ ಕಳೆದುಕೊಂಡಾಗ ಅದು ಸಮಾಧಿ.

ಸಮಾಧಿ ಸ್ಥಿತಿಯು ಅಷ್ಟಾಂಗಯೋಗ ಮಾತ್ರವಲ್ಲ, ಎಲ್ಲ ಆಧ್ಯಾತ್ಮಿಕ ಸಾಧಕರೂ ಕೊನೆಯಲ್ಲಿ ತಲುಪಬಹುದಾದ ಪರಮೋಚ್ಚ ಆಧ್ಯಾತ್ಮಿಕ ಅನುಭವಗಳ ಉತ್ತುಂಗ ಶಿಖರ.

ಯೋಗಸೂತ್ರವು ಇದನ್ನು **'ತದೇವಾರ್ಥಮಾತ್ರನಿರ್ಭಾಸಂ ಸ್ವರೂಪ ಶೂನ್ಯಮಿವ ಸಮಾಧಿಃ'** *(೩.೩)* ಎಂದು ವಿವರಿಸುತ್ತದೆ. ಅಂದರೆ ಧ್ಯಾನದ ಪ್ರಗತಿಯ ಅಂತಿಮ ಘಟ್ಟದಲ್ಲಿ ಧ್ಯೇಯವಸ್ತುವೊಂದೇ ಬೆಳಗುತ್ತಿದ್ದು, (ಚಿತ್ತವು) ತನ್ನ ಸ್ವರೂಪದಲ್ಲಿ ಕಳೆದುಕೊಂಡಾಗ ಅದನ್ನು ಸಮಾಧಿ ಎನ್ನಲಾಗುವುದು.

ಅವಿದ್ಯೆಯ ಕಾರಣದಿಂದ ಉಂಟಾದ ಪ್ರಕೃತಿಯ ಆಶ್ರಯದಲ್ಲಿದ್ದ ದೇಹ ಮನಸ್ಸನ್ನು ಪುರುಷನಿಂದ (ಆತ್ಮಚೈತನ್ಯ) ಪ್ರತ್ಯೇಕಗೊಳಿಸುವುದೇ (ಪ್ರಕೃತಿ–ಪುರುಷ ವಿಯೋಗ) ಪತಂಜಲಿ ಸೂಚಿಸಿದ ಯೋಗಮಾರ್ಗಗಳ ಉದ್ದೇಶ. ಅವಿದ್ಯೆಯೆಂದರೆ ಅನಿತ್ಯದಲ್ಲಿ ನಿತ್ಯಬುದ್ಧಿ, ಅಶುಚಿಯಲ್ಲಿ ಶುಚಿ ಬುದ್ಧಿ, ಅನಾತ್ಮದಲ್ಲಿ ಆತ್ಮಬುದ್ಧಿ, ದುಃಖದಲ್ಲಿ ಸುಖಬುದ್ಧಿ. ಪ್ರಕೃತಿ–ಪುರುಷ ವಿಯೋಗ ಪ್ರಾಪ್ತವಾಗುವ ಮೊದಲು ನಿತ್ಯಜೀವನದಲ್ಲಿ ನಿರ್ದಿಷ್ಟವಾದ ಸಾಧನಾಕ್ರಮಗಳನ್ನು ಅನುಸರಿಸಿ, ಅಭ್ಯಾಸ ಮತ್ತು ವೈರಾಗ್ಯಗಳಿಂದ **'ವಿವೇಕಖ್ಯಾತಿ'** ಎಂಬ ಪ್ರಜ್ಞಾಪೂರಕ ಸ್ಥಿತಿಯನ್ನು

ಪಡೆದು ತನ್ಮೂಲಕ **ಸಂಪ್ರಜ್ಞಾತ ಸಮಾಧಿ**ಯನ್ನು ಅನುಭವಿಸುತ್ತಾನೆ. ಮುಂದೆ ಸಾಧಕ ಇನ್ನೂ ಮುಂದುವರೆದು **ಅಸಂಪ್ರಜ್ಞಾತ** ಸ್ಥಿತಿಯನ್ನು ಪಡೆಯಬಹುದು. ಅಸಂಪ್ರಜ್ಞಾತವು ಅಸಾಧಾರಣ ಪ್ರಜ್ಞಾತೀತ ಯೋಗಸ್ಥಿತಿ. ಈ ಸ್ಥಿತಿಯಲ್ಲಿ ಮನಸ್ಸು ವೃತ್ತಿಶೂನ್ಯವಾಗಿರುತ್ತದೆ. ಈ ಬೇರೆಬೇರೆ ಯೋಗಮಾರ್ಗಗಳ ಹಂತಗಳನ್ನು ಈ ಕೆಳಗಿನ ರೇಖಾಚಿತ್ರ ಸ್ಪಷ್ಟಪಡಿಸುವುದು.




ಸಂಪ್ರಜ್ಞಾತವೆಂಬ ಸಾಧನೆಯ ಮಜಲಿನಲ್ಲಿ ಬೇರೆ ಬೇರೆ ಸಾಧಕರಿಗೆ ಬೇರೆ ಬೇರೆ ಪ್ರಕಾರದ ಆಧ್ಯಾತ್ಮಿಕ ಅನುಭವಗಳು ಪ್ರಾಪ್ತವಾಗುತ್ತವೆ. ಈ ಅನುಭವಗಳನ್ನು ಪತಂಜಲಿ ವಿವಿಧ ಹೆಸರುಗಳಿಂದ ಅರ್ಥಪೂರ್ಣವಾಗಿ ವಿವರಿಸಿದ್ದಾನೆ – ಸವಿಚಾರ ಸಮಾಧಿ, ನಿರ್ವಿಚಾರ ಸಮಾಧಿ, ಸವಿತರ್ಕ ಸಮಾಧಿ, ನಿರ್ವಿತರ್ಕ ಸಮಾಧಿ, ವಿವೇಕ ಜ್ಯೋತಿಷ್ಮತಿ ಮುಂತಾದ ಹಲವು ಪ್ರಕಾರದ ಸಮಾಧಿಗಳ ಬಗ್ಗೆ ನಾವು '**ಪತಂಜಲಿ ಯೋಗಸೂತ್ರ**'ದಲ್ಲಿ ಕಂಡು ಕೊಳ್ಳಬಹುದು.

ಹೀಗೆ ಸಾಧಕನು ವಿವಿಧ ಹಂತಗಳನ್ನು ದಾಟಿ ವಿವೇಕ ಖ್ಯಾತಿಯನ್ನು ಪಡೆದ ನಂತರ ಚಿತ್ತವೃತ್ತಿನಿರೋಧವನ್ನು ಹೊಂದಿ, **ಸಬೀಜ ಅಸಂಪ್ರಜ್ಞಾತ** ಸ್ಥಿತಿಯನ್ನು ಪಡೆಯುತ್ತಾನೆ. ತದನಂತರ ಯೋಗ ಸಾಧನೆಯಿಂದ ಜನಿತವಾದ ಪ್ರಸಂಖ್ಯಾನ ಅಗ್ನಿ ಎಂಬ ಆಂತರಿಕ ಆಧ್ಯಾತ್ಮಿಕ ಬೆಳಕಿನಿಂದ ಅವನ ಸಂಸ್ಕಾರಗಳು ದಹಿಸಿ, ಅವನು **ನಿರ್ಬೀಜ ಅಸಂಪ್ರಜ್ಞಾತ ಸಮಾಧಿ**ಯನ್ನು ಹೊಂದುತ್ತಾನೆ. ಈ ಅಂತಿಮ ಸ್ಥಿತಿಯಲ್ಲಿ ಪ್ರಕೃತಿಯ ಅವಯವಗಳಾದ ಸಂಸ್ಕಾರಗಳು **ಪ್ರತಿಪ್ರಸವ** ಹೊಂದಿ – ಅಂದರೆ ಅವು ತಮ್ಮ ಮೂಲಪ್ರಕೃತಿಗೆ ಹಿಂತಿರುಗಿದಾಗ ಸಾಧಕನು ಕೈವಲ್ಯವನ್ನು ಪಡೆಯುತ್ತಾನೆ. ಹೀಗೆ 'ಪತಂಜಲಿ ಯೋಗಸೂತ್ರ'ವು ಒಬ್ಬ ಸಾಧಕನು ಯೋಗಮಾರ್ಗದ ಅಭ್ಯಾಸಗಳ ವಿವಿಧ ಹಂತಗಳನ್ನು ದಾಟುವ ಮೂಲಕ ಉತ್ಥಾನವನ್ನು ಹೊಂದಿ, ಹೇಗೆ ಕೈವಲ್ಯವನ್ನು ಪಡೆಯುತ್ತಾನೆ ಎಂಬ ಅತಿಸೂಕ್ಷ್ಮ ಸಾಧನ ತತ್ತ್ವದ, ಪಥದ ಮತ್ತು ಗುರಿಯ ಸ್ಪಷ್ಟ ಕಲ್ಪನೆಯನ್ನು ಕೊಡುತ್ತದೆ. ಜಗತ್ತಿನ ಇತರ ಯಾವ ಆಧ್ಯಾತ್ಮಿಕ ಗ್ರಂಥದಲ್ಲಿಯೂ ಸಾಧಕನು ತನ್ನ ಸಾಧನೆಯ ಬೇರೆ ಬೇರೆ ಹಂತದಲ್ಲಿ ಕಂಡುಕೊಳ್ಳಬಹುದಾದ ಅನುಭವಗಳನ್ನು ಬೇರೆ ಬೇರೆ ಹೆಸರುಗಳೊಂದಿಗೆ ಇಷ್ಟು ಸ್ಪಷ್ಟವಾಗಿ ಬುದ್ಧಿಗ್ರಾಹ್ಯವಾಗುವಂತೆ ವಿವರಿಸಿದ್ದು ಕಂಡು ಬರುವುದಿಲ್ಲ.

### ೨. ಕ್ರಿಯಾಯೋಗ:

'**ಕ್ರಿಯಾಯೋಗ**'ವೆಂಬುದು ಯೋಗಸೂತ್ರದ ಎರಡನೆಯ ಭಾಗವಾದ ಸಾಧನಪಾದದಲ್ಲಿ ಮೊತ್ತಮೊದಲಿಗೆ ಹೇಳಲ್ಪಟ್ಟ ಒಂದು ಮುಖ್ಯ ಸಾಧನ ವಿಧಾನ.

**ತಪಸ್ಸ್ವಾಧ್ಯಾಯೇಶ್ವರಪ್ರಣಿಧಾನಾನಿ ಕ್ರಿಯೋಯೋಗಃ ।** *(ಪಾ., ೨.೧)*

'ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರಪ್ರಣಿಧಾನ – ಇವು ಕ್ರಿಯಾಯೋಗ ಎನಿಸುತ್ತದೆ.'

ಇದು ಮಂದಮಧ್ಯಮಾಧಿಕಾರಿಗಳಿಗೆ ಸುಲಭ ಉಪಾಯವಾಗಿರುವುದರಿಂದ ಸಾಧನೆಯ ಕೇವಲ ಮುಖ್ಯ ಅಂಶಗಳನ್ನು ಮಾತ್ರ ನೇರವಾಗಿ ಅಳವಡಿಸಿಕೊಂಡ ಸಾರಯುಕ್ತ ಸಾಧನಾ ಪ್ರಣಾಳಿ ಇದು. ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನ ಇವುಗಳು ಎಲ್ಲ ಸಾಧಕರೂ ಪಾಲಿಸಬೇಕಾದ ಸಾಧನೆಯ ಮುಖ್ಯ ಅಂಗಗಳಾಗಿವೆ. ಇವು ನೇರವಾಗಿ ಕ್ರಿಯೆಗೆ ಅಥವಾ ಅಭ್ಯಾಸಕ್ಕೆ ಅನುವು ಮಾಡಕೊಡುವುದರಿಂದ ಇದನ್ನು **ಕ್ರಿಯಾಯೋಗ**ವೆಂದು



ಹೆಸರಿಸಿದ್ದು ಸೂಕ್ತವಾಗಿದೆ. ಕ್ರಿಯಾಯೋಗವು ಕರ್ಮಯೋಗದಂತೆ ನೇರವಾಗಿ ಯೋಗಮಾರ್ಗದಲ್ಲಿ ಮುಖ್ಯವಾದ ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರಪ್ರಣಿಧಾನದಲ್ಲಿ ಸಾಧಕನನ್ನು ತೊಡಗಿಸುತ್ತದೆ. ಕ್ರಿಯಾಯೋಗದಿಂದ ಕೂಡಾ ಮನಸ್ಸಿನ ಕ್ಲೇಶಗಳು ನಿಷ್ಕ್ರಿಯಗೊಳುತ್ತವೆ ಮತ್ತು ಮನಸ್ಸು ಸಮಾಧಿಮುಖವಾಗುತ್ತದೆ. ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚ ಕ್ಲೇಶಗಳು ನಿವಾರಣೆಗೊಂಡು, ಅಜ್ಞಾನಕ್ಕೆ ಕಾರಣವಾದ ಮೂಲ ಅವಿದ್ಯೆಯಿಂದ ಸಾಧಕನು ಮುಕ್ತನಾಗುತ್ತಾನೆ. ಅವಿದ್ಯೆಯ ಕ್ಷೇತ್ರವಾಗಿರುವ ಪ್ರಸುಪ್ತ, ತನು, ವಿಚ್ಛಿನ್ನ ಮತ್ತು ಉದಾರ ಎಂಬ ನಾಲ್ಕು ಅವಸ್ಥೆಗಳಲ್ಲಿರುವ ಕ್ಲೇಶಗಳನ್ನು ನಿವಾರಿಸುವ ಶಕ್ತಿಯನ್ನು ಕ್ರಿಯಾಯೋಗವು ಹೊಂದಿದೆ. ಆದ್ದರಿಂದ ಕ್ರಿಯಾಯೋಗವೆಂಬುದು ಸಂಕ್ಷಿಪ್ತ, ಸಮರ್ಥ ಯೋಗಾಭ್ಯಾಸವಾಗಿದೆ.

### ತಪಸ್ಸು:

ತಪಸ್ಸು ಇಲ್ಲದವನಿಗೆ ಯೋಗವು ಸಿದ್ಧಿಸುವುದಿಲ್ಲವೆಂದು ವ್ಯಾಸರು ಹೇಳುತ್ತಾರೆ. ಇದು ವ್ಯಾಸರ ಸುಪ್ರಸಿದ್ಧ ಹೇಳಿಕೆ. ಮನಸ್ಸು ಆಂತರಿಕವಾಗಿ ಜನ್ಮಜನ್ಮಾಂತರದ ಕರ್ಮಪರಿಣಾಮದ ಕ್ಲೇಶಗಳಿಂದ ತುಂಬಿಕೊಂಡಿದೆ. ಹೊರಗಿನಿಂದ ಇಂದ್ರಿಯ ವಿಷಯಗಳ ಜಾಲ ಅದನ್ನು ಆವರಿಸಿ ಬಂಧಿಸಿದೆ. ತಪಸ್ಸಿಲ್ಲದೆ ಈ ಜಟಿಲವಾದ ಅಜ್ಞಾನ ಸಂಸ್ಕಾರದ ಪದರುಗಳನ್ನು ಕತ್ತರಿಸುವುದು ಅಸಂಭವ. ತಪಸ್ಸಿನ ಮೂಲಕ ಆಂತರಿಕ ಕ್ಲೇಶ-ಸಂಸ್ಕಾರದ ತಡೆಗಳನ್ನು ತೊಡೆದು ಹಾಕಿ ಜಯಿಸಿದಾಗ ಮಾತ್ರ ನಾವು ಸುಗಮವಾಗಿ ಯೋಗಮಾರ್ಗದಲ್ಲಿ ಮುಂದುವರಿಯಬಹುದು. ತಪಸ್ಸಿನ ಪ್ರಕಾರಗಳು ಅನೇಕವಾಗಿವೆ. ಸಾಧಕನು ತನ್ನ ಯೋಗ್ಯತೆಗೆ ಅನುಗುಣವಾಗಿ ಸದ್ಗುರುವಿನ ಮಾರ್ಗದರ್ಶನ ದಲ್ಲಿ ತಪಸ್ಸನ್ನು ಮಾಡಬೇಕು.

### ಸ್ವಾಧ್ಯಾಯ:

ವ್ಯಾಸರ ಪ್ರಕಾರ ಪ್ರಣವ ಉಚ್ಚಾರಣೆ, ನಾಮಜಪ ಮತ್ತು ಮೋಕ್ಷಶಾಸ್ತ್ರದ ಅಧ್ಯಯನವೇ ಸ್ವಾಧ್ಯಾಯ. ಸ್ವಾಮಿ ವಿವೇಕಾನಂದರ ಪ್ರಕಾರ ಕೂಡ ಮೋಕ್ಷಶಾಸ್ತ್ರದ ಅಧ್ಯಯನವೇ ಸ್ವಾಧ್ಯಾಯ. ಶಾಸ್ತ್ರಸಾರ ಗ್ರಹಣವು ಸ್ವಾಧ್ಯಾಯದ ಮುಖ್ಯ ಉದ್ದೇಶವಾಗಿದೆ. ಅಧ್ಯಯನದ ನಂತರ ಅದರ ಮುಖ್ಯ ವಿಷಯಗಳನ್ನು ವಿಶ್ಲೇಷಿಸಿ, ಚಿಂತಿಸಿ, ಯಾವುದಾದರೂ ಪ್ರಾಯೋಗಿಕ ನಿರ್ಣಯಕ್ಕೆ ಬಂದರೆ ಮಾತ್ರ ಅಧ್ಯಯನವು ಸಾರ್ಥಕವಾಗುವುದು. ಅನಂತರ ಈ ನಿರ್ಣಯವನ್ನು ಕುರಿತು ಆಳವಾಗಿ ಚಿಂತಿಸಿ ಸದ್ಗುರುವಿನ ಮಾರ್ಗದರ್ಶನದಂತೆ ಅದನ್ನು ಜೀವನದಲ್ಲಿ ಅಳವಡಿಸಿ, ಸಾಧನೆ ಯನ್ನು ತೀವ್ರಗೊಳಿಸಬೇಕು; ಮೂಲಭೂತ ಜ್ಞಾನವನ್ನು ಪಡೆಯಬೇಕು.

### ಈಶ್ವರಪ್ರಣಿಧಾನ:

ನಮ್ಮ ಸಕಲ ಕ್ರಿಯೆಗಳನ್ನೂ, ಕರ್ಮಗಳನ್ನೂ ಪರಮಗುರುವಿಗೆ ಅರ್ಪಿಸುವುದು ಮತ್ತು ಅದರ ಫಲತ್ಯಾಗವನ್ನು ಮಾಡುವುದೇ **ಈಶ್ವರಪ್ರಣಿಧಾನ** ಎಂಬುದು ವ್ಯಾಸರ ಅಭಿಪ್ರಾಯ.

ಶ್ರದ್ಧೆಯನ್ನು, ಭಕ್ತಿಯನ್ನು ಬೆಳೆಸಿ, ಸಾಧಕನು ತನ್ನ ಸಕಲ ಕರ್ಮಗಳನ್ನು ಮತ್ತು ಸಾಧನೆಯನ್ನು ಇಷ್ಟದೇವತೆಗೆ ಅರ್ಪಿಸಿ ದೈವೀಕೃಪೆಗೆ ಪಾತ್ರನಾಗಬೇಕು. ಹೀಗೆ ಕ್ರಿಯಾಯೋಗದಿಂದ ಕ್ಲೇಶಸಂಸ್ಕಾರಕ್ಕೂ ಮತ್ತು ಚಿತ್ತ ವೃತ್ತಿಗೂ ಇರುವ ಸಂಬಂಧಗಳು ತೊಡೆದುಹೋಗುತ್ತವೆ ಹಾಗೂ ಬೀಜರೂಪದಲ್ಲಿರುವ ಸಂಸ್ಕಾರ ಮತ್ತು ವೃತ್ತಿಗಳು ನಿಗ್ರಹಿಸಲ್ಪಡುತ್ತವೆ. ಈ ನಿಗ್ರಹದಿಂದ ಕ್ಲೇಶಗಳು ನಿಷ್ಕ್ರಿಯಗೊಂಡು ಮನಸ್ಸು - **'ಸಮಾಧಿಭಾವನಾರ್ಥಃ ಕ್ಲೇಶ ತನೂಕರಣಾರ್ಥಶ್ಚ'** *(ಪಾ., ೨.೨)* ಎಂಬಂತೆ ಸಮಾಧಿಮುಖವಾಗುತ್ತದೆ.

### ೩. ಪರವೈರಾಗ್ಯದಪಥ:

ತೀವ್ರ ವೈರಾಗ್ಯದ ಸಂಸ್ಕಾರವಿದ್ದು, ಪ್ರಾಪಂಚಿಕ ಆಸಕ್ತಿಯ ಲವಲೇಶವೂ ಇಲ್ಲದ, ಯೋಗಸಾಧನೆಯಲ್ಲಿ ಮುಂದುವರೆದ ಉತ್ತಮಾಧಿಕಾರಿ ಸಾಧಕರ ಸಹಜ ಮಾರ್ಗವಿದು. ಕೇವಲ ತೀವ್ರ ವೈರಾಗ್ಯದ ಶಕ್ತಿಯಿಂದಲೇ ಸಂಸ್ಕಾರಗಳನ್ನು ತನೂಕರಿಸಿ, ಪರವಿರಾಗಿಯು ಸಮಾಧಿಯನ್ನು ಪಡೆಯುತ್ತಾನೆ. ವಿವೇಕಖ್ಯಾತಿ* ಯ ಮೂಲಕ ಗುಣಗಳ ವಿಷಯದಲ್ಲಿಯೂ ಅನಾಸಕ್ತಿಯುಂಟಾದರೆ ಅದು **ಪರವೈರಾಗ್ಯ**ವೆನಿಸುವುದು ಎಂದು ಪತಂಜಲಿಯು ವಿವರಿಸುತ್ತಾನೆ:

**'ತತ್ಪರಂ ಪುರುಷಖ್ಯಾತೇರ್ಗುಣ ವೈತೃಷ್ಣ್ಯಮ್'** *(ಪಾ., ೧.೧೬)*

---

* ಪುರುಷ ಮತ್ತು ಪ್ರಕೃತಿ ಇವರೆಡೂ ಬೇರೆ ಬೇರೆ ಇಂಬ ಅನುಭವಾತ್ಮಕವಾದ ಪೂರ್ಣಜ್ಞಾನವೇ **'ವಿವೇಕಖ್ಯಾತಿ.'** ಯೋಗಸೂತ್ರದಲ್ಲಿ ಹೇಳಿದ ಮೂರೂ ಸಾಧನಮಾರ್ಗಗಳು ಕ್ಲೇಶಸಂಸ್ಕಾರಗಳನ್ನು ನಿಷ್ಕ್ರಿಯಗೊಳಿಸಿ, ಸಾಧಕನಿಗೆ ಮನಃಶುದ್ಧಿ ಪ್ರಾಪ್ತವಾದರೆ, **'ವಿವೇಕಖ್ಯಾತಿ'** ಎನ್ನುವ, ಆತ್ಮನ ಬೆಳಕನ್ನು ಪ್ರತಿಬಿಂಬಿಸುವ ಪ್ರಜ್ಞಾವೃತ್ತಿಗಳಿಂದ ಕೂಡಿದ ಸ್ಥಿತಿಗೆ ಅವನನ್ನು ಕೊಂಡೊಯ್ಯುತ್ತವೆ. ಪುರುಷನ (ಆತ್ಮದ) ಪ್ರಜ್ಞೆಯ ಬೆಳಕಿನಿಂದ ಬೆಳಗಿಸಲ್ಪಟ್ಟ, ಶುದ್ಧ ಮನಸ್ಸಿನಲ್ಲಿ ಉದ್ಭವವಾಗುವ ಜ್ಞಾನವೃತ್ತಿಗೆ 'ವಿವೇಕ ಖ್ಯಾತಿ' ಎನ್ನುತ್ತಾರೆ.



**ಉಪಸಂಹಾರ:**




ಯೋಗಸೂತ್ರದ ಸಾಧನಾಮಾರ್ಗಗಳ ಪಕ್ಷಿನೋಟವನ್ನು ಕೊಡುವ ಮೇಲಿನ ರೇಖಾಚಿತ್ರದಲ್ಲಿ ವಿವರಿಸಿರುವಂತೆ, ಯೋಗ ಸಾಧನೆಯ ಮೂರು ವಾಹಿನಿಗಳಾದ ೧) ಅಷ್ಟಾಂಗಯೋಗ, ೨) ಕ್ರಿಯಾಯೋಗ ಮತ್ತು ೩) ಪರವೈರಾಗ್ಯಪಥಗಳ ಅಭ್ಯಾಸದ ಪರಿಣಾಮವಾಗಿ ಸಾಧಕನಿಗೆ **ವಿವೇಕಖ್ಯಾತಿ**ಯು ಲಭಿಸಿ, ತನ್ಮೂಲಕ ಅವನು ಸಂಪ್ರಜ್ಞಾತ ಸ್ಥಿತಿಯ ಅನುಭವವನ್ನು ಪಡೆಯುತ್ತಾನೆ. ಈ ಸಂಪ್ರಜ್ಞಾತ ಸ್ಥಿತಿಯಲ್ಲಿ ಸಾಧಕನು ಯೋಗಸೂತ್ರದಲ್ಲಿ ಉಲ್ಲೇಖಿಸಿದ ಸವಿತರ್ಕ, ನಿರ್ವಿತಕ, ಸವಿಚಾರ, ನಿರ್ವಿಚಾರ, ಜ್ಯೋತಿಷ್ಮತೀ ಎಂಬ ಬೇರೆ ಬೇರೆ ಬಗೆಯ ಸಮಾಧಿಯ ಅನುಭವಗಳನ್ನು ಪಡೆಯತ್ತಾನೆ. ಈ ಸಮಾಧಿಯ ಅನುಭವಗಳನ್ನು **ಸಮಾಪತ್ತಿ**ಗಳು ಎಂದು ವಿವರಿಸಲಾಗಿದೆ.

ಆದರೆ ಯೋಗಮಾರ್ಗದಲ್ಲಿ ಮುನ್ನಡೆಯುವ ಸಾಧಕನು ಯಾವುದೇ ಬಗೆಯ ಪ್ರಾಥಮಿಕ ಅನುಭವವನ್ನು ಪಡೆಯ ಬೇಕಾದರೆ ಮುಖ್ಯವಾಗಿ ಅವನ ಮನಸ್ಸು ಕ್ಲೇಶಸಂಸ್ಕಾರದಿಂದ ಮುಕ್ತವಾಗಿ – ಕ್ಲೇಶನಿವೃತ್ತಿಯನ್ನು ಮೊದಲು ಪಡೆಯಬೇಕು.

ಯೋಗಸೂತ್ರದ ಎಲ್ಲಾ ಸಾಧನೆಯ ಸಾರವನ್ನು ಸಂಕ್ಷಿಪ್ತವಾಗಿ ಈ ರೀತಿ ಹೇಳಬಹುದು: ಕ್ರಿಯಾಯೋಗದಲ್ಲಿ ಹೇಳಿದ – ತಪಃ,

ಸ್ವಾಧ್ಯಾಯ, ಈಶ್ವರಪ್ರಣಿಧಾನ; ಅಷ್ಟಾಂಗಯೋಗದಲ್ಲಿ ಹೇಳಿದ – ಯಮ, ನಿಯಮ ಮುಂತಾದ ಅಷ್ಟಾಂಗಗಳ ಅಭ್ಯಾಸದಿಂದ ಕ್ಲೇಶಸಂಸ್ಕಾರಗಳು ನಿಷ್ಕ್ರಿಯಗೊಂಡು ಸ್ಥಗಿತವಾದಾಗ ಚಿತ್ತಪ್ರಸಾದ ಲಭ್ಯವಾಗುವುದು. ಪ್ರಸನ್ನವಾದ ಚಿತ್ತದಿಂದ – ಪ್ರತ್ಯಾಹಾರ ಮತ್ತು ಧಾರಣಸ್ಥಿತಿಯ ಅಭ್ಯಾಸ ಸಾಧ್ಯವಾಗುವುದು. ತದನಂತರ ಧಾರಣ ಸ್ಥಿತಿಯ ಮೂಲಕ ಮನಸ್ಸು ಧ್ಯಾನಸ್ಥಿತಿಗೆ ಏರುವುದು. ಧ್ಯಾನಸ್ಥಿತಿಯಿಂದ ಕ್ರಮೇಣ ಸಮಾಧಿಯ ಸ್ಥಿತಿಯನ್ನು ತಲುಪಿದಾಗ ಮನಸ್ಸು ಅಂತರ್ಯದ ಪುರುಷಚೈತನ್ಯದ ಬೆಳಕಿನ ಆನಂದವನ್ನು ಅನುಭವಿಸಿ, **ಏಕತಾನತಾ ವೃತ್ತಿ**ಯ ಮೂಲಕ ಸತತವಾದ ಪ್ರಜ್ಞಾವೃತ್ತಿಯನ್ನು ಹೊಂದುವುದು. ಅನಂತರ ಅದು ಸಂಪ್ರಜ್ಞಾತ ಮತ್ತು ಅಸಂಪ್ರಜ್ಞಾತ ಸಮಾಧಿಗಳೆಂಬ ಅತ್ಯುನ್ನತ ಸ್ಥಿತಿಯನ್ನು ಪಡೆಯುತ್ತದೆ. ಇದರ ಪರಿಣಾಮವಾಗಿ ಪುರುಷನು ಪ್ರಕೃತಿಯ ವಿಯೋಗವನ್ನು ಅನುಭವಿಸುತ್ತಾನೆ. ಇದನ್ನೇ **'ಕೈವಲ್ಯ'** ಎಂದು ಕರೆಯತ್ತಾರೆ.

ಯೋಗಸಾಧಕರು – ಯೋಗಾಸನದ ಮತ್ತು ಪ್ರಾಣಾಯಾಮಗಳ ವಿವಿಧ ರೀತಿಯ ಅಭ್ಯಾಸಗಳಿಗೆ ಮಾತ್ರ ಪಾತಂಜಲ ಯೋಗವನ್ನು ಸೀಮಿತಗೊಳಿಸದೆ, **'ಪಾತಂಜಲ ಯೋಗಸೂತ್ರ'**ವು ಸ್ಪಷ್ಟವಾಗಿ ವಿವರಿಸಿದ ಆಧ್ಯಾತ್ಮಿಕ ಸಾಧನಾ ಪ್ರಣಾಳಿಗಳನ್ನು ಸಮಗ್ರವಾಗಿ ಅಧ್ಯಯನ ಮಾಡಬೇಕು. ಈ ಯೋಗಸಾಧನೆಯನ್ನು ಸದ್ಗುರುವಿನ ಮಾರ್ಗದರ್ಶನದಿಂದ ಅನುಷ್ಠಾನ ಮಾಡಿದರೆ, ಅವರ ಯೋಗಾಭ್ಯಾಸ ಪರಿಪೂರ್ಣಗೊಂಡು ಸಫಲವಾಗುತ್ತದೆ ಎಂಬುದು ಖಚಿತ.

*ಗ್ರಂಥದ ಆವೃತ್ತಿಗಳು:*

ಇಂಗ್ಲಿಷ್: 1. **Patanjali Yoga Sutras,** Swami Prabhavananda, Sri Ramakrishna Math, Mylapore, Chennai 600 004, P.167, Rs.50/-

2. **Meditaion as Spiritual Culmination : Yoga Aphorisms of Patanjali** (2 Volumes), **Advaita Ashrama,** 5, Dehi Entally Road, Kolkatta 700 014, P.1611, Rs.650/-

ಕನ್ನಡ: ೧. **ಪಾತಂಜಲ ಯೋಗದರ್ಶನ,** ಸ್ವಾಮಿ ಆದಿದೇವಾನಂದ, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು ೫೭೦೦೨೦, ಪು.೨೫೦, ಬೆಲೆ: ೮೦/–

೨. **ಮಹರ್ಷಿ ಪತಂಜಲಿಯ ಯೋಗಸೂತ್ರಗಳು,** ಸ್ವಾಮಿ ಹರ್ಷಾನಂದ, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು ೫೭೦೦೨೦, ಪು.೧೯೦, ಬೆಲೆ: ೭೦/–

೩. **ಯೋಗ ಮತ್ತು ಆಧ್ಯಾತ್ಮಿಕ ಸಾಧನೆ,** ಸ್ವಾಮಿ ಭಜನಾನಂದ, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು ೫೭೦೦೨೦, ಪು.೧೪೮, ಬೆಲೆ: ೩೫/– 

## ಯೋಗಿಯ ಲಕ್ಷಣ



ಯಾರು ನಿಜವಾಗಿಯೂ ಯೋಗಿಗಳಾಗಬೇಕೆಂದು ಬಯಸುವರೋ ಅವರು ಎಲ್ಲವನ್ನೂ ಸ್ವಲ್ಪ ಸ್ವಲ್ಪ ರುಚಿನೋಡುವ ಅಭ್ಯಾಸವನ್ನು ಒಂದೇ ಸಲ ಬಿಟ್ಟು ಬಿಡಬೇಕು. ಒಂದು ಭಾವನೆಯನ್ನು ತೆಗೆದುಕೊಳ್ಳಿ. ಅದನ್ನು ನಿಮ್ಮ ಜೀವನದಲ್ಲಿ ಅಭ್ಯಾಸ ಮಾಡಿ, ಅದನ್ನೇ ಆಲೋಚನೆ ಮಾಡಿ. ಅದನ್ನೇ ಕನಸು ಕಾಣಿ. ಆ ಒಂದು ಭಾವನೆಗಾಗಿ ನಿಮ್ಮ ಬಾಳನ್ನೆಲ್ಲ ಸವೆಸಿ, ಮೆದುಳು, ಮಾಂಸಖಂಡಗಳು, ನರಗಳು ಮತ್ತು ನಿಮ್ಮ ದೇಹದ ಪ್ರತಿಯೊಂದು ಭಾಗವೂ ಕೂಡ ಆ ಭಾವದಿಂದ ತುಂಬಿ ತುಳುಕಾಡಲಿ. ಉಳಿದ ಆಲೋಚನೆಗಳನ್ನೆಲ್ಲ ಅವುಗಳ ಪಾಡಿಗೆ ಬಿಡಿ. ಜಯ ಪಡೆಯುವುದಕ್ಕೆ ಇದೊಂದೇ ದಾರಿ. ಮಹಾ ಆಧ್ಯಾತ್ಮಿಕ ವೀರರು ಆಗುವ ರೀತಿಯೆ ಇದು. ಉಳಿದವರು ಕೇವಲ ಮಾತನಾಡುವ ಯಂತ್ರಗಳು. ನಾವು ನಿಜವಾಗಿಯೂ ಮುಕ್ತರಾಗಬೇಕಾದರೆ, ಮತ್ತು ಇತರರನ್ನು ಬಂಧಮುಕ್ತರನ್ನಾಗಿ ಮಾಡಬೇಕಾದರೆ ನಾವು ಇನ್ನೂ ಆಳಕ್ಕೆ ಹೋಗಬೇಕು. ಅದಕ್ಕೆ ಮೊದಲನೆಯ ಸಲಹೆಯೇ ಮನಸ್ಸನ್ನು ಕದಲಿಸದೆ ಇರುವುದು. ಯಾರ ಆಲೋಚನೆಗಳು ನಮ್ಮ ಭಾವನೆಯನ್ನು ಚಂಚಲಗೊಳಿಸುತ್ತವೆಯೋ ಅವರೊಂದಿಗೆ ಬೆರೆಯಕೂಡದು. ಕೆಲವು ಸ್ಥಳ, ಕೆಲವು ವ್ಯಕ್ತಿ ಮತ್ತು ಕೆಲವು ಆಹಾರ ಜುಗುಪ್ಸೆಯನ್ನುಂಟುಮಾಡುವುದೆಂದು ನಿಮಗೆ ಗೊತ್ತಿದೆ. ಅವುಗಳಿಂದ ದೂರವಾಗಿ, ಯಾರು ಈ ಜೀವನದಲ್ಲಿ ತುತ್ತತುದಿಗೇರಬೇಕೆಂದು ಬಯಸುವರೊ ಅವರು ಒಳ್ಳೆಯ ಮತ್ತು ಕೆಟ್ಟ ಸಹವಾಸಗಳನ್ನೆಲ್ಲ ತ್ಯಜಿಸಬೇಕು. ಕಷ್ಟಪಟ್ಟು ಸಾಧನೆ ಮಾಡಿ. ನೀವು ಬದುಕಿದರೇನು ಸತ್ತರೇನು, ಚಿಂತೆಯಿಲ್ಲ. ಫಲಾಪೇಕ್ಷೆ ಇಲ್ಲದೆ ಕೆಲಸಕ್ಕೆ ಕೈಹಾಕಬೇಕು. ನೀವು ಧೈರ್ಯಶಾಲಿಗಳಾದರೆ ಆರು ತಿಂಗಳಲ್ಲಿ ಸಿದ್ಧ ಯೋಗಿಗಳಾಗುವಿರಿ. ಜಯ ಹೊಂದಬೇಕಾದರೆ ಅತ್ಯದ್ಭುತವಾದ ಇಚ್ಛಾಶಕ್ತಿ ಛಲ ಇವುಗಳು ಬೇಕು. ''ಸಾಗರವನ್ನೆ ಕುಡಿಯುತ್ತೇನೆ'', ''ಪರ್ವತಗಳು ಧೂಳಿ ದೂಸರವಾಗುವುವು, ನನ್ನ ಇಚ್ಛಾಶಕ್ತಿಯಿಂದ'' ಎನ್ನುವವನು ಛಲಗಾರ. ಅಂತಹ ಶಕ್ತಿ ಇರಲಿ, ಅಂತಹ ಶಪಥವಿರಲಿ. ಕಷ್ಟಪಟ್ಟು ಸಾಧನೆಮಾಡಿ. ನೀವು ಗುರಿಯನ್ನು ಸೇರಿಯೇ ಸೇರುತ್ತೀರಿ. *– **ಸ್ವಾಮಿ ವಿವೇಕಾನಂದ** (ಕೃತಿಶ್ರೇಣಿ, ಸಂ.೨, ಪು.೩೬೧–೬೨)*



# ನಾರದ ಭಕ್ತಿ ಸೂತ್ರ ಮತ್ತು ಆಧ್ಯಾತ್ಮಿಕ ಸಾಧನೆ

ಸ್ವಾಮಿ ಆತ್ಮವಿದಾನಂದ

ಭಕ್ತಿಗೆ ಸೂತ್ರರೂಪದಲ್ಲಿರುವ ಆಧಾರ ಗ್ರಂಥವೇ 'ನಾರದ ಭಕ್ತಿ ಸೂತ್ರ.' ಭಕ್ತಿಯ ವಿವಿಧ ಹಂತಗಳನ್ನು, ವಿವಿಧ ನೆಲೆಯ ಸಾಧನೆಗಳನ್ನು ವಿವರಿಸುವ ಈ ಗ್ರಂಥವನ್ನು ಪರಿಚಯಿಸಿರುವ ಪೂಜ್ಯ ಸ್ವಾಮೀಜಿ ಯವರು 'ವಿವೇಕಪ್ರಭ'ದ ಮೊದಲ ವ್ಯವಸ್ಥಾಪಕ ಸಂಪಾದಕರಾಗಿದ್ದರು. ಮೈಸೂರು ಕೂಡ ಸೇರಿದಂತೆ ರಾಮಕೃಷ್ಣ ಮಹಾಸಂಘದ ಹಲವು ಶಾಖಾಕೇಂದ್ರಗಳ ಅಧ್ಯಕ್ಷರಾಗಿದ್ದು ಕೊಂಡು ಅನೇಕ ಸೇವಾ ಚಟುವಟಿಕೆಗಳನ್ನು ಆರಂಭಿಸಿರುವ ಅವರು, ಪ್ರಸ್ತುತ ವಿಶಾಖಪಟ್ಟಣಂ ರಾಮಕೃಷ್ಣ ಮಿಷನ್ ಆಶ್ರಮದ ಅಧ್ಯಕ್ಷರಾಗಿದ್ದಾರೆ.

ಕಲಿಯುಗದಲ್ಲಿ ಆಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರಿಯಲು ದೇವರ್ಷಿ ನಾರದರು ತೋರಿಸಿಕೊಟ್ಟ ಭಕ್ತಿ ಮಾರ್ಗ ಅತಿ ಸೂಕ್ತ ಮತ್ತು ಸರಳ ಎಂದು ಭಗವಾನ್ ಶ್ರೀರಾಮಕೃಷ್ಣರು ಮತ್ತೆ ಮತ್ತೆ ಹೇಳುತ್ತಾರೆ. ದೇವರ್ಷಿ ನಾರದರು ಭಗವಂತನ ಉತ್ತಮ ಭಕ್ತರಲ್ಲಿ ಒಬ್ಬರು. ಅವರು '**ನಾರದ ಭಕ್ತಿಸೂತ್ರ**' ಎನ್ನುವ ಕಿರು ಹೊತ್ತಿಗೆಯಲ್ಲಿ (ಕೇವಲ ೮೪ ಸೂತ್ರಗಳ ಮೂಲಕ) ಭಕ್ತಿಮಾರ್ಗದ ಸಾರವನ್ನು ವಿವರಿಸಿದ್ದಾರೆ.

ದೇವರ್ಷಿ ನಾರದರ ಜೀವನ ವೃತ್ತಾಂತವನ್ನು ಶ್ರೀಮದ್‌ಭಾಗವತದಲ್ಲಿ ವಿಸ್ತಾರವಾಗಿ ಕಾಣುತ್ತೇವೆ. ಹಿಂದಿನ ಜನ್ಮದಲ್ಲಿ ಶೂದ್ರ ದಾಸಿಯೊಬ್ಬಳ ಮಗನಾಗಿ ಹುಟ್ಟಿದ ಅವರು ಬಾಲ್ಯಕಾಲದಲ್ಲಿ ಅವರ ಊರಿಗೆ ಬಂದ ಸಾಧು-ಸಂತರ ಸೇವೆಯ ಮೂಲಕ ಅವರ ಆಶೀರ್ವಾದವನ್ನು ಪಡೆಯುತ್ತಾರೆ. ಬಾಲ್ಯದಲ್ಲಿ ಅವರು ತಮ್ಮ ತಾಯಿಯನ್ನು ಕಳೆದುಕೊಂಡು ಅನಾಥರಾಗುತ್ತಾರೆ. ಅರಣ್ಯದಲ್ಲಿ ಏಕಾಕಿಯಾಗಿ ಅಲೆಯುತ್ತಿದ್ದಾಗ ಭಗವದನುಗ್ರಹದಿಂದ – ಅವರಿಗೆ ಅವನ ದರ್ಶನವಾಗುತ್ತದೆ. ಈ ಜೀವನದಲ್ಲಿ ಅವರಿಗೆ ಅಷ್ಟೇ ಲಭ್ಯವೆಂದು ಆಕಾಶವಾಣಿಯಾಗುತ್ತದೆ. ಅವರು ತಮ್ಮ ಜೀವನ ಸರ್ವಸ್ವವನ್ನೂ ಭಗವಂತನ ನಾಮಸ್ಮರಣೆಯಲ್ಲೇ ಕಳೆಯುತ್ತಾರೆ. ಮುಂದಿನ ಜನ್ಮದಲ್ಲಿ ಬ್ರಹ್ಮನ ಮಾನಸಪುತ್ರನಾಗಿ ಜನ್ಮ ತಾಳಿ, ದೇವರ್ಷಿ ಪದವಿಯನ್ನು ಪಡೆದು, ನಾಮಸ್ಮರಣೆ, ಭಗವತ್ ಚಿಂತನೆ, ಭಕ್ತಿಯನ್ನು ಆಚರಿಸುತ್ತಾ, ಈ ದಿವ್ಯ ಗುಣಗಳ ಪ್ರಚಾರ ಮಾಡುತ್ತಾ ತಮ್ಮ ಜೀವನವನ್ನು ಕಳೆಯುತ್ತಾರೆ.

ಭಕ್ತಿಶಾಸ್ತ್ರದಲ್ಲಿ '**ನಾರದ ಭಕ್ತಿ ಸೂತ್ರ**' ಮುಖ್ಯ ಸ್ಥಾನವನ್ನು ಪಡೆದಿದೆ. ನಾರದರ ಮೂಲ ಭಾವನೆಗಳನ್ನು ಸೂತ್ರಗಳ ರೂಪದಲ್ಲಿ ನಿರೂಪಿಸಿರುವ ಈ ಕೃತಿಯು ಸುಮಾರು ೧೨ನೇ ಶತಮಾನದಲ್ಲಿ ಈಗಿನ 'ಭಕ್ತಿಸೂತ್ರ' ರೂಪದಲ್ಲಿ ರಚಿತವಾಗಿರಬಹುದೆಂದು ಕೆಲವು ಪಂಡಿತರ ಮತ. ಈ ಗ್ರಂಥ ಶಾಂಡಿಲ್ಯ ಸೂತ್ರಗಳಿಗಿಂತ ಸುಲಭವಾಗಿದೆ, ಅಂತೆಯೇ ಹೆಚ್ಚು ಪ್ರಸಿದ್ಧಿಯನ್ನು ಪಡೆದಿದೆ.

ಗ್ರಂಥದ ಪ್ರಾರಂಭದಲ್ಲಿಯೇ ಭಕ್ತಿ ಎಂದರೆ ಏನು ಎನ್ನುವುದನ್ನು '**ಸಾ ತ್ವಸ್ಮಿನ್ ಪರಮಪ್ರೇಮರೂಪಾ**' (ಸೂತ್ರ ೨) ಎಂದರೆ 'ಆ ಭಕ್ತಿಯಾದರೋ ಇವನಲ್ಲಿ ಪ್ರೇಮರೂಪವಾಗಿರುತ್ತದೆ' ಎಂದು ವಿಶದಪಡಿಸಿರುತ್ತಾರೆ. ಈ ಸೂತ್ರದ ಅರ್ಥವನ್ನು ಸ್ವಲ್ಪ ಕೂಲಂಕಷವಾಗಿ ತಿಳಿದುಕೊಂಡರೆ, ಭಕ್ತಿಶಾಸ್ತ್ರದ ಬಗ್ಗೆ ಹಾಗೂ ದೇವರ್ಷಿ ನಾರದರ ವಿಚಾರದ ಬಗ್ಗೆ ತಿಳಿಯಬೇಕಾದ ಮುಖ್ಯ ವಿಷಯಗಳನ್ನು ತಿಳಿದಂತಾಗುತ್ತದೆ.

೧. ಈ ಮೇಲಿನ ಸೂತ್ರದಲ್ಲಿ ನಾರದರು ಇವನಲ್ಲಿ – **ಅಸ್ಮಿನ್** ಎಂಬ ಪದವನ್ನು ಪ್ರಯೋಗಿಸಿ – ಭಗವಂತನು ನಮಗೆ ಬಹಳ ಹತ್ತಿರದವನು ('ಅವನಲ್ಲಿ' ಅಲ್ಲ!) ಅಂದರೆ ಅವನು ನಮ್ಮ ಅಂತರ್ಯಾಮಿ ಎಂದು ಸೂಚಿಸಿದ್ದಾರೆ.

೨. ಇವನಲ್ಲಿ ಎಂಬ ಪ್ರಯೋಗದಿಂದ ನಾರದರು ಯಾವ ದೇವತಾ ಸ್ವರೂಪವನ್ನೂ (ಅಂದರೆ ವಿಷ್ಣು, ಶಿವ, ಶಕ್ತಿ ಮುಂತಾದ ರೂಪಗಳು) ಭಕ್ತಿಗಾಗಿ ನಿಶ್ಚಯಪಡಿಸಿಲ್ಲ, ಹಾಗಾಗಿ ಪ್ರತಿಯೊಬ್ಬರೂ – ಅವರು ಯಾವ ಧರ್ಮದವರೇ ಆಗಲಿ ಯಾವ ದೇವತೆಯ ಆರಾಧಕರೇ ಆಗಲಿ, ಯಾವ ಧರ್ಮದವರೇ ಆಗಲಿ – ಅವರವರ ಇಷ್ಟದೇವತೆಗೆ ಅನ್ವಯವಾಗುತ್ತದೆ.

೩. ಪ್ರೇಮ ಎನ್ನುವುದು ಎಲ್ಲರೂ ಅರಿತಿರುವ ವಿಷಯ. ಎಲ್ಲರೂ ಯಾರನ್ನಾದರೂ ಅಥವಾ ಯಾವ ವಸ್ತುವನ್ನಾದರೂ ಪ್ರೀತಿಸುತ್ತಾರೆ. ಇಲ್ಲಿ ಅದೇ ಪ್ರೇಮವನ್ನು '**ತು**' – 'ಆದರೆ' ಎಂಬ ಪ್ರತ್ಯಯವನ್ನು ಜೋಡಿಸಿ – ಪ್ರೇಮ ಅದರಲ್ಲೂ ಪರಮಪ್ರೇಮವನ್ನು '**ಅಸ್ಮಿನ್**' – ತನ್ನ ಇಷ್ಟದೇವತೆಯಲ್ಲಿ ತಿರುಗಿಸಿದಾಗ ಮಾತ್ರ ಅದು ನಿಜವಾದ – 'ಪರಾಭಕ್ತಿ' ಆಗುವುದು.

ಭಕ್ತಿಯನ್ನು **ಪರಾ** (ಆತ್ಯಂತಿಕ) ಹಾಗೂ **ಅಪರಾ** (ಪ್ರಾರಂಭಿಕ) ಎಂದು ಎರಡು ವಿಧಗಳಾಗಿ ವಿಂಗಡಿಸಲಾಗಿದೆ. ಅಪರಾ ಭಕ್ತಿಯಲ್ಲಿ ಎರಡು ಹಂತಗಳು: ಗೌಣೀ ಮತ್ತು ಮುಖ್ಯಭಕ್ತಿ ಎಂದು. **ನಾರದ ಭಕ್ತಿ ಸೂತ್ರ**ದಲ್ಲಿ ಈ ಎಲ್ಲ ವಿಧವಾದ ಹಂತಗಳನ್ನು ವಿವರಿಸಲಾಗಿದೆ. ಆದರೆ ದೇವರ್ಷಿ ನಾರದರ ಪ್ರಕಾರ ಭಕ್ತಿಯ ಗುರಿ ಪರಾಭಕ್ತಿಯನ್ನು ಪಡೆಯುವುದು.

ಈ ಗ್ರಂಥದಲ್ಲಿ ದೇವರ್ಷಿನಾರದರು ಬೇರೆ ಬೇರೆ ಆಚಾರ್ಯರ ಭಕ್ತಿಯನ್ನು ಕುರಿತ ನಿರೂಪಣೆಯನ್ನೂ ತೋರಿಸಿ, ತಮ್ಮ ಸಿದ್ಧಾಂತವನ್ನು ನಿರೂಪಿಸುತ್ತಾರೆ – **'ನಾರದಸ್ತು ತದರ್ಪಿತ ಅಖಿಲ ಆಚಾರತಾ ತದ್ವಿಸ್ಮರಣೇ ವ್ಯಾಕುಲತೇತಿ'** (ಸೂ. ೧೯) ಎಂದು. ಎಂದರೆ, ಭಕ್ತನು ತಾನು ಮಾಡತಕ್ಕ ಸಮಸ್ತ ಕಾಯಿಕ, ವಾಚಿಕ ಮತ್ತು ಮಾನಸಿಕ ಕರ್ಮಗಳನ್ನು ಭಗವಂತನಿಗೆ ಅರ್ಪಿಸುತ್ತ ಭಗವಂತನನ್ನು ಕ್ಷಣಮಾತ್ರವೂ ಮರೆಯದೆ ಇರುತ್ತಾನೆ. ಇದಕ್ಕೆ ಉದಾಹರಣೆಯಾಗಿ **'ಯಥಾ ವ್ರಜಗೋಪಿಕಾಯಾಂ'** (ಸೂ. ೨೧) – ವ್ರಜ ಗೋಪಿಕೆಯರ ಭಕ್ತಿಯನ್ನು ಎತ್ತಿ ತೋರಿಸುತ್ತಾನೆ. ವ್ರಜಗೋಪಿಕೆಯರಲ್ಲಿಯೂ ಭಗವಂತನ ಸ್ವರೂಪ ಹಾಗೂ ಮಹಾತ್ಮೆಯ ಜ್ಞಾನ ಇರುತ್ತದೆ (ಸೂ.೨೨). ಹೀಗೆ ಸೂಚಿಸುತ್ತಾ ಪರಮಭಕ್ತೆಯರಾದ ಗೋಪಿಕೆಯರು ಭಗವಂತನ ಸ್ವರೂಪ ಹಾಗೂ ಮಹಾತ್ಮೆಯ ಜ್ಞಾನವನ್ನು ಚೆನ್ನಾಗಿ ಅರಿತು, ತಮ್ಮ ಎಲ್ಲ ಕರ್ಮಗಳನ್ನೂ ಮಾಡುತ್ತಿದ್ದರು ಎಂದು ನಿರೂಪಿಸುತ್ತಾರೆ. ಹೀಗೆ ನಾರದರು ಭಕ್ತಿ, ಜ್ಞಾನ ಕರ್ಮಯೋಗಗಳ ಸಮುಚ್ಚಯವನ್ನು ಪ್ರತಿಪಾದಿಸುತ್ತಾರೆ. ಭಗವಾನ್ ಶ್ರೀರಾಮಕೃಷ್ಣ-ವಿವೇಕಾನಂದರೂ ಈ ಯುಗಕ್ಕಾಗಿ ವೇದಾಂತವನ್ನು ನಿರೂಪಿಸುವಾಗ ಈ ಯೋಗ ಸಮನ್ವಯ ಮಾರ್ಗವನ್ನೇ ಪ್ರತಿಪಾದಿಸುತ್ತಾರೆ ಹಾಗೂ ರಾಮಕೃಷ್ಣ ಮಠ ಹಾಗೂ ಮಿಷನ್ನಿನ ಲಾಂಛನದಲ್ಲೂ ಇದನ್ನೇ ತೋರಿಸುತ್ತಾರೆ. ಈ ಕಾರಣದಿಂದ ಭಗವಾನ್ ಶ್ರೀರಾಮಕೃಷ್ಣರ ''ಕಲಿಯುಗದಲ್ಲಿ ನಾರದೀಯ ಭಕ್ತಿಯೇ ಅತ್ಯಂತ ಉತ್ತಮವಾದುದು'' ಎಂಬ ಮಾತು ಸೂಕ್ತವೆನಿಸುತ್ತದೆ.

ಇನ್ನು ಅಪರಾ ಭಕ್ತಿಯಲ್ಲಿ **ಗೌಣೀ** ಮತ್ತು **ಮುಖ್ಯ ಭಕ್ತಿ** ಎಂದು ವಿಭಾಗ ಮಾಡಿ, ಗೌಣೀಭಕ್ತಿಯಲ್ಲಿ ಆರ್ತಿ, ಅರ್ಥಾರ್ಥಿ ಹಾಗೂ ಜಿಜ್ಞಾಸುವನ್ನು, ಮುಖ್ಯ ಭಕ್ತಿಯಲ್ಲಿ ಈ ಕೆಳಕಂಡ ಹನ್ನೊಂದು ಸಾಧನೆಗಳನ್ನು ನಾರದರು ಸೂಚಿಸಿರುತ್ತಾರೆ:

೧. ವಿಷಯಾಸಕ್ತಿಯ ತ್ಯಾಗ ೨. ಮಹಾಪುರುಷರ ಸಂಗ ಹಾಗೂ ಸೇವೆ ೩. ಮಮಕಾರ ತ್ಯಾಗ ೪. ಏಕಾಂತವಾಸ ೫. ಲೌಕಿಕ ವಿಷಯ ಹಾಗೂ ವ್ಯಕ್ತಿಗಳಿಂದ ಬಿಡಿಸಿಕೊಳ್ಳುವುದು ೬. ತ್ರಿಗುಣಗಳನ್ನು ಮೀರಿ ಹೋಗುವುದು ೭. ಯೋಗಕ್ಷೇಮಗಳ ತ್ಯಾಗ ೮. ಕರ್ಮಫಲ ತ್ಯಾಗ ೯. ಕರ್ತೃತ್ವ ಭಾವತ್ಯಾಗ ೧೦. ದ್ವಂದ್ವರಾಹಿತ್ಯ ೧೧. ಫಲಪೇಕ್ಷೆಯಿಂದ ಮಾಡುವ ಲೋಕ-ವೈದಿಕ ಕರ್ಮಗಳ ತ್ಯಾಗ. (ಸೂ. ೪೬-೫೦)

ಈ ಮೇಲಿನ ಪಟ್ಟಿಯನ್ನು ನೋಡಿದರೆ ಭಕ್ತಿಮಾರ್ಗದಲ್ಲಿಯೂ 'ತ್ಯಾಗ' ಎನ್ನುವ ಅಂಶ ಸಾಧನೆಯ ಮುಖ್ಯ ಅಂಶವಾಗಿ ಕಾಣುತ್ತದೆ. ಇದು ಒಂದು ವಿಧವಾಗಿ ನಕಾರಾತ್ಮಕ ಮಾರ್ಗದ ಮೂಲಕ ಯಾವುದರಿಂದ ದೂರವಿರಬೇಕು ಎಂದು ಸೂಚಿಸಿದರೆ, ಬಹುಮುಖ್ಯವಾಗಿ ಇರಬೇಕಾದ ಧನಾತ್ಮಕ ಅಂಶಗಳ (ಮುಂಚೆ ತಿಳಿಸಿದ 'ನಾರದಸ್ತು...' ಸೂ. ೧೯) ಹಾಗೂ ಸತ್ಸಂಗದ ಮಹತ್ವವನ್ನು ಬಹಳ ಒತ್ತಿ ಹೇಳಿದ್ದಾರೆ.

ಹೀಗೆ ದೇವರ್ಷಿ ನಾರದರು ಪರಾಭಕ್ತಿಯ ನಿರೂಪಣೆಯನ್ನು ಮಾಡುತ್ತಾ, ಅದರೊಂದಿಗೆ ಅಪರಾ ಭಕ್ತಿಯ ಹಲವು ಮುಖಗಳನ್ನು ವಿವರಿಸುತ್ತಾರೆ. ಅದು ನಮ್ಮನ್ನು ಗುಣರಹಿತ-ಕಾಮನಾ ರಹಿತ ಎಂದು ವಿವರಿಸುತ್ತಾ ಹಂತಹಂತವಾಗಿ ಆ ಮುಖ್ಯಭಕ್ತಿಯನ್ನು ಪಡೆದವನಿಗೆ ಪರಾಭಕ್ತಿಯು ಹೇಗೆ ಹತ್ತಿರದ ಹಂತವಾಗುತ್ತದೆ;




ಮತ್ತು ಪರಾಭಕ್ತಿಯನ್ನು ಪಡೆದವನು ಭಗವದ್ಗೀತೆಯಲ್ಲಿ ತಿಳಿಸಿರುವ **'ಜ್ಞಾನೀ ತ್ವಾತ್ಮೈವ ಮೇ ಮತಂ'** ಎಂಬುದನ್ನು ಸೂಚಿಸುತ್ತಾನೆ, ಅಪರಾ ಭಕ್ತಿಯನ್ನು ಪಡೆದವನು ಭಗವಂತನೊಡನೆ ಹೇಗೆ ಒಂದಾಗುತ್ತಾನೆ ಎಂಬ ಅನುಭವವನ್ನು ಸೂಚಿಸುವುದರ ಮೂಲಕ ಆಧ್ಯಾತ್ಮಿಕ ಜೀವನದ ಎಲ್ಲ ಹಂತಗಳನ್ನೂ ದೇವರ್ಷಿ ನಾರದರು **ನಾರದ ಭಕ್ತಿಸೂತ್ರ**ದಲ್ಲಿ ತೋರಿಸಿದ್ದಾರೆ.

### *ಕೃತಿಯ ಆವೃತ್ತಿಗಳು:*

1. **Narada Bhakti Sutras,** Swami Tyagishananda, Ramakrishna Math, Mylapore, Chennai - 600004, p. 255, Rs.50

2. **Narada Bhakti Sutras,** Swami Bhuteshananda, Advaita Ashrama, 5, Entally Road, Kolkata - 700014, 212 pages, Rs.50

3. **ನಾರದ ಭಕ್ತಿ ಸೂತ್ರ**, ಸ್ವಾಮಿ ಸೋಮನಾಥಾನಂದ, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು ೫೭೦೦೨೦, ಪು. ೧೧೬, ರೂ.೨೦

4. **ದೇವರ್ಷಿ ನಾರದರ ಭಕ್ತಿಸೂತ್ರಗಳು,** ಸ್ವಾಮಿ ಹರ್ಷಾನಂದ, ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು ೫೭೦೦೨೦, ಪು. ೨೦೦, ರೂ.೩೮

✤

# ಯೋಗವಾಸಿಷ್ಠದಲ್ಲಿ ಆಧ್ಯಾತ್ಮಿಕ ಚಿಂತನೆ

**ಡಾ ॥ ಟಿ.ವಿ. ಸತ್ಯನಾರಾಯಣ**

ತತ್ತ್ವ ಹಾಗೂ ಸಾಧನೆ ಇವೆರಡರ ದೃಷ್ಟಿಯಿಂದಲೂ ಅದ್ವೈತ ಪರಂಪರೆಯಲ್ಲಿ ಅತ್ಯಂತ ವಿಶಿಷ್ಟ ಸ್ಥಾನವನ್ನು ಪಡೆದಿರುವ ಕೃತಿರತ್ನವೇ 'ಯೋಗವಾಸಿಷ್ಠ.' ಬಹುವಿಸ್ತಾರವಾದ ಈ ಗ್ರಂಥದಲ್ಲಿ ಬರುವ ಕಥೋಪಕಥೆಗಳು ಅತ್ಯಂತ ಸ್ಫೂರ್ತಿದಾಯಕವೂ, ಬುದ್ಧಿಪ್ರೇರಕವೂ, ವೈರಾಗ್ಯಪರವೂ ಆಗಿವೆ. ಈ ಕೃತಿಯನ್ನು ಪರಿಚಯಿಸಿರುವ ಲೇಖಕರು ಹಿರಿಯ ಸಂಸ್ಕೃತ ವಿದ್ವಾಂಸರು; ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಉಪನಿರ್ದೇಶಕರಾಗಿದ್ದು ನಿವೃತ್ತರಾಗಿದ್ದಾರೆ. ಶ್ರೀಯುತರು ಶ್ರೇಷ್ಠವಾಗ್ಮಿಗಳೂ, ಅಲಂಕಾರ-ವ್ಯಾಕರಣ ಶಾಸ್ತ್ರಗಳಲ್ಲಿ ವಿಶೇಷ ಪರಿಣತರೂ ಆಗಿದ್ದಾರೆ.

**ಯೋಗವಾಸಿಷ್ಠವು** ಅದ್ವೈತವೇದಾಂತದ ಒಂದು ದೊಡ್ಡ ಪ್ರಕರಣ ಗ್ರಂಥ. ವಸಿಷ್ಠ ಮಹರ್ಷಿಗಳು ಶ್ರೀರಾಮನಿಗೆ ಯೋಗ ಹಾಗೂ ವೇದಾಂತರಹಸ್ಯವನ್ನು ಉಪದೇಶಿಸಿದ ವಿಷಯಗಳೇ ಈ ಗ್ರಂಥದಲ್ಲಿ ಹೇರಳವಾಗಿರುವುದರಿಂದ ಇದಕ್ಕೆ **ವಾಸಿಷ್ಠರಾಮಾಯಣ** ಎಂಬುದಾಗಿ ಮತ್ತೊಂದು ಹೆಸರಿದೆ. ಅದ್ವೈತ ವೇದಾಂತದ ಗುರುಪರಂಪರೆಯಲ್ಲಿ ಮೊದಲಿಗರಾದ ವಸಿಷ್ಠ ಮಹರ್ಷಿಗಳು ಸೃಷ್ಟಿಯ ಪ್ರಾರಂಭದಲ್ಲಿ ಪ್ರಪಂಚದಲ್ಲಿ ಶಾಂತಿಯು ನೆಲೆಗೊಳ್ಳಲೆಂದು ಭಗವಾನ್ ಚತುರ್ಮುಖನು ತಮಗೆ ಉಪದೇಶ ಮಾಡಿದ ಜ್ಞಾನವಿದ್ಯೆಯನ್ನು ಶ್ರೀರಾಮನ ಚಿತ್ತಶಾಂತಿಗಾಗಿ ಉಪದೇಶಿಸಿದರೆಂದೂ, ಅದನ್ನೇ ವಾಲ್ಮೀಕಿ ಮಹರ್ಷಿಗಳು ಬ್ರಹ್ಮನ ಆಣತಿಯಂತೆ ಈ ಯೋಗವಾಸಿಷ್ಠ ಗ್ರಂಥವಾಗಿ ರಚನೆ ಮಾಡಿದರೆಂದೂ ಇದೇ ಗ್ರಂಥದಲ್ಲಿ ಹೇಳಿದೆ. ವಿದ್ಯಾರಣ್ಯರು, ನಿಶ್ಚಲದಾಸರು ಮೊದಲಾದ ಅದ್ವೈತವೇದಾಂತದ ಅನೇಕ ಆಚಾರ್ಯರು ಈ ಯೋಗವಾಸಿಷ್ಠ ಗ್ರಂಥದ ಅನೇಕ ಅಂಶಗಳನ್ನು ತಮ್ಮ ತಮ್ಮ ಗ್ರಂಥಗಳಲ್ಲಿ ಸಂಗ್ರಹಿಸಿ ಹೇಳಿದ್ದಾರೆ. ಅದ್ವೈತ ವೇದಾಂತ ಸಂಪ್ರದಾಯವನ್ನು ಅನುಸರಿಸುವ ಮುಮುಕ್ಷುಗಳೂ ಹಾಗೂ ಇದನ್ನು ತಿಳಿಯಬೇಕೆನ್ನುವ ಜಿಜ್ಞಾಸುಗಳೂ ಈ ಗ್ರಂಥವನ್ನು ಪರಮಾದರದಿಂದ ಅಧ್ಯಯನ ಮಾಡುತ್ತಾರೆ.

### ಈ ಗ್ರಂಥದ ಉದ್ದೇಶ :

ಯೋಗವಾಸಿಷ್ಠಗ್ರಂಥವು ಉತ್ಕೃಷ್ಟವಾದ ಅಧ್ಯಾತ್ಮಚಿಂತನೆಯನ್ನು ಹೊಂದಿದ ಮೇರುಕೃತಿಯಾಗಿದೆ. ಇದರ ಧ್ಯೇಯವು ಪರಮಾರ್ಥವನ್ನು ಲೌಕಿಕ ಜೀವನದೊಂದಿಗೆ ಸಮೀಕರಿಸುವುದಾಗಿದೆ.

ಮನುಷ್ಯನು ತನ್ನ ಇರುವಿಕೆಯ ಮೂಲವನ್ನೇ ತಿಳಿಯದಿದ್ದರೆ ಆಗ ಕೊನೆಯ ತನಕ ಅಪೂರ್ಣತೆಯ ಕೂಪದಲ್ಲಿ ಹುಡುಕಾಡಬೇಕಾದೀತು. ಉಪನಿಷತ್ತಿನ ಋಷಿವಚನವೂ ಇದೇ ತವಕವನ್ನು ಹೊರ-ಹೊಮ್ಮಿಸಿದೆ. ''**ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ**'' (ಮುಂಡಕ-೧, ಖಂಡ-೧, ಮಂತ್ರ-೩) ಪೂಜ್ಯನೇ! ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿಯಬಹುದಾಗಿದೆ - ಎಂಬುದೇ ಪ್ರಶ್ನೆ. ಕರ್ತವ್ಯವಿಮುಖನಾದ ಶ್ರೀರಾಮನು ವೈರಾಗ್ಯದ ಮಾತುಗಳನ್ನಾಡುತ್ತಾನೆ. ಅಕಾಲಿಕವಾದ ಭಾವಾವೇಶದಲ್ಲಿ ಶ್ರೀರಾಮನಿಗೆ ಜಗತ್ತಿನ ಬಗೆಗೆ ವೈರಾಗ್ಯ ಉಂಟಾಗಿದೆ. ಕರ್ಮಸಂನ್ಯಾಸ ಉತ್ತಮವಲ್ಲ. ಕರ್ತವ್ಯರೂಪವಾದ ತನ್ನ ಕರ್ತವ್ಯವನ್ನೇ ಮಾಡದೆ ಬಿಟ್ಟುಬಿಟ್ಟರೆ ಜೀವನಿಗೆ ಸದ್ಗತಿ ಹೇಗೆ ದೊರಕೀತು? ಮನುಷ್ಯನು ತನ್ನ ನಿಜವಾದ ಕರ್ತವ್ಯವನ್ನು ನಿರುದ್ವಿಗ್ನವಾಗಿ ಮಾಡಬೇಕು. ಆದರೆ ಅವನು ಉದ್ವೇಗವಿಲ್ಲದವನಾಗಿ ಆಗುವುದು ಯಾವಾಗ? ಗಗನದಂತೆ ಪ್ರಶಾಂತ ಧೀರನಾಗುವುದು ಹೇಗೆ? ಮೋಹದ ತಾಕಲಾಟದಿಂದ ಪಾರಾಗಿ



ಕೇವಲ ಕರ್ತವ್ಯಭಾವನೆಯಿಂದ ಮಾತ್ರ ಕರ್ಮಗಳನ್ನು ಮಾಡಲು ಸಾಧ್ಯವೇ? ಇವೇ ಮುಂತಾದ ಸಮಸ್ಯೆಗಳ ಪರಿಹಾರದ ಅನುಸಂಧಾನದಲ್ಲೇ ಯೋಗವಾಸಿಷ್ಠದ ಸತ್ತ್ವವು ಅಡಗಿದೆ.

ವಿಚಾರಪರನಾದ ಜೀವನಿಗೆ ವಿಷಾದಯೋಗದ ಅನುಭವವು ಆಗೇ ಆಗುತ್ತದೆ. ಈ ಭೋಗಜೀವನವು ಅರ್ಥರಹಿತವಾದುದು ಎಂದು ಗೊತ್ತಾದಾಗ ಅವನ ಮನದಲ್ಲಿ ಅಶಾಂತಿಯ ಜ್ವಾಲೆ ಉರಿಯತೊಡಗುತ್ತದೆ. ಶಾಂತಿಯು ದೊರಕದೆ, ವ್ಯಕ್ತಿತ್ವದ ಅಂತರಂಗ ಸಾಮರಸ್ಯವು ಮಾಯವಾಗಿ ಅವನು ತೊಂದರೆಗೆ ಸಿಲುಕುತ್ತಾನೆ. ಶ್ರೀರಾಮನಲ್ಲಿ ಇಂತಹ ವ್ಯಕ್ತಿತ್ವದ ನಾಶವನ್ನು ನೋಡುತ್ತೇವೆ. ಆದರೆ ಶ್ರೀರಾಮನು ಮಾನವಜೀವನದ ಅಪೂರ್ಣತೆಯ ಕೊರಗನ್ನು ದೂರವಾಗಿಸಲು ಆಧ್ಯಾತ್ಮಿಕ ಪರಿಹಾರವನ್ನು ಹುಡುಕುತ್ತಾನೆ. ಚಿತ್ತಚಾಂಚಲ್ಯದಿಂದ ತೊಳಲಾಡುತ್ತಿದ್ದ ಶ್ರೀರಾಮನಿಗೆ ಮನಃಶುದ್ಧಿಯನ್ನು ಮಾಡಿ ಕರ್ಮ-ಜ್ಞಾನಗಳ ನೈಜತೆಯನ್ನು ತಿಳಿಸಿ, ಕರ್ತವ್ಯವಿಮುಖರಾಗದೆ, ಸದಾ ಕರ್ತವ್ಯಪರರಾಗಿ, ಜ್ಞಾನದ ಪರಾಕಾಷ್ಠೆಯನ್ನು ಹೊಂದಿ, ಜಗತ್ತಿನ ಅಂತರಂಗದಲ್ಲಿ ಅಡಗಿರುವ ಅದ್ವಿತೀಯ ಶಕ್ತಿಯಾದ ಪರಬ್ರಹ್ಮನ ಸಾಕ್ಷಾತ್ಕಾರದಿಂದ ಶಾಂತಿ-ಸುಖ-ಸಂತೋಷ-ನೆಮ್ಮದಿ ಎಲ್ಲವನ್ನೂ ಕಾಣಬಹುದು, ಕರ್ತವ್ಯನಿರತರಾಗಿ ತ್ಯಾಗದಿಂದಲೇ ಅಮೃತತ್ವವನ್ನು ಜನರು ಹೊಂದಲು ಸಾಧ್ಯ – ಎಂಬುದನ್ನು ವಸಿಷ್ಠರು ಮನ ಮುಟ್ಟುವಂತೆ ಹೇಳಿ ಅವನನ್ನು ಕರ್ತವ್ಯಪರನಾಗುವಂತೆ ಮಾಡುತ್ತಾರೆ. ಕರ್ಮನಿರತರಾಗಿ, ಜ್ಞಾನವಂತರಾಗಿ, ಕರ್ತವ್ಯಶೀಲರಾಗಿ ಜೀವನದಲ್ಲಿ ಸಾರ್ಥಕತೆಯನ್ನು ಸಂತೃಪ್ತಿಯನ್ನು ಪಡೆಯಿರಿ ಎಂದು ಯೋಗವಾಸಿಷ್ಠವು ಮಾರ್ಮಿಕವಾಗಿ ಬೋಧಿಸುತ್ತದೆ. ಕರ್ಮ-ಜ್ಞಾನ ಸಮನ್ವಯದ ಮೂಲಕ ಕರ್ತವ್ಯ ಮಾಡುವುದರಿಂದ ಎಲ್ಲವೂ ಸಿದ್ಧಿಸುತ್ತದೆ ಎಂದು ತಿಳಿಸುವುದೇ ಈ ಗ್ರಂಥದ ಮುಖ್ಯ ಉದ್ದೇಶ.

### ಕರ್ತೃ-ಕಾಲ ವಿಚಾರ :

ಶ್ರೀಮದ್ರಾಮಾಯಣವನ್ನು ಬರೆದ ಆದಿಕವಿ ವಾಲ್ಮೀಕಿಯೇ ಈ ಯೋಗವಾಸಿಷ್ಠವನ್ನು ಬರೆದರೆನ್ನುವುದು ಬಹು ಜನರ ಅಭಿಮತ. ಈ ಗ್ರಂಥದ ಪ್ರತಿಯೊಂದು ಸರ್ಗದ ಕೊನೆಯಲ್ಲಿ **''ಇತ್ಯಾರ್ಷೇ ಶ್ರೀವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ''** ಎಂದು ಹೇಳುವುದರಿಂದ ಇದನ್ನು ರಚಿಸಿದವರು ವಾಲ್ಮೀಕಿಗಳೇ ಎಂದು ಸಂಪ್ರದಾಯವಾದಿಗಳ ನಂಬಿಕೆ. ರಾಮಾಯಣದಲ್ಲಿ ವಾಲ್ಮೀಕಿಗಳು ಕಥಾಭಾಗವನ್ನು ವಿಶೇಷವಾಗಿ ವಿಶದವಾಗಿ ಹೇಳಿದ್ದರಾದ್ದರಿಂದ ತತ್ತ್ವ ಜ್ಞಾನವಿಚಾರವನ್ನು ವಿವೇಚನೆ ಮಾಡುವುದಕ್ಕಾಗಿ **ಯೋಗವಾಸಿಷ್ಠ**ವನ್ನು ರಚಿಸಿದರೆಂದು ತಿಳಿದುಬರುತ್ತದೆ. ಹಾಗಾಗಿ ಈ ಗ್ರಂಥದ ಕರ್ತೃ ವಾಲ್ಮೀಕಿಗಳೇ ಆಗಿದ್ದಾರೆ. ಆಧುನಿಕ ವಿದ್ವಾಂಸರು ಇದರ ಕರ್ತೃವು ಬೇರೆಯೇ ಇರಬಹುದೆಂದು ಊಹಿಸುತ್ತಾರೆ. ಆದರೆ ಅದು ಈಗ ಇಲ್ಲಿ ಪ್ರಸ್ತುತವಲ್ಲ. ಇದರ ರಚನಾಕಾಲ ೧೨ ಅಥವಾ ೧೩ನೆಯ ಶತಮಾನಗಳ ಕಾಲವೆಂದು ವಿಮರ್ಶಕರು ಹೇಳುತ್ತಾರೆ.

### ಗ್ರಂಥಪ್ರಮಾಣ :

ಯೋಗವಾಸಿಷ್ಠವು ಗಾತ್ರದಲ್ಲಿ ತುಂಬಾ ದೊಡ್ಡದಾಗಿದೆ. ಇದರಲ್ಲಿ ೧) ವೈರಾಗ್ಯಪ್ರಕರಣ, ೨) ಮುಮುಕ್ಷುವ್ಯವಹಾರಪ್ರಕರಣ, ೩) ಉತ್ಪತ್ತಿಪ್ರಕರಣ, ೪) ಸ್ಥಿತಿಪ್ರಕರಣ, ೫) ಉಪಶಮಪ್ರಕರಣ, ೬) ನಿರ್ವಾಣಪ್ರಕರಣ ಎಂದು ಆರು ಪ್ರಕರಣಗಳಿವೆ. ಕೊನೆಯ ನಿರ್ವಾಣಪ್ರಕರಣದಲ್ಲಿ ಪೂರ್ವಾರ್ಧ-ಉತ್ತರಾರ್ಧವೆಂದು ಎರಡು ಭಾಗಗಳಿವೆ. ಪ್ರತಿಯೊಂದು ಪ್ರಕರಣದಲ್ಲೂ ಅನೇಕ ಸರ್ಗಗಳಿವೆ. ಒಂದೊಂದು ಸರ್ಗದಲ್ಲೂ ಭಿನ್ನಭಿನ್ನ ಸಂಖ್ಯೆಯಲ್ಲಿ ಶ್ಲೋಕಗಳಿವೆ. ಒಟ್ಟಾರೆ ಗ್ರಂಥವು ಸಂಸ್ಕೃತಭಾಷೆಯಲ್ಲಿದೆ.

ಮೊದಲ ವೈರಾಗ್ಯಪ್ರಕರಣದಲ್ಲಿ ೩೩ ಸರ್ಗಗಳು ೧೧೪೬ ಶ್ಲೋಕಗಳು, ಎರಡನೆಯ ಮುಮುಕ್ಷು ವ್ಯವಹಾರಪ್ರಕರಣದಲ್ಲಿ ೨೦ ಸರ್ಗಗಳು ೮೦೭ ಶ್ಲೋಕಗಳು, ಮೂರನೆಯ ಉತ್ಪತ್ತಿಪ್ರಕರಣದಲ್ಲಿ ೧೨೨ ಸರ್ಗಗಳು ೫೪೧೧ ಶ್ಲೋಕಗಳು, ನಾಲ್ಕನೆಯ ಸ್ಥಿತಿಪ್ರಕರಣದಲ್ಲಿ ೬೨ ಸರ್ಗಗಳು ೨೪೨೦ ಶ್ಲೋಕಗಳು, ಐದನೆಯ ಉಪಶಮನಪ್ರಕರಣದಲ್ಲಿ ೯೩ ಸರ್ಗಗಳು ೪೨೭೪ ಶ್ಲೋಕಗಳು, ಆರನೆಯ ನಿರ್ವಾಣಪ್ರಕರಣದ ಪೂರ್ವಾರ್ಧದಲ್ಲಿ ೧೨೮ ಸರ್ಗಗಳು ೫೩೩೯ ಶ್ಲೋಕಗಳು, ಉತ್ತರಾರ್ಧದಲ್ಲಿ ೧೭೦ ಅಧ್ಯಾಯಗಳು ೭೦೩೫ ಶ್ಲೋಕಗಳು, ಹೀಗೆ ಒಟ್ಟು ಆರು ಪ್ರಕರಣಗಳಿಂದ ಒಟ್ಟು ೬೨೮ ಸರ್ಗಗಳು ಹಾಗೂ ೨೬,೪೬೩ ಶ್ಲೋಕಗಳಿವೆ. ೬೨೮ ಸರ್ಗಗಳಲ್ಲಿ ಒಂದೊಂದು ಸರ್ಗದಲ್ಲಿ ಬರುವ ಪ್ರಧಾನವಿಷಯವನ್ನು ಅವಲಂಬಿಸಿ ಒಂದೊಂದು ಹೆಸರನ್ನು ಕೊಟ್ಟಿದೆ. (ಉದಾಹರಣೆಗೆ **ಕಾರ್ಶ್ಯನಿವೇದನಸರ್ಗ, ಜೀವಿತಗರ್ಹಣಸರ್ಗ** ಇತ್ಯಾದಿ.)

ಶ್ರೀರಾಮನಿಗೆ ಲೌಕಿಕಜೀವನದ ಮತ್ತು ಪರಮಾರ್ಥತತ್ತ್ವದ ಮಧ್ಯದ ಅಂತರವು ಸಂಪೂರ್ಣವಾಗಿ ಗೊತ್ತಾಗದಿದ್ದಾಗ ಸುಲಭವಾಗಿ ಆತನನ್ನೂ ಅಜ್ಞಾನವು ಆವರಿಸಿತು. ಈ ಅಜ್ಞಾನಕಾರಣದಿಂದ ಒದಗಿಬಂದ ಅಕರ್ಮಣ್ಯತೆಯನ್ನು ಹೋಗಲಾಡಿಸಲು ವಸಿಷ್ಠರು ಶ್ರೀರಾಮನಿಗೆ ಜೀವನದ ಸಮಷ್ಟಿ ಜ್ಞಾನವನ್ನು ಉಪದೇಶ ಮಾಡುವುದು ಅನಿವಾರ್ಯವಾಯಿತು. ಉತ್ಪತ್ತಿಪ್ರಕರಣದಲ್ಲಿ ಬರುವ ಜಗತ್ತಿನ ಉತ್ಪತ್ತಿ ವಿಚಾರಗಳು ಅತ್ಯಂತ ಪ್ರೌಢವಾಗಿದ್ದು ವಸಿಷ್ಠರ ವಿಶಾಲ ಬುದ್ಧಿಶಕ್ತಿಯನ್ನು ನಮಗೆ ದರ್ಶನ ಮಾಡಿಸುತ್ತವೆ. ಇದೊಂದು ಉತ್ಕೃಷ್ಟವಾದ, ಸಮುಚಿತವಾದ ಜ್ಞಾನಭಂಡಾರ. ಕರ್ಮದಲ್ಲಿ ತೊಡಗಿದವನಿಗೆ ತನ್ನ ಬಗ್ಗೆ ಕರ್ಮದ ಬಗ್ಗೆ ನಿಶ್ಚಿತವಾದ ತಿಳಿವಳಿಕೆ ಇದ್ದರೇನೇ ಕರ್ಮದ ವ್ಯಾಮೋಹವು ದೂರವಾಗಿ ಕೇವಲ ತನ್ನ ಕರ್ತವ್ಯದ ಅರ್ಪಣಾಭಾವವು ಸಿದ್ಧಿಸುವುದು.

### ಶ್ರೀರಾಮನ ವೈರಾಗ್ಯಭಾವ

ಗುರುಕುಲದಿಂದ ಹಿಂದಿರುಗಿದ ಶ್ರೀರಾಮನಿಗೆ ತೀರ್ಥಗಳನ್ನೂ, ದೇವಸ್ಥಾನಗಳನ್ನೂ, ವಿಸ್ತಾರವಾದ ಅರಣ್ಯಗಳನ್ನೂ ನೋಡಿ ಬರಬೇಕೆಂದು ಆಸೆಯಾಗುತ್ತದೆ. ತನ್ನ ಆಸೆಯನ್ನು ತಂದೆ

ದಶರಥನಲ್ಲಿ ನಿವೇದಿಸಿಕೊಂಡಾಗ, ಅವನು ವಸಿಷ್ಠರೊಡನೆ ಆಲೋಚಿಸಿ, ಇವುಗಳನ್ನು ನೋಡಿಬರಲು ರಾಮನಿಗೆ ಅನುಮತಿ ನೀಡಿ ಕಳುಹಿಸುತ್ತಾನೆ. ಶ್ರೀರಾಮನು ವಸಿಷ್ಠರು ಕಳುಹಿಸಿಕೊಟ್ಟ ಶಾಸ್ತ್ರವೇತ್ತರಾದ ಬ್ರಾಹ್ಮಣರೊಡನೆಯು, ತನಗೆ ಆಪ್ತರಾದ ಕೆಲವು ಉತ್ತಮ ರಾಜಪುತ್ರರೊಡನೆ ಹೊರಟು, ತೀರ್ಥಕ್ಷೇತ್ರಗಳನ್ನು, ದೇವಸ್ಥಾನಗಳನ್ನು, ಅರಣ್ಯಗಳನ್ನು, ಪುಣ್ಯಾಶ್ರಮಗಳನ್ನು ನೋಡಿ ಹಿಂದಿರುಗಿ ಬರುತ್ತಾನೆ. ಹಿಂದಿರುಗಿ ಬಂದ ಮೇಲೆ ಶ್ರೀರಾಮನು ಯಾವುದರಲ್ಲೂ ಆಸಕ್ತಿ ತೋರದೆ, ಯಾವುದನ್ನೂ ಬಯಸದೆ ಕಳಾಹೀನನಾಗಿರುತ್ತಾನೆ. ಈ ಮಧ್ಯೆ ವಿಶ್ವಾಮಿತ್ರರು ದಶರಥನ ಸಭೆಗೆ ಬಂದು ರಾಕ್ಷಸರ ಉಪಟಳವನ್ನು ದೂರ ಮಾಡಿಕೊಳ್ಳಲು ಶ್ರೀರಾಮನನ್ನು ನನ್ನ ಜೊತೆ ಕಳುಹಿಸು ಎಂದು ಕೇಳುತ್ತಾರೆ. ಆಗ ದಶರಥನು ಶ್ರೀರಾಮನು ಇನ್ನೂ ಚಿಕ್ಕವನು, ಅನನುಭವಿ, ಹಾಗಾಗಿ ನಾನೇ ರಾಕ್ಷಸರ ನಿಗ್ರಹಕ್ಕೆ ಬರುತ್ತೇನೆ ಎಂದಾಗ ವಿಶ್ವಾಮಿತ್ರರು ಒಪ್ಪುವುದಿಲ್ಲ. ಕಡೆಗೆ ವಸಿಷ್ಠರ ಉಪದೇಶದ ಮೇರೆಗೆ ದಶರಥನು ರಾಮನನ್ನು ವಿಶ್ವಾಮಿತ್ರರ ಜೊತೆ ಕಳುಹಿಸಲು ಒಪ್ಪಿ, ಶ್ರೀರಾಮನನ್ನು ಕರೆತರಲು ದೂತನನ್ನು ರಾಮನ ಮನೆಗೆ ಕಳುಹಿಸುತ್ತಾನೆ. ರಾಮನು ತಂದೆಯ ಮಾತಿನಂತೆ ಸಭೆಗೆ ಬರುತ್ತಾನೆ. ಅಲ್ಲಿ ವಸಿಷ್ಠ, ವಿಶ್ವಾಮಿತ್ರ, ವಾಲ್ಮೀಕಿ, ಮೊದಲಾದವರು, ಕೌಸಲ್ಯಾದಿ ರಾಜಮಾತೆಯರು, ಅನೇಕ ನಾಗರಿಕರು ಎಲ್ಲರೂ ಸೇರಿರುತ್ತಾರೆ. ಆಗ ವಿಶ್ವಾಮಿತ್ರರು ಕಳಾಹೀನನಾದ ರಾಮನ ಚಿಂತೆಗೆ ಕಾರಣವನ್ನು ಕೇಳುತ್ತಾರೆ. ರಾಮನು ತನ್ನ ಚಿಂತೆಗೆ, ವೈರಾಗ್ಯಕ್ಕೆ ಕಾರಣಗಳನ್ನು ಹೇಳುತ್ತಾನೆ.

**ಕಿಂ ನಾಮೇದಂ ಬತ ಸುಖಂ ಯೇಯಂ ಸಂಸಾರಸಂತತಿಃ ।**
**ಜಾಯತೇ ಮೃತಯೇ ಲೋಕೋ ಮ್ರಿಯತೇ ಜನನಾಯ ಚ ॥**

**ಅಸ್ಥಿರಾಸ್ಸರ್ವ ಏವೇಮೇ ಸಚರಾಚರಚೇಷ್ಟಿತಾಃ ।**
**ಆಪದಾಂ ಪತಯಃ ಪಾಪಾ ಭಾವಾವಿಭವಭೂಮಯಃ ॥**

*(ಯೋಗವಾಸಿಷ್ಠ, ವೈರಾಗ್ಯಪ್ರಕರಣ, ಸರ್ಗ-೧೨, ಶ್ಲೋಕ-೭, ೮)*

ಈ ಸುಖ ಎನ್ನುವುದು ಏನು? ಸಾಯಲು ಹುಟ್ಟುವುದು, ಹುಟ್ಟಲು ಸಾಯುವುದು ಎಂಬ ಸಂಸಾರದ ಪ್ರವಾಹವು ಯಾವುದು? ಚರಾಚರವಾಗಿರುವ ಈ ಎಲ್ಲವೂ ಅಸ್ಥಿರವು. ಈ ವೈಭವಗಳೆಲ್ಲವೂ ಆಪತ್ತಿಗೆ ಕಾರಣವು, ಪಾಪಸ್ಥಾನವು. ವಂಚಕಗಳಾದ ಈ ಸಂಪತ್ತುಗಳು ಮನಸ್ಸನ್ನು ಮೋಹಗೊಳಿಸುತ್ತವೆ. ಸದ್ಗುಣಗಳನ್ನು ತುಂಡುತುಂಡು ಮಾಡುತ್ತವೆ. ದುಃಖಪರಂಪರೆಯನ್ನು ತಂದು ಒಡ್ಡುತ್ತವೆ. ಹುಟ್ಟು-ಸಾವು-ಮುಪ್ಪು-ಆಸೆ-ಆಕಾಂಕ್ಷೆಗಳು ಎಲ್ಲವೂ ನಮ್ಮನ್ನು ಹಾಳು ಮಾಡುತ್ತವೆ. ಅಧೀರರನ್ನಾಗಿ ಮಾಡುತ್ತವೆ.

**ಯಚ್ಚೇದಂ ದೃಶ್ಯತೇ ಕಿಂಚಿತ್ ಜಗತ್ಸ್ಥಾವರಜಂಗಮಮ್ ।**
**ತತ್ಸರ್ವಮಸ್ಥಿರಂ ಬ್ರಹ್ಮನ್ ಸ್ವಪ್ನಸಂಗಮಸಂನಿಭಮ್ ॥**

*(ಯೋಗವಾಸಿಷ್ಠ, ವೈರಾಗ್ಯಪ್ರಕರಣ, ಸರ್ಗ-೨೮, ಶ್ಲೋಕ-೧)*

ಎಲೈ ಬ್ರಹ್ಮರ್ಷಿಯೇ! ಸ್ಥಾವರಜಂಗಮರೂಪವಾಗಿ ಕಾಣುವ ಈ ಜಗತ್ತೆಲ್ಲವೂ ಅಸ್ಥಿರವಾದುದು. ಕನಸಿನಲ್ಲಿ ಆಗುವ ಅನುಭವದಂತೆ ಕ್ಷಣಿಕವಾದುದು.

**ಪ್ರತ್ಯಹಂ ಕ್ಷಯಮಾಯಾತಿ ಪ್ರತ್ಯಹಂ ಜಾಯತೇ ಪುನಃ ।**
**ಅದ್ಯಾಪಿ ಹತರೂಪಾಯ ನಾಂತೋಽಸ್ಯಾ ದಗ್ಧಸಂಸೃತೇಃ ॥**

*(ಯೋಗವಾಸಿಷ್ಠ, ವೈರಾಗ್ಯಪ್ರಕರಣ, ಸರ್ಗ-೨೮, ಶ್ಲೋಕ-೧೮)*

ಈ ಸುಟ್ಟ ಸಂಸಾರವು ನಿತ್ಯವೂ ಸಾಯುತ್ತದೆ. ನಿತ್ಯವೂ ಹುಟ್ಟುತ್ತದೆ. ಇಷ್ಟು ಕಾಲವಾಗಿದ್ದರೂ ಇನ್ನೂ ಮುಗಿದಿಲ್ಲ. ಈ ರಾಜ್ಯದಿಂದ ನನಗೇನಾಗಬೇಕು ! ಭೋಗಗಳಿಂದ ಏನು ಪ್ರಯೋಜನ, ನಾನು ಮರಣವನ್ನೂ ಮೆಚ್ಚಿಲ್ಲ, ಜೀವಿತವನ್ನೂ ಮೆಚ್ಚಿಲ್ಲ, ಯಾವುದೊಂದು ನೋವೂ ಇಲ್ಲದಿರುವಾಗ ಹೇಗೆ ಇರುವೆನೋ ಹಾಗೆಯೇ ಇರುವೆನು, ಅನಿತ್ಯವಾದ ಈ ಪ್ರಪಂಚ ಹಾಗೂ ಇದರಲ್ಲಿರುವ ಸಕಲ ಜೀವರಾಶಿಗಳೂ ಹೇಗೆ ಹುಟ್ಟುತ್ತವೆ, ಹೇಗೆ ಇರುತ್ತವೆ, ಹೇಗೆ ಸಾಯುತ್ತವೆ, ಇವೆಲ್ಲದಕ್ಕೂ ಮೂಲಕಾರಣವಾವುದು, ಅದರ ಸ್ವರೂಪವೇನು? ಅದನ್ನು ತಿಳಿಯುವುದು ಹೇಗೆ? ಇವೆಲ್ಲವೂ ತಿಳಿಯದೇ ಗೊಂದಲಗೊಂಡಿದ್ದೇನೆ, ಎಂದು ಶ್ರೀರಾಮನು ತನ್ನ ತಳಮಳವನ್ನು ಹೇಳಿಕೊಂಡಾಗ ಎಲ್ಲರೂ ತಳಮಳಗೊಳ್ಳುವರು. ಆಗ ವಿಶ್ವಾಮಿತ್ರರು ಕುಲಗುರುಗಳಾದ ರಾಜಪುರೋಹಿತರಾದ ವಸಿಷ್ಠರೇ ಶ್ರೀರಾಮನಿಗೆ ಎಲ್ಲವನ್ನೂ ಉಪದೇಶ ಮಾಡಲು ಅರ್ಹರು. ಅವರೇ ರಾಮನಿಗೆ ಅಧ್ಯಾತ್ಮ ವಿದ್ಯೆಯನ್ನು ಉಪದೇಶ ಮಾಡಲಿ ಎಂದು ನಿಶ್ಚಯಿಸಿ ವಸಿಷ್ಠರನ್ನು ಕೇಳಿಕೊಳ್ಳುವರು. ಆಗ ವಸಿಷ್ಠರು ಶ್ರೀರಾಮನ ಚಿತ್ತತೋಷಕ್ಕಾಗಿ, ಅವನನ್ನು ಉತ್ಸಾಹಿತನನ್ನಾಗಿ ಮಾಡಿ ಕ್ರಿಯಾಶೀಲನನ್ನಾಗಿ ಮಾಡಲು ಶ್ರೀರಾಮನಿಗೆ ಅಧ್ಯಾತ್ಮವಿದ್ಯೆಯನ್ನು ಉಪದೇಶ ಮಾಡಲು ತೊಡಗುವರು.

## ಅಧ್ಯಾತ್ಮ ವಿದ್ಯೆಯ ಸ್ವರೂಪ

**ಆತ್ಮನಿ ಇತಿ ಅಧ್ಯಾತ್ಮಮ್** ಎಂದು ಅಧ್ಯಾತ್ಮಶಬ್ದದ ವ್ಯುತ್ಪತ್ತಿ. ಆತ್ಮನ ವಿಷಯದಲ್ಲಿ ಎಂದು ಅರ್ಥ. ಆಧ್ಯಾತ್ಮಿಕಚಿಂತನೆ ಎಂದರೆ ಆತ್ಮನ ಬಗ್ಗೆ ಹೇಳಲಾಗಿರುವ ಎಲ್ಲ ವಿಷಯಗಳ ಚಿಂತನೆ ಎಂದು ಅಭಿಮತ. ಈ ಪ್ರಪಂಚ ಹಾಗೂ ಇದರಲ್ಲಿ ಅಡಗಿರುವ ಸಕಲ ಜೀವಿರಾಶಿಗಳೂ ಎಲ್ಲವೂ ಅನಿರ್ವಚನೀಯವಾದ ಒಂದು ಅದ್ವಿತೀಯ ಶಕ್ತಿಯಿಂದ ಮೂಡಿಬಂದಿವೆ. ಆ ಶಕ್ತಿಯು ಎಲ್ಲವನ್ನೂ ಮೀರಿಸಿ, ಎಲ್ಲವನ್ನೂ ಮೆಟ್ಟಿ ನಿಂತು, ಎಲ್ಲವನ್ನೂ ನಿಯಂತ್ರಿಸಿ, ಎಲ್ಲವನ್ನೂ ಅವರವರ ಕಾರ್ಯಗಳಲ್ಲಿ ತೊಡಗುವಂತೆ ಮಾಡುತ್ತಿದೆ. ಅದು ಎಲ್ಲದಕ್ಕಿಂತ ದೊಡ್ಡದಾಗಿರುವುದರಿಂದ ಬೃಹತ್ತಾದ್ದರಿಂದ ಬಲ್ಲವರು ಅದನ್ನು **ಬ್ರಹ್ಮ** ಎಂದು ಕರೆದಿದ್ದಾರೆ. ಈ ಬ್ರಹ್ಮವೇ ಎಲ್ಲದರ ಒಳಗಿದ್ದು ಎಲ್ಲವನ್ನೂ ನಿಯಂತ್ರಿಸುತ್ತಿರುವುದರಿಂದ ಅದನ್ನು **ಆತ್ಮಾ** ಎಂದು ಕರೆದಿದ್ದಾರೆ. ಇದು ಎಲ್ಲದರಲ್ಲೂ ಅಡಗಿದ್ದರೂ ಎಲ್ಲವೂ ಅದೇ ಆಗಿದ್ದರೂ ಅದು ಯಾರಿಗೂ ಕಾಣುವುದಿಲ್ಲ. ಯಾರೂ ಅದನ್ನು ನೋಡಲಾರರು. ಅದು ಒಂದೇ ಆದರೂ ಅನೇಕವಾಗಿದೆ.




**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ**
**ಯಮಂ ಮಾತರಿಶ್ವಾನಮಾಹುಃ।**

*(ಋಗ್ವೇದಸಂಹಿತಾ, ೧-೧೬೪-೪೬)*

ಇರುವುದೊಂದೇ, ಬಲ್ಲವರು ಅದನ್ನು ಅಗ್ನಿ, ಯಮ, ವಾಯು, ವರುಣ ಮುಂತಾಗಿ ಬೇರೆ ಬೇರೆ ರೂಪದಲ್ಲಿಯೂ ಇದೆ ಎಂದು ಹೇಳುತ್ತಾರೆ ಎಂದು ಋಗ್ವೇದವೇ ಮೊದಲು ಹೇಳಿ, ಎಲ್ಲವೂ ಬ್ರಹ್ಮವೇ ಆಗಿದೆ ಎಂದು ತಿಳಿಸುತ್ತದೆ. ಅಂತಹ ಪರ ತತ್ತ್ವದ ಚಿಂತನೆಯನ್ನು ವಸಿಷ್ಠರು ಶ್ರೀರಾಮನಿಗೆ ಯೋಗವಾಸಿಷ್ಠ ದಲ್ಲಿ ಮಾಡಿಸಿದ್ದಾರೆ.

## ಯೋಗವಾಸಿಷ್ಠದಲ್ಲಿ ಮಾಡಲಾಗಿರುವ ಆತ್ಮಚಿಂತನೆ

ಎಲೈ ಶ್ರೀರಾಮನೇ ! ನಿನಗೆ ಆತ್ಮದರ್ಶನವನ್ನು ಮಾಡಿಸ ಬೇಕಾಗಿದೆ. ಅದನ್ನು ಮನವಿಟ್ಟು ಕೇಳು ಎಂದು ವಸಿಷ್ಠರು ಆಧ್ಯಾತ್ಮಿಕ ಚಿಂತನೆಯ ಬೆಳಕನ್ನು ರಾಮನ ಮೇಲೆ ಹರಿಸುವರು. ಮಹಾಮುನಿಗಳೂ, ಮಹರ್ಷಿಗಳೂ, ವಿಪ್ರರೂ, ರಾಜರೂ ಜ್ಞಾನವೆಂಬ ಕವಚವನ್ನು ಧರಿಸಿರುವರು. ಅವರು ದುಃಖವನ್ನು ಅನುಭವಿಸಬೇಕಾಗಿಲ್ಲವಾದರೂ ದುಃಖವನ್ನುಂಟುಮಾಡುವ ಈ ಸಂಸಾರದ ಕಷ್ಟಗಳನ್ನು ಅನುಭವಿಸುತ್ತಿರುವರಲ್ಲಾ ಅಂದರೆ, ಅವರು ಯಾವಾಗಲೂ ಸಂತೋಷದಿಂದಲೇ ಇರುವರು ಎಂಬುದನ್ನೂ ರಾಮ ಯೋಚಿಸು.

**ವಿಕೌತುಕಾ ವಿಗತವಿಕಲ್ಪವಿಪ್ಲವಾ**
**ಯಥಾ ಸ್ಥಿತಾ ಹರಿಹರಪದ್ಮಜಾದಯಃ।**
**ನರೋತ್ತಮಾಸ್ಸಮಧಿಗತಾತ್ಮದೀಪಕಾ-**
**ಸ್ತಥಾ ಸ್ಥಿತಾ ಜಗತಿ ವಿಶುದ್ಧಬುದ್ಧಯಃ ॥** *(ಯೋಗವಾಸಿಷ್ಠ, ಮುಮುಕ್ಷುವ್ಯವಹಾರಪ್ರಕರಣ, ಸರ್ಗ-೧೨, ಶ್ಲೋಕ-೧೯)*

ಆತ್ಮನೆಂಬ ದೀಪವನ್ನು ಪಡೆದಿರುವ ನರೋತ್ತಮರೂ ಹರಿ ಹರಬ್ರಹ್ಮಾದಿಗಳಂತೆಯೇ ಜಗದ್ವ್ಯಾಪಾರದಲ್ಲಿ ಯಾವ ಆಸಕ್ತಿ ಯನ್ನೂ ವಹಿಸದೆ ಯಾವ ತೆರದ ಸಂಕಲ್ಪಗಳಿಗೂ ಎಡೆಗೊಡದೆ ಶುದ್ಧಬುದ್ಧಿಗಳಾಗಿರುವರು. ಮೋಹವೆಂಬ ಕತ್ತಲು ಕಳೆದು, ಜ್ಞಾನ ವೆಂಬ ಮೋಡವು ಚೆನ್ನಾಗಿ ಮಳೆಗರೆಯುತ್ತಿರಲು, ತತ್ತ್ವಜ್ಞಾನವು ದೊರೆತು, ಆತ್ಮಲಾಭವಾಗಿರಲು, ಆರ್ಯರೊಡನೆ ಶಾಸ್ತ್ರವಿಚಾರ ನಡೆಸುತ್ತಾ ದೇಹವೇ ತಾನೆಂಬ ಬುದ್ಧಿಯು ಹೋಗಿರಲು, ತತ್ತ್ವ ದರ್ಶನವಾದವರಿಗೆ ಜಗತ್ತಿನ ಸಂಸಾರವು ರಮಣೀಯವೇ ಆಗಿ ರುವುದು. ಮನುಷ್ಯನಿಗೆ ಆತ್ಮದರ್ಶನದಿಂದ ಮಾತ್ರ ಎಲ್ಲವೂ ದೊರೆಯುವುವು. ಹಾಗಾಗಿ ಅವನು ಜೀವನಪರ್ಯಂತ ವಿಚಾರ ಮಾಡಿ ಆತ್ಮನನ್ನು ಹುಡುಕಬೇಕು. ಉಪಾಸನೆ ಮಾಡಬೇಕು, ತಿಳಿಯಬೇಕು. ಅವನನ್ನು ಬಿಟ್ಟು ಬೇರೇನನ್ನೂ ಹಿಡಿಯಬಾರದು.

**ಸ್ವಾನುಭೂತೇಶ್ಚ ಶಾಸ್ತ್ರಸ್ಯ ಗುರೋಶ್ಚೈವೈಕವಾಕ್ಯತಾ।**
**ಯಸ್ಯಾಭ್ಯಾಸೇನ ತೇನಾತ್ಮಾ ಸಂತತೇನಾವಲೋಕ್ಯತೇ ॥** *(ಯೋಗವಾಸಿಷ್ಠ, ಮುಮುಕ್ಷುವ್ಯವಹಾರಪ್ರಕರಣ, ಸರ್ಗ-೧೩, ಶ್ಲೋಕ-೧೧)*

ಯಾವ ಮಹಾನುಭಾವನಿಗೆ ತನ್ನ ಅನುಭವ, ಶಾಸ್ತ್ರಸಿದ್ಧಾಂತ, ಗುರುವಾಕ್ಯಗಳಲ್ಲಿ ಏಕವಾಕ್ಯತೆಯುಂಟೋ ಅವನಿಗೆ ಆತ್ಮ ದರ್ಶನವು ಸದಾ ಇರುವುದು. ಇಹದಲ್ಲಿ ದುಃಖಗಳು ಬೇಕಾದಷ್ಟು, ಸುಖವು ತೃಣದಷ್ಟು, ಅದರಿಂದ ಮತ್ತೆ ದುಃಖವನ್ನೇ ತರುವ ಸುಖಗಳಲ್ಲಿ ಮನವಿಡಬಾರದು.

## ವಿವೇಕಿಯಾದವನ ನಿಜವಾದ ಕರ್ತವ್ಯವೇನು?

ವಸಿಷ್ಠರು ರಾಮನಿಗೆ ಹೇಳುತ್ತಾರೆ - ವೈರಾಗ್ಯದಿಂದಲೂ, ಅಭ್ಯಾಸಬಲದಿಂದಲೂ ಶ್ರೇಷ್ಠವಾದ ವಿವೇಕವನ್ನಾಶ್ರಯಿಸಿ ಘೋರವಾದ ಈ ಸಂಸಾರನದಿಯೆಂಬ ಆಪತ್ತನ್ನು ದಾಟಬೇಕು. ವಿಷದಂತೆ ಮೂರ್ಛೆಯನ್ನೂ, ಸಮ್ಮೋಹವನ್ನೂ ಉಂಟುಮಾಡುವ ಸಂಸಾರಮಾಯೆಗಳಲ್ಲಿ ಬುದ್ಧಿಶಾಲಿಯಾದ ಯಾವನೂ ಮೈಮರೆ ಯಬಾರದು. ಈ ಸಂಸಾರದಲ್ಲಿ ಸಿಕ್ಕಿಕೊಂಡು ಯಾವನು ಉಪೇಕ್ಷೆ ಯಿಂದಿರುವನೋ ಅವನು ಧಗಧಗನೆ ಉರಿಯುತ್ತಿರುವ ಹುಲ್ಲು ಮನೆಯಲ್ಲಿ ಹಾಸಿಗೆಯಲ್ಲಿ ಮಲಗಿರುವವನಂತೆ ಆಗುವನು.

**ಯತ್ಪ್ರಾಪ್ಯ ನ ನಿವರ್ತಂತೇ ಯದಾಸಾದ್ಯ ನ ಶೋಚತೇ।**
**ತತ್ಪದಂ ಶೇಮುಷೀಲಭ್ಯಮಸ್ತ್ಯೇವಾತ್ರ ನ ಸಂಶಯಃ ॥**
*(ಯೋಗವಾಸಿಷ್ಠ, ಮುಮುಕ್ಷುವ್ಯವಹಾರಪ್ರಕರಣ, ಸರ್ಗ-೧೩, ಶ್ಲೋಕ-೩೪)*




ಯಾವ ಪದವನ್ನು ಸೇರಿದವನು ಮತ್ತೆ ಹಿಂದಿರುಗುವುದಿಲ್ಲವೋ, ಯಾವ ಪದವನ್ನು ಹೊಂದಿದವನು ಶೋಕಿಸುವುದಿಲ್ಲವೋ, ಅಂತಹದೊಂದು ಪರಮಪದ ಉಂಟೇ ಉಂಟು. ಅದರಲ್ಲಿ ಸಂಶಯವಿಲ್ಲ. ಅದು ಜ್ಞಾನೈಕಲಭ್ಯವಾದುದು.

ಶಮ (ಶಾಂತಿ), ವಿವೇಕಬುದ್ಧಿ, ದಮ (ಇಂದ್ರಿಯನಿಗ್ರಹ), ಸಂತೋಷ, ಸಜ್ಜನರ ಸಂಗ, ಶಾಸ್ತ್ರಾಧ್ಯಯನ, ಬಲ್ಲವರ ಉಪದೇಶದ ಮಾತುಗಳು, ಸಹನೆ, ಉತ್ಸಾಹ, ಕರುಣೆ, ನಿರಹಂಕಾರ, ಐಹಿಕ-ಆಮುಷ್ಮಿಕ ಫಲಗಳನ್ನು ಬಯಸದೆ ಕೇವಲ ಕರ್ತವ್ಯ ಬುದ್ಧಿಯಿಂದ ಕೆಲಸ ಮಾಡುವುದು, ಇವೆಲ್ಲದರಿಂದ ಆ ಆತ್ಮನನ್ನು ನಾವು ಹೊಂದಬಹುದು. ಅನನ್ಯವಾದ ಪರಮಪದವನ್ನು ಹೊಂದಲೇಬೇಕೆಂದು ಅಪೇಕ್ಷಿಸುವ ಮನುಷ್ಯನು ಪ್ರಜ್ಞೆಯನ್ನು ಮೊದಲು ಆದರಿಸಬೇಕು.

### ಆತ್ಮನ ಸ್ವರೂಪ

ಎಲ್ಲದರಲ್ಲೂ ಇರುವ, ಎಲ್ಲವೂ ಆಗಿರುವ, ಎರಡಿಲ್ಲದೆ ಒಂದೇ ಆಗಿರುವ ನಿತ್ಯನಾದ ಆತ್ಮನನ್ನೇ ಶೂನ್ಯವೆಂದೂ, ಪ್ರಕೃತಿಯೆಂದೂ, ಬ್ರಹ್ಮವೆಂದೂ, ವಿಜ್ಞಾನವೆಂದೂ, ಶಿವನೆಂದೂ, ಈಶಾನನೆಂದೂ ಕರೆಯುವರು. ಯಾವಾಗ ಯಾವುದನ್ನು ಕಂಡರೂ ಅದೆಲ್ಲವೂ ಬ್ರಹ್ಮವೇ ! ಇದರಲ್ಲಿ ಸಜಾತೀಯ-ವಿಜಾತೀಯ ಸ್ವಪರಭೇದಗಳೆಂಬ ದ್ವಿತ್ವ, ಬೇರೆ ಬೇರೆಯವು ಎಂಬ ಅನ್ಯತೆ ಎಳ್ಳಷ್ಟೂ ಇಲ್ಲ. ಜಗತ್ತು ಎಂಬುದು ಯಾವುದುಂಟೋ ಅದನ್ನೆಲ್ಲ ವಿದ್ಯೆಯೇ (ಸರ್ವಂ ಖಲ್ವಿದಂ ಬ್ರಹ್ಮ ಎಂಬ ದೃಷ್ಟಿ) ಆವರಿಸಿರುವುದು. ಇದರಲ್ಲಿ ಬೇರೆ ದೃಷ್ಟಿಯೇ ಇಲ್ಲ.

**ಆಪಾತಾಲಮನಂತಾತ್ಮಾ ಪೂರಿತೋಽಂಭೋಧಿರಂಬುಭಿಃ ।**
**ಆಬ್ರಹ್ಮಸ್ತಂಬಪರ್ಯಂತಂ ಜಗದಾಪೂರ್ಣಮಾತ್ಮನಾ ॥**

*(ಯೋಗವಾಸಿಷ್ಠ, ಉಪಶಮಪ್ರಕರಣ, ಸರ್ಗ-೧೭, ಶ್ಲೋಕ-೨೪)*

ಜಲಪೂರ್ಣವಾಗಿರುವ ಸಮುದ್ರದಲ್ಲಿ ಮೇಲಿನಿಂದ ತಳದವರೆಗೂ ನೀರೇ ನೀರಾಗಿರುವಂತೆ, ಚತುರ್ಮುಖಬ್ರಹ್ಮನಿಂದ ಹಿಡಿದು ಸ್ತಂಬವೆಂಬ ಸಣ್ಣ ಕ್ರಿಮಿಯವರೆಗೂ ಎಲ್ಲವೂ ಆತ್ಮವೇ ಆತ್ಮವಾಗಿರುವುದು.

### ಇರುವುದೆಲ್ಲ ಒಂದೇ

ಅದ್ವೈತವಾಗಿ, ತಾನೇ ತಾನಾಗಿರುವ ಪರಮಾತ್ಮಶಕ್ತಿಯೇ ಜಗತ್ತನ್ನೂ ನಿರ್ಮಾಣ ಮಾಡಬೇಕೆಂಬ ಲೀಲೆಯನ್ನು ವಹಿಸಿದಾಗ ದ್ವೈತ-ಅದ್ವೈತಭೇದಗಳನ್ನು ತಾಳಿ ಕಂಗೊಳಿಸುವುದು. ಆದ್ದರಿಂದ ರಾಮ! ಯಾವ ಕಾರ್ಯವೇ ಆಗಲಿ, ತನ್ನದೇ ಆಗಿರಲಿ, ಬೇರೆಯವರದೇ ಆಗಿರಲಿ, ಯಾವುದರಲ್ಲೇ ಆಗಲಿ, ಯಾವಾಗಲೇ ಆಗಲಿ, ನಷ್ಟವಾಗಲಿ, ಲಾಭವಾಗಲಿ, ಸುಖದುಃಖಗಳಿಗೆ ವಶನಾಗಬೇಡ ಎಂದು ವಸಿಷ್ಠರು ಹೇಳುತ್ತಾ ಮುಂದೆ ಹೇಳುವರು. ರಾಮ ನೀನು ಭಾವಾದ್ವೈತವನ್ನು ಆಶ್ರಯಿಸು, ಸತ್ತಾದ್ವೈತ ತಾನೇ ತಾನಾಗಿರಲಿ, ಕರ್ಮಾದ್ವೈತವನ್ನು ನಿರಾಕರಿಸು. ಹೀಗೆ ನೀನೂ ದ್ವೈತಾದ್ವೈತಮಯನಾಗಿರು, ಅಂದರೆ ''**ಅಹಂ ಬ್ರಹ್ಮಾಸ್ಮಿ - ನಾನು ಬ್ರಾಹ್ಮಣನಾಗಿದ್ದೇನೆ**'' ಎಂಬ ಭಾವನೆಯು ತಾನೇ ತಾನಾಗಿರುವುದು ಭಾವಾದ್ವೈತವು. ಭಿನ್ನಭಿನ್ನವಾಗಿ ನಾನಾ ರೀತಿಯಲ್ಲಿ ಕಾಣುತ್ತಿರುವ ಈ ಎಲ್ಲವೂ ಒಂದನ್ನೇ ಆಶ್ರಯಿಸಿವೆ, ಎಲ್ಲವನ್ನೂ ಒಂದೇ ಆಶ್ರಯ ಕೊಟ್ಟು ಹಿಡಿದಿದೆ ಎಂದು ತಿಳಿದು ಕೊಂಡಿರುವ ''**ಸರ್ವಂ ಖಲ್ವಿದಂ ಬ್ರಹ್ಮ - ಈ ಎಲ್ಲವೂ ಬ್ರಹ್ಮ**'' ಎಂಬುದು ಸತ್ತಾದ್ವೈತವು. ಕರ್ಮ ಮಾಡಿದರೂ ಒಂದೇ ಬಿಟ್ಟರೂ ಒಂದೇ ಎನ್ನುವುದು ಕರ್ಮಾದ್ವೈತವು. ಈ ಸಂಸಾರಭೂಮಿಯು ಸದಾ ಭೀಕರವಾಗಿದೆ. ಇಲ್ಲಿ ಭೇದಭಾವಗಳೆಂಬ ಬಿರುಗಾಳಿಯು ಬೀಸುತ್ತಲೇ ಇರುವುದು. ಅವಕ್ಕೆ ನೀನು ಸಿಕ್ಕಿದರೆ, ಆನೆಯು ಹೋಗಿ ಕಂದರದಲ್ಲಿ ಬೀಳುವಂತೆ ನೀನೂ ಬಿದ್ದು ಹೋಗುವೆ. ರಾಮ, ಹಾಗಾಗದಂತೆ ನೋಡಿಕೋ.

ದ್ವೈತವೆಂಬುದು (ಭೇದಬುದ್ಧಿಯು) ಕೇವಲ ಚಿತ್ತದಿಂದ ಆದುದು. ಆದ್ದರಿಂದ ಅದು ಎಂದಿಗೂ ಸಂಭವಿಸುವುದೇ ಇಲ್ಲ. ಹಾಗಾದರೆ ಎರಡಿದ್ದು ಒಂದಾಯಿತು ಎನ್ನೋಣವೇ ಎಂದರೆ ಇಲ್ಲ , ಆತ್ಮನನ್ನು ಬಿಟ್ಟು ಇನ್ನು ಎರಡನೆಯದು ಯಾವುದೂ ಇರಲೇ ಇರಲಿಲ್ಲವಾಗಿ ಎಲೈ ಆತ್ಮಜ್ಞ ರಾಮನೇ ! ಐಕ್ಯವೆಂಬುದೂ ಸಲ್ಲುವುದಿಲ್ಲ. ಇರುವುದೆಲ್ಲ ಒಂದೇ ಆದ್ದರಿಂದ ಅದು ಐಕ್ಯರಹಿತವಾದ (ಎರಡು ಸೇರಿ ಒಂದಾದುದಲ್ಲವಾದ) ಅದ್ವೈತವೇ, ಎಲ್ಲವೂ ಒಂದೇ ಬ್ರಹ್ಮವೇ ಎಂದು ಬಲ್ಲವರು ಹೇಳುವರು.

ನಾನು ಎಂಬುದು ಪ್ರತ್ಯೇಕವಾಗಿ ಇಲ್ಲ. ಜಗತ್ತುಗಳೂ ಎಂಬುದೂ ಇಲ್ಲ. ಇರುವುದೆಲ್ಲ ನಿರ್ವಿಕಾರವಾದ ಬ್ರಹ್ಮವೊಂದೇ. ಅದು ಕೇವಲ ವಿಜ್ಞಾನ ಮಾತ್ರ (ಅನುಭವಸ್ವರೂಪವು). ಅದು ಶಾಂತವಾಗಿ ಬೆಳಗುತ್ತಿರುವುದು. ಅದರಿಂದ ಈ ಜಗತ್ತೆಂಬುದು ಸತ್ ಅಲ್ಲ. ಅಸತ್ ಅಲ್ಲ. ಸತ್ತಾ ಸಾಮಾನ್ಯ ರೂಪವಾದ ಬ್ರಹ್ಮವೇ ಆಗಿದೆ.

**ಪರಮಮೃತಮನಾದ್ಯಂ ಭಾಸನಂ ಸರ್ವಭಾಸಾ-**
**ಮಜರಮಜಮಚಿಂತ್ಯಂ ನಿಷ್ಕಲಂ ನಿರ್ವಿಕಾರಮ್ ।**
**ವಿಗತಕರಣಜಾಲಂ ಜೀವನಂ ಜೀವಶಕ್ತೇಃ**
**ಸಕಲಕಲನಹೀನಂ ಕಾರಣಂ ಕಾರಣಾನಾಮ್ ॥**

*(ಯೋಗವಾಸಿಷ್ಠ, ಉಪಶಮಪ್ರಕರಣ, ಸರ್ಗ-೧೭, ಶ್ಲೋಕ-೩೩)*

ಇದು ಆ ಪರಬ್ರಹ್ಮನ, ಪರಮಾತ್ಮನ ಸ್ವರೂಪ. ಆ ಪರಬ್ರಹ್ಮವು ಅಮೃತ, ಅನಾದಿ, ಎಲ್ಲ ತೇಜಸ್ಸುಗಳಿಗೂ ಪ್ರಕಾಶವಾದುದು. ಅದು ಅಜರ, ಅಚಿಂತ್ಯ, ನಿಷ್ಕಲ, ನಿರ್ವಿಕಾರ, ಇಂದ್ರಿಯಗಳಿಗೆ ಗೋಚರವಾಗದು, ಪ್ರಾಣಕ್ಕೂ ಪ್ರಾಣವು, ಯಾವುದೊಂದು ಭಾವನೆಗೂ ಎಟುಕದು. ಸರ್ವ ಕಾರಣಗಳಿಗೂ ಕಾರಣವಾದುದು.

ಅದು ಯಾವಾಗಲೂ ಅಸ್ತವಾಗದೆ ಉದಿತವಾಗಿಯೇ ಇರುವುದು. ಎಲ್ಲಕ್ಕೂ ಒಡೆಯನಾಗಿರುವುದು. ಎಲ್ಲೆಲ್ಲಿಯೂ ಇರುವ ಚಿತ್ರಕಾಶದಲ್ಲಿ ಇರುವುದು, ಎಲ್ಲ ಅನುಭವಗಳಿಗೂ ತಾನೇ ಕಾರಣವಾಗಿರುವುದು. ಸ್ವಲಕ್ಷಣಮಾತ್ರದಿಂದ ಉಪದೇಶ್ಯವಾಗಿರುವುದು. ತನ್ನೊಳಗೆ ತಾನೇ ಆನಂದಪಡುವ ಸ್ವಾತ್ಮಾರಾಮವು. ನೀನು, ನಾನು, ಜಗತ್ತು ಎಂಬ ಜ್ಞಾನವೆಲ್ಲವೂ ಯಾವಾಗಲೂ ಇಂತಹ ಬ್ರಹ್ಮವೇ ಎಂಬುದು ಎಲ್ಲರ ಹೃದಯದಲ್ಲಿ ಸರ್ವದಾ ಇರಬೇಕು. ದಶಮನ್ಯಾಯದಿಂದ ಅಂತರಾರ್ಥವನ್ನು ಅರಿಯಬೇಕು. ಹತ್ತುಜನ ಒಟ್ಟಾಗಿ ಹೋಗುತ್ತಿರಲು, ಅವರಲ್ಲಿ ಒಬ್ಬನು ಎಲ್ಲರನ್ನೂ ಎಣಿಸುವುದಕ್ಕೆ ಹೋಗಿ ತನ್ನನ್ನು ಬಿಟ್ಟುಬಿಟ್ಟು ಉಳಿದ ಒಂಭತ್ತು ಮಂದಿಯನ್ನೇ ಲೆಕ್ಕ ಮಾಡಿಕೊಂಡು ಒಂಭತ್ತು ಜನರೇ ಇರುವರಲ್ಲ ! ನಾವು ಹೊರಟಾಗ ಹತ್ತು ಮಂದಿ ಇದ್ದೆವಲ್ಲ ! ಇನ್ನೊಬ್ಬನು ಏನಾದನು? ಎಂದು ಕಳವಳಪಡುತ್ತಿರಲು, ಆಗ ಅದೇ ದಾರಿಯಲ್ಲಿ ಹೋಗುತ್ತಿರುವ ಮತ್ತೊಬ್ಬನು ಬಂದು ನೀನೇ ಹತ್ತನೆಯವನು ಎಂದು ಹೇಳಿದರೆ ಅವನು ತಾನು ಹತ್ತನೆಯವನೆಂದು ತಿಳಿದುಕೊಂಡು ಸಂತೋಷಪಡುವನಲ್ಲವೆ! ಈ ಸಂದರ್ಭದಲ್ಲಿ ಅವನು ಸಂಕಟಪಡುವುದಕ್ಕೆ ಕಾರಣವಾವುದು? ಅದು ಅವನ ಅಜ್ಞಾನವೇ. ಅವನು ನಾನೇ ಹತ್ತನೆಯವನು ಎಂದು ತಿಳಿದುಕೊಂಡು ತನ್ನನ್ನು ಸೇರಿಸಿಕೊಂಡು ಲೆಕ್ಕ ಮಾಡಿದರೆ ಹಾಗೆಂದಿಗೂ ವ್ಯಸನಪಡುವುದಿಲ್ಲ, ಮತ್ತೊಬ್ಬನು ಬಂದು ಹೇಳಿದ ಮೇಲೆ ಅವನಿಗೆ ಜ್ಞಾನವುಂಟಾಗುವುದು. ಇದರಂತೆಯೇ ಆತ್ಮನು ತಾನು ಸಚ್ಚಿದಾನಂದ ಸ್ವರೂಪನೆಂಬುದನ್ನು ಮರೆತು ತಾನು ದುಃಖಿಯೆಂದು ತಿಳಿದುಕೊಂಡಿರುವನು. ಶ್ರವಣಾದಿಗಳಿಂದ ಅವನ ಅಜ್ಞಾನವು ತೊಲಗುವುದು. ಇದಕ್ಕಾಗಿ ಜ್ಞಾನಿಗಳ ಉಪದೇಶವಾಕ್ಯವು ಆವಶ್ಯಕ. ಜೀವನ್ಮುಕ್ತರಾದವರು ಉಪದೇಶ ಮಾಡಲು ಅರ್ಹರು.

## ಜೀವನ್ಮುಕ್ತರ ಸ್ವರೂಪ

ಪರಬ್ರಹ್ಮನಲ್ಲಿ ನೆಲಸಿದ ಮನಸ್ಸುಳ್ಳವರೇ ಜೀವನ್ಮುಕ್ತರು. ಅವರು ಈ ಸಂಸಾರದಲ್ಲಿ ವಿಹರಿಸುವರಾದರೂ, ಆದಿ-ಮಧ್ಯ-ಅಂತಗಳಲ್ಲಿ ದುಃಖದಿಂದ ವಿರಸವೇ ಆಗಿರುವ ಈ ಜಗತ್ತಿನ ವ್ಯಾಪಾರಗಳನ್ನು ಕೇವಲ ತುಚ್ಛವಾಗಿ ಕಂಡು ನಗುವರು. ಮಾಡಬೇಕಾದ ಎಲ್ಲ ಕೆಲಸಗಳನ್ನು ಮಾಡುವರು. ಎಲ್ಲರಲ್ಲೂ ಒಂದೇ ಸಮನಾಗಿ ಇರುವರು.

**ಸರ್ವತ್ರ ವಿಗತೋದ್ವೇಗಃ ಸರ್ವಾರ್ಥಪರಿಪೋಷಕಃ ।**
**ವಿವೇಕೋದ್ಯೋತದೃಷ್ಟಾತ್ಮಾ ಪ್ರಬೋಧೋಪವನಸ್ಥಿತಿಃ ॥**
*(ಯೋಗವಾಸಿಷ್ಠ, ಉಪಶಮಪ್ರಕರಣ, ಸರ್ಗ-೧೮, ಶ್ಲೋಕ-೪)*

ಯಾವುದರಲ್ಲಿಯೂ ಯಾವ ರೀತಿಯಲ್ಲಿಯೂ ಉದ್ವೇಗವನ್ನು ವಹಿಸದೆ, ಸರ್ವರಿಗೂ ಅವರವರಿಗೆ ಬೇಕು ಬೇಕಾದವುಗಳನ್ನು ಕೊಡುವವನಾಗಿ, ವಿವೇಕವನ್ನು ಆಶ್ರಯಿಸಿ ಬ್ರಹ್ಮದರ್ಶನ ಪಡೆದವನಾಗಿ ಬ್ರಹ್ಮಜ್ಞಾನವೆಂಬ ಉಪವನದಲ್ಲಿ ಇರುವನು. ಶತ್ರುಮಿತ್ರರಲ್ಲಿ ಸಮನಾಗಿ ದಯಾದಾಕ್ಷಿಣ್ಯ ಸಂಪನ್ನನಾಗಿ, ಗುರುಹಿರಿಯರಲ್ಲಿ ಯಥಾವತ್ತಾಗಿ ನಡೆದುಕೊಳ್ಳುತ್ತಾ, ಸಂಸಾರದಲ್ಲಿದ್ದರೂ ದುಃಖಕ್ಕೆ ಸಿಲುಕದೆ ಇರುವನು. ಅವನು ಯಾರನ್ನೂ ಪ್ರೀತಿಸುವುದಿಲ್ಲ. ಯಾರನ್ನೂ ದ್ವೇಷಿಸುವುದಿಲ್ಲ. ದುಃಖವು ಬಂದಿತೆಂದು ಅಳುವುದಿಲ್ಲ. ಸುಖವು ಬರಲೆಂದು ಆಶಿಸುವುದಿಲ್ಲ. ಮೌನವಾಗಿ ಹೆಚ್ಚು ಮಾತನಾಡದೆ ಇರುತ್ತ ಅಪ್ರಕೃತವಾದುದನ್ನು ಯಾವುದನ್ನೂ ಮಾಡದೆ ಸಂಸಾರದಲ್ಲಿದ್ದರೂ ದುಃಖಕ್ಕೆ ಸಿಲುಕದೆ ಇರುತ್ತಾನೆ, ಇವನೇ ಜೀವನ್ಮುಕ್ತನು. ಇವನೇ ಉಪದೇಶ ಮಾಡಲು ಅರ್ಹನು. ಇಂತಹವನಿಂದ ನಾವು ಆತ್ಮನ ಜ್ಞಾನವನ್ನು ತಿಳಿಯಬೇಕು.

## ನಿಷ್ಕಾಮಸ್ಥಿತಿಯಿಂದ ಎಲ್ಲವೂ ತುಚ್ಛ

ನಾವು ಆಪತ್ತುಗಳೆಂಬ ಮುಳ್ಳುಗಿಡಗಳಿಗೆ ಕೊಡಲಿಯಾಗಿಯೂ, ನಿರತಿಶಯವಾದ ಆನಂದಕ್ಕೆ ಆಸ್ಪದವಾಗಿಯೂ, ಶಾಂತಿ (ಇಂದ್ರಿಯ ಮನೋನಿಗ್ರಹ) ಎಂಬ ವೃಕ್ಷಕ್ಕೆ ಹೂಗಳ ಗೊಂಚಲಾಗಿಯೂ ಇರುವ ನಿಷ್ಕಾಮಸ್ಥಿತಿಯನ್ನು ಸರ್ವದಾ ಅವಲಂಬಿಸಬೇಕು. ಆಶಾರಾಹಿತ್ಯಸ್ಥಿತಿಯಿಂದ ಅಲಂಕೃತವಾದ ಆಕಾರವುಳ್ಳ (ನಿಷ್ಕಾಮ) ಮಹಾತ್ಮನಿಗೆ ಈ ಭೂಮಂಡಲವೆಲ್ಲವೂ ಒಂದು ಗೋವಿನ ಹೆಜ್ಜೆಯಷ್ಟು ಅಲ್ಪವಾಗಿಯೂ, ಮಹಾಮೇರು ಪರ್ವತವು ಒಂದು ಸಣ್ಣ ಮೋಟುಮರದಂತೆ ಅತಿ ತುಚ್ಛವಾಗಿಯೂ, ಎಲ್ಲಾ ದಿಕ್ಕುಗಳೂ ಸಣ್ಣ ಸಂಪುಟಗಳಂತೆ ಹ್ರಸ್ವವಾಗಿಯೂ, ಸ್ವರ್ಗಾದಿ ಮೂರುಲೋಕಗಳೂ ಒಂದು ಹುಲ್ಲುಕಡ್ಡಿಯಂತೆ ಉಪೇಕ್ಷಣೀಯವಾದವುಗಳಾಗಿಯೂ ಕಾಣುವುವು.

**ಪದಂ ಯಸ್ಯ ನ ಬಧ್ನಾತಿ ಕದಾಚಿತ್ಕಲನಾ ಹೃದಿ ।**
**ತೃಣೀಕೃತತ್ರಿಭುವನಃ ಕೇನಾಸಾವುಪಮೀಯತೇ ॥**
*(ಯೋಗವಾಸಿಷ್ಠ, ಉಪಶಮಪ್ರಕರಣ, ಸರ್ಗ-೭೪, ಶ್ಲೋಕ-೪೯)*

ಯಾವ ಮಹಾನುಭಾವನ ಹೃದಯದಲ್ಲಿ ಆಶೆಯು ಎಂದಿಗೂ ಹೆಜ್ಜೆ ಹಾಕದೆ ದೂರದಲ್ಲಿದ್ದು ಬಿಡುವುದೋ ಮತ್ತು ಯಾವಾತನು ಮೂರು ಲೋಕಗಳನ್ನೂ ಒಂದು ಹುಲ್ಲುಕಡ್ಡಿಗೆ

ಸಮನಾಗಿ ಅತಿತುಚ್ಛವಾಗಿ ಕಾಣುವನೋ ಅಂತಹ ಮಹಾತ್ಮನನ್ನು ಯಾರೊಡನೆ ಹೋಲಿಸಲಾಗುವುದು? ಎಂದಿಗೂ ಹೋಲಿಸಲು ಸಾಧ್ಯವಿಲ್ಲ.

**ಬ್ರಹ್ಮವೊಂದೇ ಇರುವುದು, ಎಲ್ಲವೂ ಬ್ರಹ್ಮವೇ ಆಗಿರುವುದು**

ಸರ್ವಶಕ್ತಿಮತ್ತಾದ ಆ ಬ್ರಹ್ಮವೊಂದೇ ಸತ್ಸ್ವರೂಪವು. ಅದೊಂದೇ ಒಂದಾಗಿರುವವರೆಗೆ ದ್ವಿತ್ವ, ಏಕತ್ವ ಎಂಬ ಭಾವನೆಗಳಿಗೆ ಕಾರಣವೇ ಇರುವುದಿಲ್ಲ. ನೀರಿನಲ್ಲಿ ಕಾಣುವ ಅಲೆಗಳು ವ್ಯಾವಹಾರಿಕ ಸತ್ಯವಾದರೂ ಪಾರಮಾರ್ಥಿಕ ಸತ್ಯವಲ್ಲ. ಪರ್ವತದ ಮೇಲೆ ಇರುವಂತೆ ಕಾಣುವ ನೀರಿನಲ್ಲಿ ತೋರುವ ಅಲೆಗಳು ಸ್ವಪ್ನದಂತೆ ಪ್ರಾತಿಭಾಸಿಕ ಸತ್ಯವಾದರೂ ವ್ಯಾವಹಾರಿಕ ಸತ್ಯವಲ್ಲ. ಬ್ರಹ್ಮವೊಂದೇ ಸತ್ಯ. ಉಳಿದದ್ದೆಲ್ಲವೂ ಅಸತ್ಯ ಎಂಬ ನಿಜವಾದ ಜ್ಞಾನವುಳ್ಳವನಿಗೆ ವ್ಯಾವಹಾರಿಕ ಸತ್ಯವಾದರೂ ಪ್ರಾಗಭಾವ, ಪ್ರಧ್ವಂಸಾಭಾವಗಳನ್ನುಳ್ಳ ಪರ್ವತವೂ ಅತ್ಯಂತಾಭಾವವಾದ ಮೊಲದ ಕೊಂಬಿನಂತೆಯೇ ನಿಸ್ಸಾರವಾದುದು.

**ಬ್ರಹ್ಮಣಃ ಸರ್ವಶಕ್ತಿತ್ವಂ ತತ್ತ್ವತೋ ನ ವಿಭಿದ್ಯತೇ ।**
**ತರಂಗಕಣಕಲ್ಲೋಲಜಲೌಘ ಇವ ವಾರಿಣಃ ॥**
*(ಯೋಗವಾಸಿಷ್ಠ, ನಿರ್ವಾಣಪ್ರಕರಣ, ಸರ್ಗ-೩೩, ಶ್ಲೋಕ-೧೧)*

ಅಲೆಗಳು, ತುಂತುರುಗಳು, ಸಣ್ಣಸಣ್ಣ ಅಲೆಗಳು, ಪ್ರವಾಹ ಎಂದು ನಾನಾರೂಪವಾಗಿದ್ದರೂ ಅದೆಲ್ಲವೂ ನೀರೇ ಆಗಿರುವಂತೆ ಸರ್ವಶಕ್ತಿಸಹಿತವಾದ ಬ್ರಹ್ಮದಲ್ಲಿ ನಾನಾಕಾರದ ದೃಶ್ಯವು ಕಂಡರೂ ಅವೆಲ್ಲಕ್ಕೂ ಆಶ್ರಯವಾದ ಬ್ರಹ್ಮವೊಂದೇ ಆದುದರಿಂದ ಅವೆಲ್ಲ ಬೇರೆ ಬೇರೆಯಲ್ಲ.

**ಯದಿದಂ ದೃಶ್ಯತೇ ಕಿಂಚಿಜ್ಜಗತ್ಸ್ಥಾವರಜಂಗಮಮ್ ।**
**ತತ್ಸರ್ವಂ ಬ್ರಹ್ಮ ನಿರ್ಧರ್ಮ ನಿರ್ಗುಣಂ ನಿರ್ಮಲಾತ್ಮಕಮ್ ॥**
**ನಿರ್ವಿಕಾರಮನಾದ್ಯಂತಂ ನಿತ್ಯಂ ಶಾಂತಂ ಸಮಾತ್ಮಕಮ್ ।**
*(ಯೋಗವಾಸಿಷ್ಠ, ನಿರ್ವಾಣಪ್ರಕರಣ, ಸರ್ಗ-೪೮, ಶ್ಲೋಕ-೧೯, ೨೦)*

ಈ ವಿಶ್ವವು ಎಲ್ಲೆಲ್ಲಿಯೂ ಆತ್ಮಮಯವೇ ಆಗಿರುವುದು. ವಿವೇಕಿಯು ಸಿದ್ಧವಾದ ಬುದ್ಧಿಯಿಂದ ಇದನ್ನು ತಿಳಿದು, ಕಾರ್ಯಗಳಲ್ಲಿ ಉತ್ಸಾಹದಿಂದ ವಿಜೃಂಭಿಸುತ್ತಿದ್ದರೂ ನಿಸ್ಸಂಗನೂ ನಿರ್ಮಮನೂ ಆಗಿರಬೇಕು. ಸ್ಥಾವರಜಂಗಮಾತ್ಮಕವಾಗಿ ಕಂಡುಬರುವ ಈ ಜಗತ್ತೆಲ್ಲವೂ ಬ್ರಹ್ಮವೇ! ಆ ಬ್ರಹ್ಮವು ನಿರ್ಧರ್ಮವು, ನಿರ್ಗುಣವು, ನಿರ್ಮಲವು, ನಿರ್ವಿಕಾರವು, ಅನಾದ್ಯಂತವು, ನಿತ್ಯವು, ಶಾಂತವು, ಸಮವೂ ಆಗಿದೆ.

**ಕರೋತು ಭುವನೇ ರಾಜ್ಯಂ ವಿಶತ್ವಂಭೋದಮಂಬು ವಾ ।**
**ನಾತ್ಮಲಾಭಾದೃತೇ ಜಂತುರ್ವಿಶ್ರಾಂತಿಮಧಿಗಚ್ಛತಿ ॥**
**ಆತ್ಮಾವಲೋಕನೇ ಯತ್ನಃ ಕರ್ತವ್ಯೋ ಭೂತಿಮಿಚ್ಛತಾ ।**
**ಸರ್ವದುಃಖಶಿರಶ್ಛೇದ ಆತ್ಮಾಲೋಕೇನ ಜಾಯತೇ ॥**

ಸಾಮ್ರಾಜ್ಯಾಧಿಪತ್ಯವಿರಲಿ, ಸಾಗರವನ್ನು ಒಳಹೊಕ್ಕು ಆಳಲಿ, ಆದರೆ ನಿಜವಾದ ಸುಖವು ಆತ್ಮಜ್ಞಾನ ಮಾತ್ರದಿಂದಲೇ ಲಭ್ಯವಾಗುತ್ತದೆ. ಕಲ್ಯಾಣವನ್ನು ಬಯಸುವ ಪ್ರತಿಯೊಬ್ಬನೂ ಆತ್ಮಜ್ಞಾನಕ್ಕಾಗಿ ಯತ್ನಿಸಲಿ. ಏಕೆಂದರೆ ಆತ್ಮಜ್ಞಾನವಿಲ್ಲದೇ ದುಃಖನಾಶವಿಲ್ಲ. ಆದ್ದರಿಂದ ಬುದ್ಧಿಶಾಲಿಯಾದ ಮನುಷ್ಯನು, ಕರ್ಮಗಳನ್ನು ಬಿಡದೆ ಮಾಡುತ್ತಾ, ಈ ಸಂಸಾರವು ಅಸಾರವೆಂದು ತಿಳಿಯುತ್ತಾ, ಸಚ್ಚಿದಾನಂದರೂಪನೂ, ಜ್ಞಾನಮಯನೂ ಆದ ಪರಮಾತ್ಮನ ಚಿಂತನೆ ಮಾಡುತ್ತಾ ಕರ್ಮಜ್ಞಾನಗಳಿಂದ ಆತ್ಮೋನ್ನತಿಯನ್ನು ಪಡೆದು ಸಂತಸಪಡುತ್ತಾ ಜೀವನ್ಮುಕ್ತನಾಗಬೇಕು. ಇದೇ ಜೀವನದ ಸಾರ್ಥಕತೆ ಎಂಬುದಾಗಿ ವಸಿಷ್ಠರು ಶ್ರೀರಾಮನಿಗೆ ಉಪದೇಶ ಮಾಡುತ್ತಾರೆ. ವಸಿಷ್ಠರ ಉಪದೇಶದಿಂದ ಎಲ್ಲ ಸಂಶಯಗಳನ್ನೂ ಪರಿಹರಿಸಿಕೊಂಡ ಶ್ರೀರಾಮನು ಉತ್ಸಾಹಿತನಾಗಿ ತನ್ನ ಕರ್ತವ್ಯಗಳಲ್ಲಿ ತೊಡಗಿ ಕೃತಕೃತ್ಯನಾಗುತ್ತಾನೆ. ಯೋಗವಾಸಿಷ್ಠವು ಕರ್ಮಜ್ಞಾನಗಳ ಸಂಗಮವನ್ನು ಹೇಳುತ್ತದೆ. ಕರ್ಮತ್ಯಾಗವನ್ನು ಹೇಳುವುದಿಲ್ಲ. ಪರಬ್ರಹ್ಮ ಸಾಕ್ಷಾತ್ಕಾರಕ್ಕೆ ಇವೆರಡೂ, ಎರಡು ಪಾದಗಳಿದ್ದಂತೆ ಎಂದು ಬೋಧಿಸುತ್ತದೆ. ಯೋಗವಾಸಿಷ್ಠದಲ್ಲಿ ವಸಿಷ್ಠರು ವಿಶದವಾದ ಆಧ್ಯಾತ್ಮಿಕ ಚಿಂತನೆಯನ್ನು ಹರಿಸಿದ್ದಾರೆ. ವಿವೇಕಿಗಳಾಗಿ ನಾವು ಯಥಾಮತಿ ಯಥಾಶಕ್ತಿ ಈ ಜ್ಞಾನಪ್ರಭೆಯನ್ನು ಪಡೆದು ಸುಖಿಗಳಾಗಿ ಕೃತಕೃತ್ಯರಾಗಬೇಕು. ಆತ್ಮಾವಲೋಕನದ ದಿವ್ಯಾಕಾಂಕ್ಷೆಯೇ ಯೋಗವಾಸಿಷ್ಠದ ಪರಮಗುರಿಯಾಗಿದೆ.

* * *

*ಪರಾಮರ್ಶನಗ್ರಂಥಗಳು:*


೧. **ಯೋಗವಾಸಿಷ್ಠಮ್** (ಸಂಸ್ಕೃತ), ತಾತ್ಪರ್ಯಪ್ರಕಾಶ ಸಂಸ್ಕೃತ ವ್ಯಾಖ್ಯಾಸಹಿತ, ಸಂ : ವಾಸುದೇವಶರ್ಮಾ, ಪ್ರ : ತುಕಾರಾಮ್ ಜಾವಜೀ, ನಿರ್ಣಯಸಾಗರ ಪ್ರೆಸ್, ಬಾಂಬೆ, ೧೯೧೧

೨. **ಯೋಗವಾಸಿಷ್ಠ** (ಕನ್ನಡಾನುವಾದ ಸಹಿತ), ಕನ್ನಡಾನುವಾದಕರು: ದೇವುಡು ನರಸಿಂಹಶಾಸ್ತ್ರಿ ಮತ್ತು ಮಣಿಕುಂಡಲಂ ಎಸ್. ವೆಂಕಟೇಶಶಾಸ್ತ್ರಿ, ಶ್ರೀಜಯಚಾಮರಾಜೇಂದ್ರ ಗ್ರಂಥಮಾಲಾ (೧ ರಿಂದ ೨೧ ಸಂಪುಟಗಳು ಪೂರ್ಣ), ಮೈಸೂರು, ೧೯೪೬-೧೯೫೩

೩. **ಯೋಗವಾಸಿಷ್ಠ** (ಹಿಂದೀ ಭಾವಾರ್ಥಸಹಿತ) (ಸಂಸ್ಕೃತ-ಹಿಂದೀ), ಪಂಡಿತ ಶ್ರೀರಾಮಶರ್ಮಾ ಆಚಾರ್ಯ, ಸಂಸ್ಕೃತ ಸಂಸ್ಥಾನಮ್, ವೇದನಗರ, ಬರೇಲಿ, (ಖಂಡ ೧ ಮತ್ತು ೨), ೧೯೭೧

೪. **ಯೋಗವಾಸಿಷ್ಠ** (ಸಮಗ್ರ ಕನ್ನಡ ಗದ್ಯಾನುವಾದ), ಅನುವಾದಕರು : ದಿ|| ನಾಗೇಶ ರಂಗೋ ಕುಲಕರ್ಣಿ, ಪ್ರ : ಪ್ರತಿಭಾ ಗ್ರಂಥಮಾಲೆ, ಶಿವಾಜಿಬೀದಿ, ಧಾರವಾಡ, ನಾಲ್ಕನೆಯ ಮುದ್ರಣ, ೧೯೯


* * *

# ‘ವಿವೇಕಚೂಡಾಮಣಿ’ಯಲ್ಲಿ ಆಧ್ಯಾತ್ಮಿಕ ಸಾಧನೆ

ಸ್ವಾಮಿ ನಿತ್ಯಸ್ಥಾನಂದ



**ಶ್ರೀಶಂಕರಾಚಾರ್ಯರ ಕೃತಿಗಳಲ್ಲೆಲ್ಲ ಅತ್ಯಂತ ಪ್ರಸಿದ್ಧವೂ, ಕಾವ್ಯಮಯ ಶೈಲಿಯಿಂದ ಉತ್ಕೃಷ್ಟ ಪ್ರಕರಣ ಗ್ರಂಥವಾಗಿಯೂ ಜನಪ್ರಿಯವಾಗಿರುವ ಕೃತಿ ‘ವಿವೇಕಚೂಡಾಮಣಿ.’ ಅದ್ವೈತ ಪರಂಪರೆಯಲ್ಲಿ ಇದೊಂದು ಸಾಧನೆಯ ಪ್ರಮಾಣಗ್ರಂಥವಾಗಿಯೂ ಪೂಜ್ಯವೆನಿಸಿದೆ. ಈ ಕೃತಿಯನ್ನು ವಿಶ್ಲೇಷಿಸಿರುವ ಪೂಜ್ಯ ಸ್ವಾಮೀಜಿಯವರು ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರವಾದ ಬೇಲೂರು ಮಠದಲ್ಲಿನ ಬ್ರಹ್ಮಚಾರಿಗಳ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ‘ವಿವೇಕಪ್ರಭ’ ಪತ್ರಿಕೆಯ ಪ್ರಥಮ ಸಂಪಾದಕರಾಗಿದ್ದ ಇವರು, ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರೂ ಆಗಿದ್ದರು. ಕನ್ನಡದಲ್ಲಿ ಹಲವಾರು ಕೃತಿಗಳನ್ನು ರಚಿಸಿರುವ ಸ್ವಾಮೀಜಿಯವರು ಪ್ರಬುದ್ಧ ಚಿಂತಕರು ಮತ್ತು ಉತ್ತಮ ವಾಗ್ಮಿಗಳು.**

ಶ್ರೀ ಶಂಕರಾಚಾರ್ಯರದೆಂದು ಹೇಳಲಾಗಿರುವ ‘ವಿವೇಕಚೂಡಾಮಣಿ’ಯು ಅತ್ಯಂತ ಪ್ರಸಿದ್ಧವೂ ಜನಪ್ರಿಯವೂ ಆದ, ಅದ್ವೈತಸಂಪ್ರದಾಯಕ್ಕೆ ಸೇರಿದ ಒಂದು ಪ್ರಕರಣ ಗ್ರಂಥವಾಗಿದೆ. ಗುರುಶಿಷ್ಯ ಸಂವಾದ ರೂಪದಲ್ಲಿರುವ ಈ ಗ್ರಂಥವು ಅದ್ವೈತ ತತ್ತ್ವದ ಎಲ್ಲ ಮುಖ್ಯಾಂಶಗಳನ್ನೂ ಪ್ರತಿಪಾದಿಸುತ್ತದೆ. ಆದರೆ ಈ ಗ್ರಂಥದ ವಿಶೇಷವೇನೆಂದರೆ ಇದರ ಭಾಷೆಯು ಕಾವ್ಯಮಯವಾಗಿರುವುದು ಮತ್ತು ಅನುಭಾವದ ಬೆಳಕಿನ ಕಿರಣಗಳನ್ನು ಹೊರಸೂಸುತ್ತಿರುವುದು. ಕೇವಲ ಒಣ ತತ್ತ್ವದಿಂದ ಮನಸ್ಸಿಗೆ ಬೇಸರವೆನಿಸುವುದಿಲ್ಲ. ಆದ್ದರಿಂದಲೇ ಈ ಗ್ರಂಥವು ಆಧ್ಯಾತ್ಮಿಕ ಸಾಧಕರಿಗೆ ಅತ್ಯಂತ ಸ್ಫೂರ್ತಿದಾಯಕವಾಗಿದೆ, ತೀವ್ರ ವೈರಾಗ್ಯ ಮನೋಭಾವವನ್ನು ಕೆರಳಿಸುವುದಾಗಿದೆ. ಈ ಗ್ರಂಥದಲ್ಲಿ ಬರುವ ಮುಖ್ಯ ವಿಚಾರಗಳು ಇವು: ಅದ್ವೈತ ದರ್ಶನದ ಮೂಲ ಸಿದ್ಧಾಂತಗಳು, ಆತ್ಮನ ಸ್ವರೂಪ, ಶರೀರತ್ರಯ, ಮಹಾವಾಕ್ಯ ನಿರೂಪಣೆ, ಸಾಧನಚತುಷ್ಟಯ, ಶ್ರವಣ-ಮನನ-ನಿದಿಧ್ಯಾಸನ, ಸಮಾಧಿ, ಬ್ರಹ್ಮಾನುಭವದ ವಿವರಣೆ, ಜೀವನ್ಮುಕ್ತನ ಲಕ್ಷಣ, ಮತ್ತು ಬ್ರಹ್ಮಾನಂದದ ವೈಭವ.

ಈ ಗ್ರಂಥದಲ್ಲಿ ಸಾಧನೆಗೆ ಸಂಬಂಧಪಟ್ಟ ಕೆಲವು ವಿಚಾರಗಳನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.

ಈ ಮನುಷ್ಯ ಜನ್ಮದ ಮುಖ್ಯ ಉದ್ದೇಶವೇ ಮುಕ್ತಿಯನ್ನು ಪಡೆಯುವುದು. ಅತ್ಯಂತ ದುರ್ಲಭವಾದ ಈ ಮನುಷ್ಯದೇಹವನ್ನು ಪಡೆದೂ ತನ್ನ ಆಧ್ಯಾತ್ಮಿಕ ಒಳಿತನ್ನು ಕಡೆಗಣಿಸುವವನು ಮೂರ್ಖನೆಂದು ಆಚಾರ್ಯರು ನಿಂದಿಸುತ್ತಾರೆ:

**ಇತಃ ಕೋ ನ್ವಸ್ತಿ ಮೂಢಾತ್ಮಾ ಯಸ್ತು ಸ್ವಾರ್ಥೇ ಪ್ರಮಾದ್ಯತಿ।**
**ದುರ್ಲಭಂ ಮಾನುಷಂ ದೇಹಂ ಪ್ರಾಪ್ಯ ತತ್ರಾಪಿ ಪೌರುಷಮ್ ॥೫॥**

‘‘ದುರ್ಲಭವಾದ ಮನುಷ್ಯಶರೀರವನ್ನು, ಅದರಲ್ಲಿಯೂ ಪೌರುಷವಂತನಾಗಿ ತನ್ನ ಆಧ್ಯಾತ್ಮಿಕ ಒಳಿತನ್ನು ಯಾರು ಕಡೆಗಣಿಸುತ್ತಾನೋ ಅವನಿಗಿಂತಲೂ ಅವಿವೇಕಿಯಾದವನು ಯಾರಿರುವನು?’’

ಮನುಷ್ಯನಾಗಿ ಹುಟ್ಟಿ ವಿಷಯಾಸಕ್ತಿಯಲ್ಲಿಯೇ ಮೈಮರೆತು, ಆಧ್ಯಾತ್ಮಿಕ ಆದರ್ಶವನ್ನು ಕಡೆಗಣಿಸುವುದೆಂದರೆ, ಶ್ರೀರಾಮಕೃಷ್ಣರು ಹೇಳುವಂತೆ, ಮಾವಿನ ತೋಪಿಗೆ ಹೋಗಿ ಕೊಂಬೆ ಎಲೆಗಳನ್ನು ಎಣಿಸುವುದರಲ್ಲೇ ಮಗ್ನರಾಗಿ ಮಾವಿನ ಹಣ್ಣನ್ನು ತಿನ್ನಲು ಮರೆತಂತಾಗುತ್ತದೆ. ಆದ್ದರಿಂದ ಮನುಷ್ಯನಾದವನು ಮುಮುಕ್ಷುವಾಗಿರಬೇಕು ಎಂಬುದು ಶಂಕರಾಚಾರ್ಯರ ಅಭಿಪ್ರಾಯ. ಇಂತಹ ಮುಮುಕ್ಷುವನ್ನೇ ಅಧಿಕಾರಿ ಎಂದು ಕರೆಯುವುದು. ಅಧಿಕಾರಿಯಲ್ಲಿ ಮೋಕ್ಷಾಕಾಂಕ್ಷೆ ತೀವ್ರವಾಗಿರಬೇಕು, ಅವನು ಸಂಸಾರಬಂಧನವನ್ನು ತೀವ್ರವಾಗಿ ಅನುಭವಿಸಬೇಕು, ಮೇಧಾವಿಯೂ ವಿದ್ವಾಂಸನೂ ವಿಚಾರಪರನೂ ಆದ ಅಂತಹ ಅಧಿಕಾರಿಯು ಯೋಗ್ಯ ಗುರುವನ್ನು ಅರಸಿಕೊಂಡು ಹೋಗಬೇಕು, ಮತ್ತು ಗುರೂಪದೇಶಕ್ಕೆ ಅನುಸಾರವಾಗಿ ಅವನು ಸಾಧನೆಯನ್ನು ಮಾಡುತ್ತ ಹೋಗಬೇಕು.

ಅದ್ವೈತ ಸಂಪ್ರದಾಯದಲ್ಲಿ ಸಾಧನೆಯ ಅತಿಮುಖ್ಯ ಅಂಶವೆಂದರೆ ವಿಚಾರ – ಇದು ವಿಚಾರ ಮಾರ್ಗ. ಶ್ರೀಶಂಕರಾಚಾರ್ಯರು ಹೇಳುತ್ತಾರೆ:

**ಚಿತ್ತಸ್ಯ ಶುದ್ಧಯೇ ಕರ್ಮ ನ ತು ವಸ್ತೂಪಲಬ್ಧಯೇ ।**
**ವಸ್ತುಸಿದ್ಧಿಃ ವಿಚಾರೇಣ ನ ಕಿಂಚಿತ್ ಕರ್ಮಕೋಟಿಭಿಃ ॥೧೧॥**

‘‘ಕರ್ಮವು ಚಿತ್ತಶುದ್ಧಿಗಾಗಿ ಇರುವುದೇ ಹೊರತು ಪರವಸ್ತುವಿನ ಸಾಕ್ಷಾತ್ಕಾರಕ್ಕಾಗಿ ಅಲ್ಲ. ವಸ್ತು ಸಾಕ್ಷಾತ್ಕಾರವು ವಿಚಾರದಿಂದ ಉಂಟಾಗುವುದೇ ವಿನಾ ಕೋಟಿಕರ್ಮಗಳಿಂದಲೂ ಆಗುವು

ದಿಲ್ಲ.'' ನಿಷ್ಕಾಮಭಾವದಿಂದ ಕರ್ಮಗಳನ್ನು ಅನುಸರಿಸುವುದರಿಂದ ಮನಸ್ಸು ಆಸೆಗಳಿಂದಲೂ ಸಂಸ್ಕಾರಗಳಿಂದಲೂ ಮುಕ್ತವಾಗಿ ಪರಿಶುದ್ಧವಾಗುತ್ತದೆ – ಅಂದರೆ ಮನಸ್ಸು ಸ್ಥಿರವಾಗುತ್ತದೆ, ಚಂಚಲತೆಯಿಂದ ದೂರವಾಗುತ್ತದೆ. ಇಂತಹ ಮನಸ್ಸಿನಿಂದ ಆತ್ಮ ಚಿಂತನೆಯು, ಸಾಧ್ಯವಾಗುತ್ತದೆ. ಆತ್ಮತತ್ತ್ವವನ್ನು ವಿಷಯ ವಸ್ತುಗಳಿಂದಲೂ ದೇಹೇಂದ್ರಿಯಮನಸ್ಸುಗಳಿಂದಲೂ ಪ್ರತ್ಯೇಕಿಸಿ ತನ್ನಾತ್ಮನಲ್ಲಿಯೇ ನೆಲೆನಿಲ್ಲುವುದು ವಿಚಾರದಿಂದ ಸಾಧ್ಯವೇ ಹೊರತು ಕರ್ಮದಿಂದ ಸಾಧ್ಯವಿಲ್ಲ. ಕರ್ಮದಿಂದ ವಿವಿಧ ವಸ್ತುಗಳನ್ನು ಪಡೆಯಬಹುದು, ವಸ್ತುಗಳನ್ನು ಬದಲಾಯಿಸಬಹುದು. ಅವುಗಳನ್ನು ಉತ್ತಮಗೊಳಿಸಬಹುದು ಅಥವಾ ವಿಕೃತಗೊಳಿಸಬಹುದು, ಅಥವಾ ಹೊಸ ವಸ್ತುಗಳನ್ನು ಉತ್ಪನ್ನಮಾಡಬಹುದು. ಆದರೆ ಆತ್ಮತತ್ತ್ವವು ಪಡೆಯುವಂತಹದೂ ಅಲ್ಲ , ಉತ್ಪಾದಿಸುವಂತಹದೂ ಅಲ್ಲ. ಬದಲಾಯಿಸುವಂತಹದೂ ಅಲ್ಲ. ಅದು ಸಿದ್ಧ ವಸ್ತುವೇ ಹೊರತು ಸಾಧ್ಯವಲ್ಲ. ಅದು ಅರಿವಿನ ವಸ್ತು, ಕರ್ಮದ ವಸ್ತುವಲ್ಲ. ದೈಹಿಕ ಮಾನಸಿಕ ಕ್ರಿಯೆಗಳೆಲ್ಲ ಹಂತ ಹಂತವಾಗಿ ಸ್ಥಗಿತಗೊಂಡು, ಸಂಪೂರ್ಣ ನಿಷ್ಕ್ರಿಯ ಸ್ಥಿತಿಯನ್ನು ತಲುಪಿದಾಗ ನಮ್ಮ ನಿಜ ಸ್ವರೂಪದ, ಅಂದರೆ ಆತ್ಮತತ್ತ್ವದ ಅರಿವಾಗುತ್ತದೆ.

ಈ ಸ್ಥಿತಿಯನ್ನು ತಲುಪಲು ಮೊದಲು ನಿಷಿದ್ಧ ಕರ್ಮಗಳನ್ನೆಲ್ಲ ಬಿಟ್ಟು, ಕಾಮ್ಯಕರ್ಮಗಳಲ್ಲಿಯೂ ತೊಡಗದೆ, ಮಾಡಲೇಬೇಕಾದ ನಿತ್ಯನೈಮಿತ್ತಿಕ ಕರ್ಮಗಳನ್ನು (obligatory duties) ನಿಷ್ಕಾಮ ಭಾವದಿಂದ ಮಾಡುತ್ತ ಹೋಗಬೇಕು. ಇದರೊಂದಿಗೆ ಸಾಧನ ಚತುಷ್ಟಯವನ್ನೂ ಅಭ್ಯಾಸ ಮಾಡುತ್ತಿರಬೇಕು. ಆಗ ಸಾಧಕನು ಆತ್ಮಾನುಸಂಧಾನಕ್ಕೆ ಅರ್ಹತೆಯನ್ನು ಪಡೆಯುತ್ತಾನೆ. ಈಗ ಸಾಧನ ಚತುಷ್ಟಯ ಯಾವುದೆಂಬುದನ್ನು ನೋಡೋಣ.

**ಆದೌ ನಿತ್ಯಾನಿತ್ಯವಸ್ತುವಿವೇಕಃ ಪರಿಗಣ್ಯತೇ।**
**ಇಹಾಮುತ್ರಫಲಭೋಗವಿರಾಗಸ್ತದನಂತರಮ್।**
**ಶಮಾದಿಷಟ್ಕಸಂಪತ್ತಿರ್ಮುಮುಕ್ಷುತ್ವಮಿತಿ ಸ್ಫುಟಮ್ ॥೧೯॥**

''ನಿತ್ಯಾನಿತ್ಯವಸ್ತುವಿವೇಕವು ಮೊದಲನೆಯ ಸಾಧನವೆಂದೂ, ಇಹಲೋಕ ಮತ್ತು ಪರಲೋಕದಲ್ಲಿ ಅನುಭವಿಸುವ ಕರ್ಮಫಲದ ಭೋಗಗಳಲ್ಲಿ ವೈರಾಗ್ಯವು ಎರಡನೆಯ ಸಾಧನೆಯೆಂದೂ, ಶಮವೇ ಮೊದಲಾದ ಆರು ಗುಣಗಳನ್ನು ಪಡೆಯುವುದು ಮೂರನೆಯ ಸಾಧನವೆಂದೂ, ಮೋಕ್ಷೇಚ್ಛೆಯು ನಾಲ್ಕನೆಯ ಸಾಧನವೆಂದೂ ಜ್ಞಾನಿಗಳು ಸ್ಪಷ್ಟವಾಗಿ ಪರಿಗಣಿಸುತ್ತಾರೆ.''

**ವಿವೇಕ:** ಬ್ರಹ್ಮವಸ್ತುವೊಂದೇ ಸತ್ಯ ಈ ಜಗತ್ತೆಲ್ಲವೂ ಮಿಥ್ಯೆ – ಈ ರೀತಿಯ ನಿಶ್ಚಯವೇ ನಿತ್ಯಾನಿತ್ಯವಸ್ತು ವಿವೇಕವೆಂದು ಕರೆಯಲ್ಪಡುತ್ತದೆ, ಎಂದು ಶ್ರೀಶಂಕರಾಚಾರ್ಯರು ಹೇಳುತ್ತಾರೆ. ನಿಜವಾದ ಸತ್ಯ ಯಾವುದು ಮತ್ತು ತೋರಿಕೆಯ ಸತ್ಯ ಯಾವುದು ಎಂದು ಸ್ಪಷ್ಟವಾಗಿ ಬೇರ್ಪಡಿಸಿ ನೋಡುವ ಸಾಮರ್ಥ್ಯವನ್ನೇ ವಿವೇಕವೆಂದು ಕರೆಯುವುದು. ಈ ಸಾಧನೆಯನ್ನು ವಿಶೇಷವಾಗಿ



ವೈಯಕ್ತಿಕ ದೃಷ್ಟಿಯಿಂದ ಪರಿಗಣಿಸಬೇಕು. ನಮ್ಮ ವ್ಯಕ್ತಿತ್ವದಲ್ಲಿ ನಿಜವಾದ ಸತ್ಯ ಯಾವುದು? ದೇಹ, ಇಂದ್ರಿಯ, ಮನಸ್ಸುಗಳೆಲ್ಲವೂ ಬದಲಾಗುವಂತಹವು ಮತ್ತು ಇವುಗಳ ಹಿಂದೆ ಬದಲಾಗದ, ಈ ಬದಲಾವಣೆಗಳೆಲ್ಲವನ್ನೂ ಸಾಕ್ಷಿಯಂತೆ ನೋಡುವ ಆತ್ಮನಿರುವನು. ಶ್ರೀಶಂಕರಾಚಾರ್ಯರು ಹೇಳುತ್ತಾರೆ:

**ಅಸ್ತಿ ಕಶ್ಚಿತ್ ಸ್ವಯಂ ನಿತ್ಯಮಹಂಪ್ರತ್ಯಯಲಂಬನಃ ।**
**ಅವಸ್ಥಾತ್ರಯಸಾಕ್ಷೀ ಸನ್ ಪಂಚಕೋಶವಿಲಕ್ಷಣಃ ॥೨೫॥**

ಸ್ವತಃಸಿದ್ಧನೂ 'ನಾನು' ಎಂಬ ಅರಿವಿನ ಹಿಂದೆ ಇರುವವನೂ ಅವಸ್ಥಾತ್ರಯಕ್ಕೆ ಸಾಕ್ಷಿಯೂ ಪಂಚಕೋಶಗಳಿಗಿಂತ ಭಿನ್ನನೂ ಆದ ಆತ್ಮನೊಬ್ಬನು ಯಾವಾಗಲೂ ಇರುತ್ತಾನೆ.

ಅವಸ್ಥಾತ್ರಯವೆಂದರೆ ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿ ಎಂಬ ಮೂರು ಸ್ಥಿತಿಗಳು. ಜಾಗ್ರದವಸ್ಥೆಯಲ್ಲಿ ದೇಹೇಂದ್ರಿಯಗಳು ಕೆಲಸ ಮಾಡುತ್ತಿವೆ ಮತ್ತು ವಿಷಯ ಜಗತ್ತಿನ ಅನುಭವವಾಗುತ್ತದೆ. ಸ್ವಪ್ನಾವಸ್ಥೆಯಲ್ಲಿ ದೇಹೇಂದ್ರಿಯಗಳ ಬಾಹ್ಯಕ್ರಿಯೆಗಳೆಲ್ಲ ನಿಂತು ಹೋಗಿ ಕೇವಲ ಮನಸ್ಸೊಂದೇ ಕೆಲಸ ಮಾಡುತ್ತಿರುತ್ತದೆ ಹಾಗೂ ಮಾನಸಿಕ ಜಗತ್ತಿನ ಅನುಭವವಾಗುತ್ತದೆ. ಈ ಸ್ಥಿತಿಯಲ್ಲಿ ಜೀವಾತ್ಮನು ಸ್ಥೂಲ ದೇಹದಿಂದ ಪ್ರತ್ಯೇಕವಾಗಿರುತ್ತಾನೆ. ಆದ್ದರಿಂದ ಆತ್ಮನು ಸ್ಥೂಲ ಶರೀರವಲ್ಲ ಎಂಬುದು ತಿಳಿದುಬರು

**ಯಥಾऽऽತ್ಮಬುದ್ಧಿಸ್ತವ ನಾಸ್ತಿ ಕಾಚಿ-**
**ಜ್ಜೀವಚ್ಛರೀರೇ ಚ ತಥೇವ ಮಾಸ್ತು ॥ ೧೬೩ ॥**

''ಶರೀರದ ನೆರಳಿನಲ್ಲಿ, ಪ್ರತಿಬಿಂಬದ ಶರೀರದಲ್ಲಿ, ಕನಸಿನಲ್ಲಿ ಕಾಣುವ ಶರೀರದಲ್ಲಿ ಮತ್ತು ಮನಸ್ಸಿನಲ್ಲಿ ಕಲ್ಪಿತವಾದ ಶರೀರದಲ್ಲಿ 'ನಾನು' ಎಂಬ ಬುದ್ಧಿಯು ಹೇಗೆ ಸ್ವಲ್ಪವೂ ಇರುವುದಿಲ್ಲವೋ ಹಾಗೆಯೇ ಜೀವಿಸಿರುವ ಈ ಶರೀರದಲ್ಲಿಯೂ 'ನಾನು' ಎಂಬ ಬುದ್ಧಿಯು ನಿನಗೆ ಉಂಟಾಗದಿರಲಿ.

ಮುಂದಿನ ಪ್ರಾಣಮಯ ಕೋಶವು ಅನ್ನಮಯ ಕೋಶವನ್ನು ಆವರಿಸಿಕೊಂಡು ಇರುತ್ತದೆ ಮತ್ತು ಎಲ್ಲ ಕ್ರಿಯೆಗಳಿಗೂ ಅದೇ ಶಕ್ತಿಯನ್ನು ನೀಡುವಂತಹುದು. ಈ ಪ್ರಾಣಮಯ ಕೋಶವು ವಾಯುವಿನ ರೂಪಾಂತರವಾದುದರಿಂದ ಆತ್ಮನಲ್ಲ. ಏಕೆಂದರೆ ಇದು ಚಲನಶೀಲವಾದುದು, ಇಷ್ಟಾನಿಷ್ಟಗಳನ್ನು ಅರಿಯಲಾರದು, ತನ್ನನ್ನಾಗಲಿ ಬೇರೊಂದನ್ನಾಗಲಿ ಅರಿಯಲಾರದು ಮತ್ತು ಯಾವಾಗಲೂ ಪರಾಧೀನವಾಗಿದ್ದು ಯಂತ್ರದಂತೆ ಕೆಲಸ ಮಾಡುತ್ತದೆ.

ಈ ಪ್ರಾಣಮಯವನ್ನು ಆವರಿಸಿಕೊಂಡಿರುವ ಮನೋಮಯ ಕೋಶವು ವಿವಿಧ ಆಲೋಚನೆ, ಕಲ್ಪನೆ, ಭಾವನೆಗಳಿಂದ ಕೂಡಿದ್ದು ಎಲ್ಲ ಬಗೆಯ ಭೇದಗಳಿಗೂ ಕಾರಣವಾಗಿದೆ. ಇದು ತುಂಬ ಬಲಿಷ್ಠವಾದುದೆಂದು ಆಚಾರ್ಯರು ಹೇಳುತ್ತಾರೆ. ಅವರು ಒಂದು ರೂಪಕದ ಮೂಲಕ ಈ ಕೋಶದ ಒಂದು ಸುಂದರ ಚಿತ್ರಣವನ್ನು ನೀಡುತ್ತಾರೆ:

**ಪಂಚೇಂದ್ರಿಯೈಃ ಪಂಚಭಿರೇವ ಹೋತೃಭಿಃ**
**ಪ್ರಚೀಯಮಾನೋ ವಿಷಯಾಜ್ಯಧಾರಯಾ।**
**ಜಾಜ್ವಲ್ಯಮಾನೋ ಬಹುವಾಸನೇಂಧನೈಃ**
**ಮನೋಮಯಾಗ್ನಿರ್ದಹತಿ ಪ್ರಪಂಚಮ್ ॥ ೧೬೮ ॥**

''ಪಂಚೇಂದ್ರಿಯಗಳೆಂಬ ಪಂಚಹೋತೃಗಳು ಸುರಿಯುತ್ತಿರುವ ವಿಷಯಗಳೆಂಬ ತುಪ್ಪದ ಧಾರೆಯಿಂದ ವರ್ಧಿಸುತ್ತಿರುವ, ಬಹುಬಗೆಯ ಸಂಸ್ಕಾರಗಳೆಂಬ ಕಟ್ಟಿಗೆಯಿಂದ ಪ್ರಜ್ವಲಿಸುತ್ತಿರುವ ಮನೋಮಯ ಕೋಶವೆಂಬ ಅಗ್ನಿಯು ಇಡೀ ಪ್ರಪಂಚರೂಪದಲ್ಲಿ ಉರಿಯುತ್ತಿರುವುದು.'' ಮನಸ್ಸೇ ಪ್ರಪಂಚವನ್ನು ಸೃಷ್ಟಿಸುತ್ತಿರುವುದು ಎಂಬ ಭಾವನೆ ಇಲ್ಲಿ ಸೂಚ್ಯವಾಗಿದೆ. ಇದೇ ಬಂಧ ಮೋಕ್ಷಗಳೆರಡಕ್ಕೂ ಕಾರಣವಾಗಿದೆ. ಮನೋಮಯಕೋಶವೂ ಆತ್ಮನಾಗಿರಲು ಸಾಧ್ಯವಿಲ್ಲ. ಏಕೆಂದರೆ ಇದಕ್ಕೆ ಆದಿ-ಅಂತ್ಯಗಳಿವೆ, ಇದು ಯಾವಾಗಲೂ ಬದಲಾಗುತ್ತಿರುತ್ತದೆ, ಮತ್ತು ಇದು ದೃಶ್ಯವಾಗಿರುತ್ತದೆ. ದ್ರಷ್ಟೃವಾದ ಆತ್ಮನು ದೃಶ್ಯವಾಗಿರಲು ಸಾಧ್ಯವಿಲ್ಲ.

ಕರ್ತೃತ್ವಭಾವದಿಂದ ಕೂಡಿದ ಬುದ್ಧಿಯನ್ನೇ ವಿಜ್ಞಾನಮಯ ಕೋಶವೆಂದು ಕರೆಯುವುದು. ಚಿದಾತ್ಮನ ಪ್ರತಿಬಿಂಬ ಶಕ್ತಿಯಿಂದ ಕೂಡಿದ ಇದು ದೇಹ ಇಂದ್ರಿಯ ಇವೇ ಮೊದಲಾದವುಗಳಲ್ಲಿ 'ನಾನು' ಎಂಬ ಅಭಿಮಾನವನ್ನು ಪಡೆಯುತ್ತದೆ, ಮತ್ತು ಇದೇ



ತ್ತದೆ. ಹಾಗೆಯೇ ಸುಷುಪ್ತಿಯಲ್ಲಿ ಮನಸ್ಸಿನ ಕ್ರಿಯೆಯೂ ನಿಂತು ಹೋಗುತ್ತದೆ. ಈ ಸ್ಥಿತಿಯಲ್ಲಿ ಆತ್ಮನು ಮನಸ್ಸಿನಿಂದಲೂ ಪ್ರತ್ಯೇಕವಾಗುವುದರಿಂದ ಅವನು ಮನಸ್ಸು ಅಲ್ಲ ಎಂಬುದು ತಿಳಿದುಬರುತ್ತದೆ. ಸುಷುಪ್ತಿಯನ್ನೂ ಮೀರಿದ ಸಮಾಧಿ ಸ್ಥಿತಿಯಲ್ಲಿ ಆತ್ಮನು ಕಾರಣಶರೀರದಿಂದಲೂ ಬೇರೆಯಾಗುತ್ತಾನೆ. ಹೀಗೆ ಆತ್ಮನು ಈ ಮೂರು ಅವಸ್ಥೆಗಳಿಂದ ಪ್ರತ್ಯೇಕವಾದವನು ಇವುಗಳ ಸಾಕ್ಷಿ ಎಂದು ವಿಶ್ಲೇಷಿಸಿ ನೋಡುವುದೇ ವಿವೇಕ.

ಇನ್ನೊಂದು ರೀತಿಯ ವಿಶ್ಲೇಷಣೆ ಪಂಚಕೋಶಗಳಿಂದ ಆತ್ಮನನ್ನು ಪ್ರತ್ಯೇಕಿಸುವುದು. ಪಂಚಕೋಶಗಳು: ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ. ಅನ್ನದಿಂದ ಹುಟ್ಟುವ, ಅದರಿಂದಲೇ ಜೀವಿಸುವ ಮತ್ತು ಅದಿಲ್ಲದಿದ್ದರೆ ನಶಿಸುವ ಸ್ಥೂಲ ಶರೀರವೇ ಅನ್ನಮಯ ಕೋಶ. ಇದು ಚರ್ಮ ಮಾಂಸ, ರಕ್ತ ಮುಂತಾದವುಗಳಿಂದ ಕೂಡಿ ಅನೇಕ ಅಂಗಾಂಗಗಳನ್ನು ಹೊಂದಿದೆ. ಇಂತಹ ಜಡ ಸ್ವಭಾವದ ದೇಹವು ಚೈತನ್ಯಸ್ವರೂಪನಾದ ಆತ್ಮನಾಗಿರಲು ಸಾಧ್ಯವೇ ಇಲ್ಲ. ಆದ್ದರಿಂದ ಶಂಕರಾಚಾರ್ಯರು ಹೇಳುತ್ತಾರೆ:

**ಛಾಯಾಶರೀರೇ ಪ್ರತಿಬಿಂಬಗಾತ್ರೇ**
**ಯತ್ಸ್ವಪ್ನದೇಹೇ ಹೃದಿಕಲ್ಪಿತಾಂಗೇ।**

ಮನುಷ್ಯನ ಸಂಸಾರಕ್ಕೆ ಕಾರಣವಾಗಿರುತ್ತದೆ. ವ್ಯಕ್ತಿಭಾವಕ್ಕೆ (sense of individuality) ಕಾರಣವಾಗಿರುವ ಇದನ್ನೇ ಜೀವಾತ್ಮಾ ಎಂದು ಕರೆಯುವುದು. ಇದೂ ಕೂಡ ಬದಲಾಗುತ್ತಿರುತ್ತದೆ, ಜಡಾತ್ಮಕವಾದುದು, ಸೀಮಿತವಾದುದು, ದೃಶ್ಯವಾಗಿರುವುದು ಮತ್ತು ಯಾವಾಗಲೂ ತೋರುವಂತಹುದಲ್ಲ. ಹೀಗೆ ಇದು ಅನಿತ್ಯ ವಾಗಿರುವುದರಿಂದ ನಿತ್ಯನಾದ ಆತ್ಮನಾಗಿರಲು ಸಾಧ್ಯವಿಲ್ಲ.

ಇದಕ್ಕಿಂತಲೂ ಸೂಕ್ಷ್ಮವಾದ ಅವಿದ್ಯೆಯ ಆವರಣವನ್ನೇ ಆನಂದಮಯಕೋಶವೆಂದು ಕರೆಯುವುದು. ಇದೇ ಮುಂದಿನ ಕೋಶಗಳಿಗೆ ಮೂಲ. ಇದು ಆತ್ಮನಿಗೆ ಸಮೀಪವಾಗಿರುವುದರಿಂದ ಆತ್ಮಾನಂದ ಇದರ ಮೂಲಕ ಪ್ರತಿಬಿಂಬಿಸುತ್ತದೆ. ನಮ್ಮ ಇಷ್ಟಾರ್ಥವು ಪೂರ್ತಿಯಾದಾಗ ಈ ಆನಂದದ ಅನುಭವವಾಗುತ್ತದೆ. ಪುಣ್ಯಕರ್ಮದ ಫಲವಾಗಿ ಮನಸ್ಸು ತಿಳಿಯಾದಾಗಲೂ ಈ ಆಂತರಿಕ ಆನಂದವು ತೋರಿಕೊಳ್ಳುತ್ತದೆ. ಸುಷುಪ್ತಿಯಲ್ಲಿ ಈ ಆನಂದ ಮಯ ಕೋಶವೊಂದೇ ಉಳಿದಿರುತ್ತದೆ. ಇದೂ ಕೂಡ ಆತ್ಮನಲ್ಲ. ಏಕೆಂದರೆ ಇದೂ ಕೂಡ ಒಂದು ಉಪಾಧಿ ಮತ್ತು ಪ್ರಕೃತಿಯ ವಿಕಾರ.

**ಪಂಚಾನಾಮಪಿ ಕೋಶಾನಾಂ ನಿಷೇಧೇ ಯುಕ್ತಿತಃ ಶ್ರುತೇಃ।**
**ತನ್ನಿಷೇಧಾವಧಿಃ ಸಾಕ್ಷೀ ಬೋಧರೂಪೋಽವಶಿಷ್ಯತೇ ॥ ೨೧ ॥**

''ಶ್ರುತಿಯ ಆಧಾರದಿಂದಲೂ ಯುಕ್ತಿಯ ಮೂಲಕವೂ ಈ ಐದು ಕೋಶಗಳನ್ನೂ ನಿರಾಕರಿಸಿದರೆ ಕೊನೆಯಲ್ಲಿ ಸಾಕ್ಷಿಯೂ ಜ್ಞಾನಸ್ವರೂಪನೂ ಆದ ಪರಮಾತ್ಮನು ಉಳಿದುಕೊಳ್ಳುತ್ತಾನೆ.'' ಹೀಗೆ ಆತ್ಮನನ್ನು ಪಂಚಕೋಶಗಳಿಂದ ಪ್ರತ್ಯೇಕಿಸಿ ನೋಡುವುದು ವಿವೇಕ.

### ವೈರಾಗ್ಯ:

**ತದ್ವೈರಾಗ್ಯಂ ಜಿಹಾಸಾ ಯಾ ದರ್ಶನಶ್ರವಣಾದಿಭಿಃ।**
**ದೇಹಾದಿಬ್ರಹ್ಮಪರ್ಯಂತೇ ಹ್ಯನಿತ್ಯೇ ಭೋಗವಸ್ತುನಿ ॥ ೨೧ ॥**

''ಮಾನವದೇಹದಿಂದ ಪ್ರಾರಂಭಿಸಿ ಬ್ರಹ್ಮಲೋಕದವರೆಗಿನ, ದರ್ಶನ, ಶ್ರವಣ ಮುಂತಾದವುಗಳಿಂದ ಉಂಟಾಗುವ ಭೋಗ ವಸ್ತುಗಳಲ್ಲಿರುವ ಜಿಗುಪ್ಸೆಯನ್ನೇ ವೈರಾಗ್ಯವೆಂದು ಕರೆಯುವುದು.'' ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ವಿಷಯವೇನೆಂದರೆ, ಕೇವಲ ಬಾಹ್ಯ ವಿಷಯಗಳನ್ನು ತ್ಯಾಗ ಮಾಡಿದರೆ ಸಾಲದು, ಅವುಗಳ ವಿಷಯದಲ್ಲಿ ಆಂತರಿಕ ಒಲವೂ ಕೂಡ ಇರಕೂಡದು. ಹಣವೇ ಮುಂತಾದ ವಸ್ತುಗಳನ್ನು ತ್ಯಾಗ ಮಾಡಿದ ಮೇಲೂ ಕೀರ್ತಿ, ಅಧಿಕಾರ, ಸ್ಥಾನ, ಮಾನಾದಿಗಳ ವ್ಯಾಮೋಹ ಮನುಷ್ಯನನ್ನು ಹಿಡಿದುಕೊಳ್ಳಬಹುದು. ಇದನ್ನೂ ಮೀರಿದ ಮೇಲೆ ಮತ, ಅಭಿಪ್ರಾಯ, ಸ್ವಇಚ್ಛೆ ಮುಂತಾದವುಗಳ ವ್ಯಾಮೋಹ ಕಾಡತೊಡಗುತ್ತವೆ. ನನ್ನ ಇಚ್ಛೆಯಂತೆಯೇ ನಡೆಯಬೇಕು, ನನ್ನ ಮತವೇ ಸರಿ, ನನ್ನ ಅಭಿಪ್ರಾಯವೇ ಸರಿ – ಈ ರೀತಿಯ ಅಹಂಕಾರಕ್ಕೆ ಮನುಷ್ಯ ವಶನಾಗುತ್ತಾನೆ. ಈ ವಿಷಯದಲ್ಲಿಯೂ ವೈರಾಗ್ಯ ಮನೋಭಾವ ಉಂಟಾಗಬೇಕು. ಅಹಂಕಾರ ತ್ಯಾಗವೇ ಹಿರಿದಾದ ತ್ಯಾಗ. ಆಚಾರ್ಯರು ಅಹಂಕಾರವನ್ನೂ ಭಯಂಕರ ಸರ್ಪಕ್ಕೆ ಹೋಲಿಸುತ್ತಾರೆ :



**ಬ್ರಹ್ಮಾನಂದ ನಿಧಿರ್ಮಹಾಬಲವತಾಽಹಂಕಾರ-ಘೋರಾಹಿನಾ**
**ಸಂವೇಷ್ಟ್ಯಾತ್ಮನಿ ರಕ್ಷತೇ ಗುಣಮಯೈಶ್ಚಂಡೈಸ್ತ್ರಿಭಿರ್ಮಸ್ತಕೈಃ ।**
**ವಿಜ್ಞಾನಾಖ್ಯ-ಮಹಾಸಿನಾ ದ್ಯುತಿಮತಾ ವಿಚ್ಛಿದ್ಯ ಶೀರ್ಷತ್ರಯಂ**
**ನಿರ್ಮೂಲ್ಯಾಹಿಮಿಮಂ ನಿಧಿಂ ಸುಖಕರಂ ಧೀರೋಽನು**
**ಭೋಕ್ತುಂ ಕ್ಷಮಃ ॥ ೩೦೧ ॥**

''ಮಹಾಬಲಶಾಲಿಯಾದ ಅಹಂಕಾರವೆಂಬ ಘೋರ ಸರ್ಪವು ಬ್ರಹ್ಮಾನಂದವೆಂಬ ನಿಧಿಯನ್ನು ಸತ್ತ್ವರಜಸ್ತಮೋಗುಣಗಳೆಂಬ ರೋಷಗೊಂಡಿರುವ ಮೂರು ಹೆಡೆಗಳಿಂದ ಸುತ್ತಿಕೊಂಡು ತನ್ನಲ್ಲಿ ರಕ್ಷಿಸಿಕೊಂಡಿರುತ್ತದೆ. ಬ್ರಹ್ಮಜ್ಞಾನವೆಂಬ ಥಳಥಳಿಸುವ ದೊಡ್ಡ ಕತ್ತಿಯಿಂದ ಮೂರು ಹೆಡೆಗಳನ್ನೂ ಕತ್ತರಿಸಿ, ಈ ಸರ್ಪವನ್ನು ನಾಶಮಾಡಿ ಆನಂದಕರವಾದ ಈ ನಿಧಿಯನ್ನು ಅನುಭವಿಸಲು ಧೀಮಂತನಾದವನೇ ಶಕ್ತನಾಗಿರುತ್ತಾನೆ.''

ಆದ್ದರಿಂದ ವೈರಾಗ್ಯವೆಂದರೆ ಕೇವಲ ಬಾಹ್ಯವಸ್ತುಗಳ ತ್ಯಾಗವಲ್ಲ. ಆಂತರಿಕ ತ್ಯಾಗ ಅತಿ ಮುಖ್ಯವಾದುದು ಎಂದು ಆಚಾರ್ಯರು ಹೇಳುತ್ತಾರೆ:

''ಒಳಗಿನ ತ್ಯಾಗ ಮತ್ತು ಹೊರಗಿನ ತ್ಯಾಗ – ಇವೆರಡೂ ವಿರಕ್ತನಾದವನಿಗೆ ಯುಕ್ತವಾಗಿರುತ್ತದೆ. ವಿರಕ್ತನಾದವನೇ ಮೋಕ್ಷೇಚ್ಛೆಯಿಂದ ಒಳಗಿನ ಮತ್ತು ಹೊರಗಿನ ಆಸಕ್ತಿಯನ್ನು ಬಿಡುತ್ತಾನೆ. ಬ್ರಹ್ಮದಲ್ಲಿ ನೆಲೆಗೊಂಡಿರುವ ವಿರಕ್ತನಾದವನೇ ಹೊರಗೆ ವಿಷಯಗಳ ಸಂಗವನ್ನೂ ಒಳಗೆ ಅಹಂಕಾರಾದಿಗಳ ಸಂಗವನ್ನೂ ಬಿಡಲು ಸಮರ್ಥನಾಗುತ್ತಾನೆ. ವೈರಾಗ್ಯ ಮತ್ತು ಜ್ಞಾನ – ಇವೆರಡೂ ಪಕ್ಷಿಯ ಎರಡು ರೆಕ್ಕೆಗಳಿದ್ದಂತೆ. ಇವೆರಡರಲ್ಲಿ ಒಂದಿಲ್ಲದಿದ್ದರೂ ಮುಕ್ತಿಸೌಧದ ಮೇಲಕ್ಕೆ ಹತ್ತುವುದು ಸಾಧ್ಯವಾಗುವುದಿಲ್ಲ.'' (೩೭೧–೭೩)

ವೈರಾಗ್ಯವೆಂದರೆ ವಾಸನಾತ್ರಯಗಳಿಂದ ಮುಕ್ತರಾಗುವುದು. ವಾಸನಾತ್ರಯ ಯಾವುದೆಂದರೆ – ಲೋಕವಾಸನೆ, ದೇಹವಾಸನೆ ಮತ್ತು ಶಾಸ್ತ್ರವಾಸನೆ (೨೯–೭೦). ಲೋಕವಾಸನೆಯೆಂದರೆ ಲೋಕಮಾನ್ಯತೆಯ ಆಸೆ; ದೇಹವಾಸನೆಯೆಂದರೆ ದೇಹೇಂದ್ರಿಯ ಸುಖಗಳ ಆಸೆ; ಹಾಗೂ ಶಾಸ್ತ್ರವಾಸನೆಯೆಂದರೆ ಪಾಂಡಿತ್ಯಾಭಿಮಾನ. ಆಚಾರ್ಯರು ಶಾಸ್ತ್ರವಾಸನೆಯ ಬಗ್ಗೆ ಹೀಗೆ ಹೇಳುತ್ತಾರೆ:

**ವಾಗ್ವೈಖರೀ ಶಬ್ದಝರೀ ಶಾಸ್ತ್ರವ್ಯಾಖ್ಯಾನಕೌಶಲಮ್ ।**
**ವೈದುಷ್ಯಂ ವಿದುಷಾಂ ತದ್ವದ್‌ಭುಕ್ತಯೇ ನ ತು ಮುಕ್ತಯೇ ॥ ೫೮ ॥**

''ಪಂಡಿತರ ವಾಗ್ವೈಖರಿ, ಶಬ್ದಗಳ ಪ್ರವಾಹ, ಶಾಸ್ತ್ರವ್ಯಾಖ್ಯಾನದಲ್ಲಿ ಕೌಶಲ ಮತ್ತು ಪಾಂಡಿತ್ಯ – ಇವು ಭೋಗಕ್ಕೆ ಸಾಧನವಾಗಬಲ್ಲವೇ ವಿನಾ ಮುಕ್ತಿಗೆ ಸಾಧನವಾಗಲಾರವು.''

ವಿವೇಕ ವೈರಾಗ್ಯಗಳಿಗೆ ಪೂರಕವಾಗಿ ಶಮ ದಮ ಮುಂತಾದ ಆರು ಸಾಧನೆಗಳನ್ನು ವೇದಾಂತವು ತಿಳಿಸುತ್ತದೆ.

**ಶಮ:** ''ವಿಷಯ ವಸ್ತುಗಳಲ್ಲಿ ಪುನಃ ಪುನಃ ದೋಷವನ್ನು ನೋಡುವುದರ ಮೂಲಕ ಅವುಗಳಿಂದ ಮನಸ್ಸನ್ನು ಬೇರ್ಪಡಿಸಿ ತನ್ನ ಗುರಿಯಲ್ಲಿ ಅದನ್ನು ನಿಯಮದಿಂದ ಸ್ಥಾಪಿಸುವುದನ್ನೇ ಶಮವೆಂದು ಕರೆಯುವುದು'' (೨೨) ಎಂದು ಆಚಾರ್ಯರು ಹೇಳುತ್ತಾರೆ. ಈ ದೋಷವನ್ನು ನೋಡುವ ವಿಧಾನವನ್ನು ಅವರು ಇನ್ನೊಂದು ಕಡೆ ವಿವರಿಸುತ್ತಾರೆ:

**ದೋಷೇಣ ತೀವ್ರೋ ವಿಷಯಃ ಕೃಷ್ಣಸರ್ಪವಿಷಾದಪಿ।**
**ವಿಷಂ ನಿಹಂತಿ ಭೋಕ್ತಾರಂ ದ್ರಷ್ಟಾರಂ ಚಕ್ಷುಷಾಽಪ್ಯಯಮ್ ॥೭೭॥**

''ಭೋಗವಿಷಯವು ದೋಷದಲ್ಲಿ ಕಾಳಸರ್ಪದ ವಿಷಕ್ಕಿಂತಲೂ ತೀವ್ರವಾಗಿರುವುದು. ವಿಷವಾದರೋ ತಿನ್ನುವವನನ್ನು ಮಾತ್ರ ಕೊಲ್ಲುತ್ತದೆ. ಆದರೆ ವಿಷಯವು ಕಣ್ಣಿನಿಂದ ನೋಡುವವನನ್ನು ಕೂಡ ಕೊಲ್ಲುತ್ತದೆ.'' **'ಸರ್ವಂ ದುಃಖಂ ವಿವೇಕಿನಃ'** – ವಿವೇಕಿ ಯಾದವನಿಗೆ ಸುಖವೂ ಕೂಡ ದುಃಖದಾಯಕವಾಗುತ್ತದೆ. ಇಂದ್ರಿಯ ಸುಖವು ದುಃಖದ ಕಿರೀಟವನ್ನು ಹಾಕಿಕೊಂಡು ಬರು ತ್ತದೆ ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಪ್ರಾರಂಭ ದಲ್ಲಿ ಸುಖಪ್ರದವಾಗಿದ್ದರೂ ವಿಷಯ ಸುಖವನ್ನು ಅನುಭವಿ ಸುತ್ತಾ ಹೋದರೆ ಅದರಲ್ಲಿ ತೀವ್ರವಾದ ರಾಗವುಂಟಾಗಿ, ಅದಕ್ಕನುಗುಣವಾದ ಕರ್ಮವನ್ನು ಮಾಡುತ್ತಾ ಕರ್ಮಪಾಶಕ್ಕೆ ಬದ್ಧ ನಾಗುತ್ತಾನೆ. ಈ ರೀತಿ ವಿಷಯಸುಖದಲ್ಲಿ ದೋಷವನ್ನು ನೋಡುತ್ತ, ಭಾವಿಸುತ್ತ ಅವುಗಳಿಂದ ಮನಸ್ಸನ್ನು ಹಿಂತೆಗೆದುಕೊಳ್ಳುವುದೇ ಶಮ.

**ದಮ:** ''ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳನ್ನು ವಿಷಯ ವಸ್ತುಗಳಿಂದ ಹಿಂತಿರುಗಿಸಿ ತಮ್ಮ ತಮ್ಮ ಗೋಲಕಗಳಲ್ಲಿ ಸ್ಥಾಪಿಸುವುದೇ ದಮವೆನಿಸುತ್ತದೆ (೨೩).'' ಸಾಮಾನ್ಯವಾಗಿ ಇಂದ್ರಿಯಗಳು ಬಾಹ್ಯ ವಿಷಯಗಳಲ್ಲಿಯೇ ಆಸಕ್ತವಾಗಿರುತ್ತವೆ. ಇದರಿಂದಾಗಿ ಇಂದ್ರಿಯಗಳ ಮೂಲಕ ಬಹಳಷ್ಟು ಮನಶ್ಶಕ್ತಿಯು ಹೊರಮುಖವಾಗಿ ಹರಿಯುತ್ತಿರುತ್ತದೆ. ನಾವು ಇಂದ್ರಿಯಗಳನ್ನು ನಿಗ್ರಹಿಸಿದಾಗ ಶಕ್ತಿ ಸಂಚಯವಾಗಿ, ಆ ಶಕ್ತಿಯನ್ನು ಆತ್ಮಚಿಂತನೆಯಲ್ಲಿ ತೊಡಗಿಸಲು ಸಾಧ್ಯವಾಗುತ್ತದೆ. ಇಂದ್ರಿಯಗಳ ಹಾವಳಿಯನ್ನು ಕುರಿತು ಆಚಾರ್ಯರು ತುಂಬ ಸುಂದರವಾಗಿ ಆಲಂಕಾರಿಕವಾಗಿ ಹೇಳುತ್ತಾರೆ:

**ಶಬ್ದಾದಿಭಿಃ ಪಂಚಭಿರೇವ ಪಂಚ**
**ಪಂಚತ್ವಮಾಪುಃ ಸ್ವಗುಣೇನ ಬದ್ಧಾಃ ।**
**ಕುರಂಗ–ಮಾತಂಗ–ಪತಂಗ–ಮೀನ–**
**ಭೃಂಗಾ ನರಃ ಪಂಚಭಿರಂಚಿತಃ ಕಿಮ್ ॥೭೬॥**

''ಜಿಂಕೆ, ಆನೆ, ಮಿಡತೆ, ಮೀನು ಮತ್ತು ದುಂಬಿ – ಈ ಐದು ಪ್ರಾಣಿಗಳು ಶಬ್ದವೇ ಮೊದಲಾದ ಪಂಚ ವಿಷಯಗಳಲ್ಲಿ ತಮ್ಮ ತಮ್ಮ ಅಭಿಲಾಷೆಗೆ ಗೋಚರವಾಗಿರುವ ಯಾವುದೋ ಒಂದು ಗುಣಕ್ಕೆ ಬದ್ಧವಾಗಿ ಮೃತ್ಯುವನ್ನು ಹೊಂದುತ್ತವೆ. ಈ ಪಂಚೇಂದ್ರಿಯಗಳಿಂದಲೂ ಕೂಡಿರುವ ಮನುಷ್ಯನ ವಿಷಯದಲ್ಲಿ ಹೇಳತಕ್ಕದ್ದೇನು?'' ಜಿಂಕೆಯು ಬೇಟೆಗಾರನು ಮಾಡುವ ಶಬ್ದದಿಂದಲೂ ಆನೆಯು ಹೆಣ್ಣಾನೆಯ ಸ್ಪರ್ಶದಿಂದಲೂ ಮಿಡತೆಯು ದೀಪದ ರೂಪದಿಂದಲೂ ಮೀನು ಗಾಳದ ಹುಳುವಿನ ರುಚಿಯಿಂದಲೂ ದುಂಬಿಯು ಹೂವಿನ ಪರಿಮಳದಿಂದಲೂ ನಾಶವಾಗುತ್ತವೆ. ಹೀಗೆ ಒಂದೊಂದು ಇಂದ್ರಿಯದ ವಶಕ್ಕೆ ಒಳಪಟ್ಟ ಜಂತುವಿನ ಅವಸ್ಥೆಯೇ ಹೀಗಾದರೆ ಪಂಚೇಂದ್ರಿಯಗಳ ಹೊಡೆತಕ್ಕೆ ಸಿಕ್ಕಿಬಿದ್ದಿರುವ ಮನುಷ್ಯನ ಗತಿಯೇನು?

ಯೋಗಸಾಧನೆಯ ಮೊದಲ ದ್ವಾರವೇ ವಾಗಿಂದ್ರಿಯ ನಿರೋಧವೆಂದು ಆಚಾರ್ಯರು ಹೇಳುತ್ತಾರೆ. ಇದಕ್ಕೆ ಏಕಾಂತ ವಾಸವು ಅತ್ಯಂತ ಅವಶ್ಯಕವೆಂಬುದು ಅವರ ಅಭಿಪ್ರಾಯ. ಈ ಸಾಧನೆಗಳ ಕಾರ್ಯ–ಕಾರಣ ಸಂಬಂಧವನ್ನು ಆಚಾರ್ಯರು ಕೆಳಗಿನ ಶ್ಲೋಕದಲ್ಲಿ ವಿವರಿಸುತ್ತಾರೆ:

**ಏಕಾಂತಸ್ಥಿತಿರಿಂದ್ರಿಯೋಪರಮಣೇ ಹೇತುರ್ದಮಶ್ಚೇತಸಃ**
**ಸಂರೋಧೇ ಕರಣಂ ಶಮೇನ ವಿಲಯಂ ಯಾಯಾದಹಂವಾಸನಾ।**
**ತೇನಾನಂದರಸಾನುಭೂತಿರಚಲಾ ಬ್ರಾಹ್ಮೀ ಸದಾ ಯೋಗಿನಃ**
**ತಸ್ಮಾಚ್ಚಿತ್ತನಿರೋಧ ಏವ ಸತತಂ ಕಾರ್ಯಃಪ್ರಯತ್ನಾನ್ಮುನೇಃ ॥೩೭೭॥**

''ಏಕಾಂತವಾಸವು ಇಂದ್ರಿಯನಿಗ್ರಹಕ್ಕೆ ಕಾರಣವಾಗಿರುವುದು; ಇಂದ್ರಿಯನಿಗ್ರಹವು ಚಿತ್ತದ ನಿಗ್ರಹಕ್ಕೆ ಕಾರಣವಾಗಿರುವುದು; ಚಿತ್ತನಿರೋಧದಿಂದ ಅಹಂವಾಸನೆಯು ಲಯವನ್ನು ಹೊಂದುತ್ತದೆ; ಅಹಂವಾಸನೆಯ ಲಯದಿಂದ ಯೋಗಿಗೆ ಬ್ರಹ್ಮಾನಂದರಸದ ಅನುಭವವು ಯಾವಾಗಲೂ ಆಗುತ್ತದೆ. ಆದುದರಿಂದ ಮುನಿಯು ಯಾವಾಗಲೂ ಚಿತ್ತನಿರೋಧವನ್ನೇ ಪ್ರಯತ್ನದಿಂದ ಮಾಡಬೇಕು.''

**ಉಪರತಿ: ಬಾಹ್ಯಾನಾಲಂಬನಂ ವೃತ್ತೇರೇಷೋಪರತಿರುತ್ತಮಾ –** ''ಮನಸ್ಸಿನ ವೃತ್ತಿಯು ಹೊರಗಿನ ಯಾವ ವಿಷಯವನ್ನು ಅವಲಂಬಿಸದಿರುವುದೇ ಉತ್ತಮವಾದ ಉಪರತಿಯು'' – ಎಂದು ಆಚಾರ್ಯರು ಹೇಳುತ್ತಾರೆ. ಸಾಮಾನ್ಯವಾಗಿ ನಮ್ಮ ಮನಸ್ಸಿನ ಭಾವಗಳು ಹೊರಗಿನ ವಿಷಯಗಳನ್ನು ಅವಲಂಬಿಸಿರುತ್ತವೆ. ಕೆಲವು ವ್ಯಕ್ತಿಗಳು ವಸ್ತುಗಳು ನಮಗೆ ಸಂತೋಷವನ್ನೂ ಕೆಲವು ಅಸಂತೋಷವನ್ನೂ ಉಂಟುಮಾಡುತ್ತವೆ. ಯಾರಾದರೂ ಹೊಗಳಿದರೆ ಹರ್ಷವೂ ತೆಗಳಿದರೆ ಶೋಕವೂ ಉಂಟಾಗುತ್ತದೆ. ಹೀಗೆ ಹೊರಗಿನ ವಿಷಯಗಳು ಘಟನೆಗಳು ಅನೇಕ ಭಾವವಿಕಾರಗಳಿಗೆ ಕಾರಣವಾಗುತ್ತವೆ. ಭಾವನಾತ್ಮಕವಾಗಿ ಹೊರಗಿನ ವ್ಯಕ್ತಿ ಮತ್ತು ವಸ್ತುಗಳನ್ನು ಅವಲಂಬಿಸದೆ ಇರುವುದೇ ಉಪರತಿ. ಸಂಸ್ಕೃತದಲ್ಲಿ ಒಂದು ಹೇಳಿಕೆ ಇದೆ: **ಸರ್ವಂ ಪರವಶಂ ದುಃಖಂ ಸರ್ವಂ ಆತ್ಮವಶಂ ಸುಖಂ** – ''ಪರಾವಲಂಬನೆಯೇ ದುಃಖ ಆತ್ಮಾವಲಂಬನೆಯೇ ಸುಖ.''

**ತಿತಿಕ್ಷೆ :**

**ಸಹನಂ ಸರ್ವದುಃಖಾನಾಮಪ್ರತೀಕಾರಪೂರ್ವಕಮ್।**
**ಚಿಂತಾವಿಲಾಪರಹಿತಂ ಸಾ ತಿತಿಕ್ಷಾ ನಿಗದ್ಯತೇ ॥೨೪॥**

''ನಾನಾ ಬಗೆಯ ದುಃಖಗಳು ಸಂಭವಿಸಿದಾಗ ಸ್ವಲ್ಪವೂ ಆಂತರಿಕ ಪ್ರತಿಕ್ರಿಯೆ ಇಲ್ಲದೆ, ಮನಸ್ಸಿನಲ್ಲಿ ಕೊರಗದೆ ಮತ್ತು ಶೋಕಿಸದೆ ಸಹಿಸಿಕೊಳ್ಳುವುದನ್ನೇ **ತಿತಿಕ್ಷೆ** ಎಂದು ಕರೆಯುವುದು.'' ಬಾಹ್ಯ ಪ್ರತಿಕ್ರಿಯೆ ಇಲ್ಲದೆ ದುಃಖವನ್ನು, ಇವೆಲ್ಲ ಅನಿವಾರ್ಯ ಎಂದು ಹೇಳಿಕೊಳ್ಳುತ್ತ ನಾವು ಸಹಿಸಬಹುದು. ಆದರೆ ಆಂತರಿಕವಾಗಿ ತುಂಬ ನೋವಾಗಬಹುದು, ನಿರಾಸೆಯಾಗಬಹುದು, ಮತ್ತು ಕೆಲವೊಮ್ಮೆ ತೀವ್ರ ದುಃಖವಾದಾಗ ಜೀವನದ ಬಗ್ಗೆ ನಿರುತ್ಸಾಹವೂ ಉಂಟಾಗಬಹುದು. ಈ ಆಂತರಿಕ ಪ್ರತಿಕ್ರಿಯೆಗಳು ಇಲ್ಲದಿರುವುದು ಅತ್ಯಂತ ಮುಖ್ಯ. ಅಂದರೆ ಕಷ್ಟ, ದುಃಖ, ಸಮಸ್ಯೆಗಳು ಎದುರಾದಾಗ ಉದ್ವಿಗ್ನನಾಗದೆ ಇವುಗಳನ್ನು ಸಹಿಸಬೇಕು. ಅವುಗಳ ಬಗ್ಗೆ ಚಿಂತಿಸುತ್ತಲೂ ಇರಬಾರದು, ಶೋಕಿಸುತ್ತಲೂ ಇರಬಾರದು. ಈ ರೀತಿ ಸಹಿಸಿಕೊಳ್ಳದಿದ್ದರೆ ಆಧ್ಯಾತ್ಮಿಕ ಸಾಧನೆ ದುಸ್ಸಾಧ್ಯವಾಗುತ್ತದೆ. ಮನಸ್ಸು ಕುಗ್ಗಿಹೋಗುವುದರಿಂದ ಸಾಧನೆ ಕುಂಠಿತವಾಗುತ್ತದೆ. ಒಟ್ಟು ಅರ್ಥ ನಾವು ಅಪಾರ ಮನಶ್ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಇಂತಹ ಶಕ್ತಿಯು ಶುದ್ಧ ಚಾರಿತ್ರ್ಯದಿಂದ ಬರುತ್ತದೆ ಎಂಬುದು ಸ್ವಾಮಿ ವಿವೇಕಾನಂದರ ಅಭಿಪ್ರಾಯ.

**ಶ್ರದ್ಧೆ:**

**ಶಾಸ್ತ್ರಸ್ಯ ಗುರುವಾಕ್ಯಸ್ಯ ಸತ್ಯಬುದ್ಧ್ಯವಧಾರಣಮ್।**
**ಸಾ ಶ್ರದ್ಧಾ ಕಥಿತಾ ಸದ್ಭಿರ್ಯಯಾ ವಸ್ತೂಪಲಭ್ಯತೇ ॥೨೫॥**

''ಶಾಸ್ತ್ರ ಮತ್ತು ಗುರು ಉಪದೇಶಿಸಿರುವ ವೇದಾಂತವಾಕ್ಯ – ಇವು ಸತ್ಯವೆಂಬ ಬುದ್ಧಿಯಿಂದ ಮನಸ್ಸಿನಲ್ಲಿ ನಿರ್ಧರಿಸಿಕೊಳ್ಳುವುದು ಶ್ರದ್ಧೆ – ಎಂದು ಸಾಧುಗಳು ಹೇಳುತ್ತಾರೆ. ಇದು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾಗಿರುವುದು.'' ಶಾಸ್ತ್ರ ಮತ್ತು ಗುರುವಾಕ್ಯದಲ್ಲಿ ಶ್ರದ್ಧೆಯಿದ್ದರೆ ಸ್ವಾಭಾವಿಕವಾಗಿಯೇ ಭಗವತ್ ಶ್ರದ್ಧೆಯೂ ಇದ್ದೇ ಇರುತ್ತದೆ; ಹಾಗೆಯೇ ಆತ್ಮಶ್ರದ್ಧೆ ಮತ್ತು ಆತ್ಮವಿಶ್ವಾಸಗಳೂ ಸಹಜವಾಗಿಯೇ ಸಾಧಕನಲ್ಲಿ ಉಂಟಾಗುತ್ತದೆ. ವೇದಾಂತದ ಸಾಧನೆಯಲ್ಲಿ ಆತ್ಮಶ್ರದ್ಧೆ ಅತ್ಯಂತ ಮುಖ್ಯವಾದುದು. ಏಕೆಂದರೆ ಇಲ್ಲಿ ಸ್ವಪ್ರಯತ್ನಕ್ಕೆ ಹೆಚ್ಚು ಒತ್ತನ್ನು ನೀಡಲಾಗಿದೆ. ಆಚಾರ್ಯರು ಹೇಳುತ್ತಾರೆ :

**ಋಣಮೋಚನಕರ್ತಾರಃ ಪಿತುಃ ಸಂತಿ ಸುತಾದಯಃ।**
**ಬಂಧಮೋಚನಕರ್ತಾ ತು ಸ್ವಸ್ಮಾದನ್ಯೋ ನ ಕಶ್ಚನ ॥೫೧॥**

''ತಂದೆಯನ್ನು ಸಾಲದಿಂದ ಬಿಡಿಸಲು ಮಗನೇ ಮೊದಲಾದವರು ಇದ್ದಾರೆ. ಆದರೆ ಅವಿದ್ಯಾಬಂಧದಿಂದ ಬಿಡುಗಡೆ ಮಾಡಲು ತನ್ನನ್ನು ಬಿಟ್ಟರೆ ಬೇರೆ ಯಾವನೂ ಇಲ್ಲ.'' ವಿವಿಧ ಉದಾಹರಣೆಗಳ ಮೂಲಕ ಆಚಾರ್ಯರು ಈ ವಿಚಾರವನ್ನು ವ್ಯಕ್ತಪಡಿಸಿರುವರು. (೫೨–೫೫)

**ಸಮಾಧಾನ:**

**ಸಮ್ಯಗಾಸ್ಥಾಪನಂ ಬುದ್ಧೇಃ ಶುದ್ಧೇ ಬ್ರಹ್ಮಣಿ ಸರ್ವದಾ।**
**ತತ್‌ಸಮಾಧಾನಮಿತ್ಯುಕ್ತಂ ನ ತು ಚಿತ್ತಸ್ಯ ಲಾಲನಮ್ ॥೨೬॥**

''ಶುದ್ಧಬ್ರಹ್ಮದಲ್ಲಿ ಬುದ್ಧಿಯನ್ನು ಯಾವಾಗಲೂ ಚೆನ್ನಾಗಿ ಸ್ಥಿರಗೊಳಿಸುವುದೇ ಸಮಾಧಾನವೆಂದು ಹೇಳಲ್ಪಟ್ಟಿದೆ. ಮನಸ್ಸಿನ ಲಾಲನೆಯು ಸಮಾಧಾನವಲ್ಲ.''(೨೬) ಸದಾ ಆತ್ಮಚಿಂತನೆಯಲ್ಲಿ ತೊಡಗಿರಬೇಕೆಂದನ್ನು ಇಲ್ಲಿ ಒತ್ತಿ ಹೇಳಲಾಗಿದೆ. ಇಲ್ಲದಿದ್ದರೆ ಮನಸ್ಸು ವ್ಯರ್ಥ ಆಲೋಚನೆಗಳಲ್ಲಿ ವಿಷಯಚಿಂತನೆಯಲ್ಲಿ ಮಗ್ನವಾಗಿ ಕ್ರಮೇಣ ಆಧ್ಯಾತ್ಮಿಕ ಆದರ್ಶದಿಂದ ದೂರವಾಗುತ್ತದೆ. ಬೇರೆ ವಿಷಯಗಳ ಕಡೆ ಮನಸ್ಸು ಹೋಗದಂತೆ ನೋಡಿಕೊಳ್ಳಬೇಕು.

**ನಿದ್ರಾಯಾ ಲೋಕವಾರ್ತಾಯಾಃ ಶಬ್ದಾದೇರಪಿ ವಿಸ್ಮೃತೇಃ।**
**ಕಿಂಚಿನ್ನಾವಸರಂ ದತ್ವಾ ಚಿಂತಯಾತ್ಮಾನಮಾತ್ಮನಿ ॥೨೮೫॥**

''ನಿದ್ರೆಯಿಂದಾಗಲಿ ಲೋಕದ ಸುದ್ದಿಯಿಂದಾಗಲಿ ಶಬ್ದಾದಿ ವಿಷಯಗಳಿಂದಾಗಲಿ ಆತ್ಮವಿಸ್ಮೃತಿಗೆ ಅವಕಾಶವನ್ನು ಕೊಡದೆ ಬುದ್ಧಿಯಲ್ಲಿಯೇ ಆತ್ಮನನ್ನು ಕುರಿತು ಚಿಂತಿಸು.''

ಮನಸ್ಸು ಸಮಾಧಾನಗೊಂಡು ಚಂಚಲತೆಯಿಂದ ದೂರವಾದಾಗ, ಹಳೆಯ ಸಂಸ್ಕಾರಗಳ ಒತ್ತಡವೂ ಇಲ್ಲವಾದಾಗ ಅದು ಆತ್ಮಚಿಂತನೆಯಲ್ಲಿ ಸ್ಥಿರಗೊಂಡು ಧ್ಯಾನಾವಸ್ಥೆಯನ್ನು ಪಡೆಯುತ್ತದೆ.

ಆಚಾರ್ಯರು ಹೇಳುತ್ತಾರೆ:

**ಸಮಾಹಿತಾಯಾಂ ಸತಿ ಚಿತ್ತವೃತ್ತೌ**
**ಪರಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ ।**
**ನ ದೃಶ್ಯತೇ ಕಶ್ಚಿದಯಂ ವಿಕಲ್ಪಃ**
**ಪ್ರಜಲ್ಪಮಾತ್ರಃ ಪರಿಶಿಷ್ಯತೇ ತತಃ ॥೩೫೭॥**

‘‘ನಿರ್ವಿಕಲ್ಪವೂ ಬ್ರಹ್ಮವೂ ಆದ ಪರಮಾತ್ಮನಲ್ಲಿ ಚಿತ್ತ ವೃತ್ತಿಯು ಏಕಾಗ್ರತೆಯನ್ನು ಹೊಂದಿದಾಗ ಈ ಯಾವುದೊಂದು ಭೇದವೂ ಕಂಡುಬರುವುದಿಲ್ಲ, ಅನಂತರ ವಸ್ತುವಿಲ್ಲದ ಶಬ್ದ ಮಾತ್ರ ಉಳಿದುಕೊಳ್ಳುತ್ತದೆ.’’ ಅಂದರೆ ಮನಸ್ಸಿನಲ್ಲಿ ಬೇರೆ ಯಾವ ವಿಷಯಗಳೂ ಕಾಣಿಸಿಕೊಳ್ಳದೆ ಆತ್ಮವಸ್ತುವೊಂದೇ ಉಳಿದುಕೊಳ್ಳುತ್ತದೆ. ಈ ಧ್ಯಾನಸ್ಥಿತಿಯನ್ನು ಆಚಾರ್ಯರು ಮುಂದಿನ ಶ್ಲೋಕದಲ್ಲಿ ಉದಾಹರಣೆಯ ಮೂಲಕ ವಿವರಿಸುತ್ತಾರೆ:

**ಯಥಾ ಸುವರ್ಣಂ ಪುಟಪಾಕಶೋಧಿತಂ**
**ತ್ಯಕ್ತ್ವಾ ಮಲಂ ಸ್ವಾತ್ಮಗುಣಂ ಸಮೃಚ್ಛತಿ ।**
**ತಥಾ ಮನಃ ಸತ್ತ್ವರಜಸ್ತಮೋಮಲಂ**
**ಧ್ಯಾನೇನ ಸಂತ್ಯಜ್ಯ ಸಮೇತಿ ತತ್ತ್ವಮ್ ॥೩೬೦॥**

‘‘ಹೇಗೆ ಪುಟಪಾಕದಿಂದ ಶೋಧಿಸಲ್ಪಟ್ಟ ಚಿನ್ನವು ತನ್ನ ಕಶ್ಮಲವನ್ನು ಬಿಟ್ಟು ನಿಜವಾದ ಗುಣವನ್ನು ಹೊಂದುತ್ತದೆಯೋ ಹಾಗೆಯೇ ಮನಸ್ಸು ಧ್ಯಾನದ ಮೂಲಕ ಸತ್ತ್ವರಜಸ್ತೋಮೋ ಗುಣಗಳ ಕಶ್ಮಲದಿಂದ ಮುಕ್ತವಾಗಿ ಪರಮಾರ್ಥ ತತ್ತ್ವವನ್ನೇ ಹೊಂದುತ್ತದೆ’’ – ಶುದ್ಧ ಮಣಿಯು ಪಕ್ಕದಲ್ಲಿರುವ ಹೂವಿನ ಬಣ್ಣದಿಂದ ಪರಿಪ್ಲುತವಾದಂತೆ. ಮನಸ್ಸು ವಿಕಲ್ಪಶೂನ್ಯ ವಾದಾಗ, ಧ್ಯಾನ-ಧ್ಯಾತೃ-ಧ್ಯೇಯವೆಂಬ ತ್ರಿಪುಟಿ ಭೇದವು ಇಲ್ಲವಾದಾಗ ನಿರ್ವಿಕಲ್ಪ ಸಮಾಧಿಯು ಉಂಟಾಗುತ್ತದೆ. ಈ ಸಮಾಧಿಯಿಂದ ಉಂಟಾಗುವ ಪರಮಾನಂದವನ್ನು ಎಷ್ಟು ವರ್ಣಿಸಿದರೂ ಆಚಾರ್ಯರಿಗೆ ತೃಪ್ತಿಯಿಲ್ಲ! ಇದರ ಪರಿಣಾಮವಾಗಿ ಉಂಟಾಗುವ ಜೀವನ್ಮುಕ್ತಾವಸ್ಥೆಯನ್ನು ತಮ್ಮದೇ ಕಾವ್ಯಮಯ ಶೈಲಿಯಲ್ಲಿ ಹೃದಯಸ್ಪರ್ಶಿಯಾಗಿ, ಸ್ಫೂರ್ತಿದಾಯಕವಾಗಿ ಹಾಗೂ ಅದನ್ನು ನಾವೂ ಅನುಭವಿಸಬೇಕೆಂದು ಪ್ರೇರಣಪ್ರದವಾಗಿ ವರ್ಣಿಸುತ್ತಾರೆ. *(೪೨೪-೪೩)*

## ಮುಮುಕ್ಷುತ್ವ:

ಸಾಧನ ಚತುಷ್ಟಯದಲ್ಲಿ ನಾಲ್ಕನೆಯದೇ ಮುಮುಕ್ಷುತ್ವ. ಮೇಲೆ ವಿವರಿಸಿದ ಮುಕ್ತಿಯ ಆನಂದವನ್ನು ಅನುಭವಿಸಲು ಮೋಕ್ಷೇಚ್ಛೆಯು ತೀವ್ರವಾಗಿ ಇರಬೇಕಾಗುತ್ತದೆ.

**ಅಹಂಕಾರಾದಿ ದೇಹಾಂತಾನ್ ಬಂಧಾನಜ್ಞಾನ ಕಲ್ಪಿತಾನ್ ।**
**ಸ್ವಸ್ವರೂಪಾವಬೋಧೇನ ಮೋಕ್ತುಮಿಚ್ಛಾ ಮುಮುಕ್ಷುತಾ ॥೨೭॥**

‘‘ಅಹಂಕಾರದಿಂದ ಪ್ರಾರಂಭಿಸಿ ತನ್ನ ಶರೀರದವರೆಗಿರುವ, ಅಜ್ಞಾನದಿಂದ ಕಲ್ಪಿತವಾದ ಬಂಧನಗಳಿಂದ – ತನ್ನ ಆತ್ಮಸ್ವರೂಪದ ಜ್ಞಾನವನ್ನು ಪಡೆಯುವುದರ ಮೂಲಕ – ಬಿಡಿಸಿಕೊಳ್ಳಬೇಕೆಂಬ ಇಚ್ಛೆಯು ಮುಮುಕ್ಷತ್ವವೆನಿಸುತ್ತದೆ.’’ ಈ ಮುಮುಕ್ಷತ್ವ ಮತ್ತು ವೈರಾಗ್ಯ ಯಾರಲ್ಲಿ ತೀವ್ರವಾಗಿರುತ್ತವೊ ಅವನಲ್ಲಿ ಮಾತ್ರ ಶಮ ದಮಾದಿ ಸಾಧನಗಳು ನಿಜವಾದ ಸಾರ್ಥಕತೆಯನ್ನು ಪಡೆಯುತ್ತವೆ ಎಂದು ಆಚಾರ್ಯರು ಅಭಿಪ್ರಾಯಪಡುತ್ತಾರೆ. ಮುಮುಕ್ಷುಗಳಿಗೆ ಈ ಗ್ರಂಥವು ಎಷ್ಟು ಆಪ್ಯಾಯಮಾನವಾಗಿರಬಲ್ಲುದು ಎಂಬುದನ್ನು ಕೊನೆಯಲ್ಲಿ ಹೇಳುತ್ತಾರೆ:

**ಹಿತಮಿದಮುಪದೇಶಮಾದ್ರಿಯಂತಾಂ**
**ವಿಹಿತ-ನಿರಸ್ತ-ಸಮಸ್ತ-ಚಿತ್ತದೋಷಾಃ ।**
**ಭವಸುಖ-ವಿರತಾಃ ಪ್ರಶಾಂತಚಿತ್ತಾಃ**
**ಶ್ರುತಿರಸಿಕಾ ಯತಯೋ ಮುಮುಕ್ಷವೋ ಯೇ ॥ ೫೭೮॥**

‘‘ಸಾಧನೆಯ ಮೂಲಕ ಚಿತ್ತದ ಸಮಸ್ತ ದೋಷಗಳನ್ನೂ ಕಳೆದುಕೊಂಡ, ಸಂಸಾರಸುಖದಲ್ಲಿ ವಿರಕ್ತರಾದ, ಪ್ರಶಾಂತಚಿತ್ತರಾದ, ಶ್ರುತಿಯಲ್ಲಿ ರಸಿಕರಾದ, ಮುಮುಕ್ಷುಗಳಾದ ಪ್ರಯತ್ನಶೀಲರು ಹಿತವಾದ ಈ ಉಪದೇಶವನ್ನು ಆದರಿಸಲಿ.’’ ✤

### ಉಪನಿಷದ್ವಾಣಿ

**ಯ ಏಕೋಽವರ್ಣೋ ಬಹುಧಾ ಶಕ್ತಿಯೋಗಾ-**
**ದ್ವರ್ಣಾನನೇಕಾನ್ನಿಹಿತಾರ್ಥೋ ದಧಾತಿ ।**
**ವಿ ಚೈತಿ ಚಾಂತೇ ವಿಶ್ವಮಾದೌ ಸ ದೇವಃ**
**ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು ॥**

ಯಾವನು ಅದ್ವಿತೀಯನೂ ಅವರ್ಣನೂ ಆಗಿದ್ದರೂ ತನ್ನ ಶಕ್ತಿಯ ಮಹಿಮೆಯಿಂದ ಸ್ವಾರ್ಥಾಪೇಕ್ಷೆಯಿಲ್ಲದೆ ಅನೇಕ ವರ್ಣಗಳನ್ನು ಸೃಷ್ಟಿಕಾಲದಲ್ಲಿ ನಾನಾ ಪ್ರಕಾರವಾಗಿ ಸೃಷ್ಟಿಸುವನೊ, ಯಾವನಲ್ಲಿ ವಿಶ್ವವು ಪ್ರಳಯಕಾಲದಲ್ಲಿ ಲಯಹೊಂದುವುದೊ, ಮತ್ತು ಯಾವನಲ್ಲಿ ಸ್ಥಿತಿಕಾಲದಲ್ಲಿ ನಿಂತಿರುವುದೊ ಅಂಥ ದೇವನು ನಮಗೆ ಶುಭಬುದ್ಧಿಯನ್ನು ಕೊಡಲಿ!

*– ಶ್ವೇತಾಶ್ವತರೋಪನಿಷತ್, ೪.೧*

**ದ್ವೇ ವಿದ್ಯೇ ವೇದಿತವ್ಯೇ ಇತಿ ಹಸ್ಮ ಯದ್ಬ್ರಹ್ಮವಿದೋ ವದಂತಿ ಪರಾ ಚೈವಾಪರಾ ಚ । ತತ್ರಾಪರಾ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವವೇದಃ ಶಿಕ್ಷಾ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ । ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ॥**

ಎರಡು ವಿದ್ಯೆಗಳನ್ನು ತಿಳಿದುಕೊಳ್ಳಬೇಕು; ಹೀಗೆ ಬ್ರಹ್ಮಜ್ಞಾನಿಗಳು ಹೇಳುತ್ತಾರೆ: ಅವು ಪರಾವಿದ್ಯೆ ಮತ್ತು ಅಪರಾವಿದ್ಯೆ. ಅವುಗಳಲ್ಲಿ ಅಪರಾವಿದ್ಯೆ – ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು, ಮತ್ತು ಜ್ಯೋತಿಸ್ಯ; ಈಗ ಪರಾವಿದ್ಯೆ – ಯಾವುದರಿಂದ ಆ ಅಕ್ಷರವು ಹೊಂದಲ್ಪಡುವುದೋ ಅದು ಪರಾವಿದ್ಯೆ.

*– ಮುಂಡಕೋಪನಿಷತ್, ೧.೪-೫*



# ಆಧ್ಯಾತ್ಮಿಕ ಸಾಧನೆ ಮತ್ತು ವಿದ್ಯಾರಣ್ಯರ ಜೀವನ್ಮುಕ್ತಿವಿವೇಕ

**ಸ್ವಾಮಿ ಹರ್ಷಾನಂದ**

**ವಿದ್ಯಾರಣ್ಯರ 'ಜೀವನ್ಮುಕ್ತಿವಿವೇಕ'ವು ಸಂನ್ಯಾಸ ಪರಂಪರೆ, ಅದ್ವೈತ ದರ್ಶನ, ಯೋಗಸಾಧನೆ ಈ ಎಲ್ಲ ವಿಷಯಗಳನ್ನು ಕುರಿತು ವಿಸ್ತಾರ ನಿರೂಪಣೆಯನ್ನು ಹೊಂದಿದ ಒಂದು ಆಧಿಕಾರಿಕ ಗ್ರಂಥವಾಗಿದೆ. ಈ ಕೃತಿಯನ್ನು ಈಗಾಗಲೇ ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಿರುವ ಪರಮಪೂಜ್ಯ ಸ್ವಾಮೀಜಿಯವರು ಇಲ್ಲಿ ಅದರ ಸಂಕ್ಷಿಪ್ತ ಪರಿಚಯವನ್ನು ನೀಡಿದ್ದಾರೆ. ಪ್ರಸ್ತುತ ಅವರು ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರು. ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಅಪಾರ ವಿದ್ವತ್ತನ್ನು ಹೊಂದಿರುವ ಸ್ವಾಮೀಜಿಯವರ ಹಲವಾರು ಪುಸ್ತಕಗಳು ಅತ್ಯಂತ ಪ್ರಸಿದ್ಧವಾಗಿವೆ. ಇವರು ಉತ್ತಮ ವಾಗ್ಮಿಗಳು ಮತ್ತು ಸಂಗೀತಗಾರರು ಕೂಡ ಹೌದು.**

### ಪ್ರಸ್ತಾವನೆ:

''ಮಾನವಜೀವನದ, ಜನ್ಮದ, ಮುಖ್ಯ ಉದ್ದಿಶ್ಯವೇನು?'' – ಎಂಬ 'ಸರಳ–ಜಟಿಲ' ಪ್ರಶ್ನೆಗೆ ಭಗವಾನ್ ಶ್ರೀರಾಮಕೃಷ್ಣ ಪರಮಹಂಸರು ''ಈಶ್ವರ್‌ಲಾಭ್'' ಎಂದು ಒಂದೇ ಪದದಲ್ಲಿ ಘೋಷಿಸಿದ್ದಾರೆ! ಅದನ್ನೇ ವೇದಾಂತ ಪರಿಭಾಷೆಯಲ್ಲಿ ಹೇಳುವುದಾದರೆ ''ಮುಕ್ತಿ, ಮೋಕ್ಷ'' ಎನ್ನಬಹುದು.

ನಮ್ಮೆಲ್ಲರ ಹೃದಯದಲ್ಲಿ ಶಾಶ್ವತವಾಗಿ ನೆಲೆಸಿರುವ ಈಶ್ವರನನ್ನು *(ಗೀತಾ ೧೮:೬೧)* ಸಾಕ್ಷಾತ್ಕರಿಸಿಕೊಂಡರೆ ಈ ಮುಕ್ತಿಯು ಸಿದ್ಧಿಸುವುದು.

ಮುಕ್ತಿ ಎಂದರೆ ಬಿಡುಗಡೆ, ಅನಾದಿಕಾಲದಿಂದ ಅವ್ಯಾಹತವಾಗಿ ಬಂದಿರುವ ಜನನ–ಮರಣಗಳ ಚಕ್ರದಿಂದ ಬಿಡುಗಡೆ.

ಜನನ, ಜನ್ಮ ಎಂದಕೂಡಲೇ ಬರುವುದು ದೇಹಾತ್ಮಭಾವ, ದೇಹವೇ ನಾನು ಎಂಬ ಭಾವ. ಎಂದ ಮೇಲೆ, ಅದರ ನೋವು ನಲಿವುಗಳೇ ನಮ್ಮ ನೋವುನಲಿವುಗಳು. ಆದರೆ ಜೀವನದಲ್ಲಿ ನೋವೇ ಬಹುಪಾಲು, ನಲಿವಿನ ಸಂದರ್ಭಗಳು ಅತ್ಯಲ್ಪ!

ನಿಜವಾಗಿ ನಾವು ಜೀವಿಸಿರುವುದು ಈ ದೇಹದ ಮಹಿಮೆಯಿಂದಲ್ಲ, ಅದರೊಳಗಿದ್ದುಕೊಂಡು – ವಿದ್ಯುಚ್ಛಕ್ತಿಯಿಂದ ದೀಪವು ಬೆಳಗುವಂತೆ – ಅದಕ್ಕೆ ಚೈತನ್ಯ ತುಂಬುತ್ತಿರುವ ಆತ್ಮವಸ್ತುವಿನಿಂದ. ಈ ಆತ್ಮನು ಈಶ್ವರನ ಅಂಶವೆಂದೋ ಪ್ರತಿಬಿಂಬವೆಂದೋ ಶಾಸ್ತ್ರಗಳು ಸಾರುತ್ತಿವೆ *(ಗೀತಾ ೧೫.೭; ಮುಂಡಕೋಪನಿಷತ್ ೨.೧.೧; ಕಠೋಪನಿಷತ್ ೫.೯,೧೦)*; ಮತ್ತು ಅವನು ನಮ್ಮ ಹೃದಯದಲ್ಲಿಯೇ ಸದಾ ಇರುತ್ತಾನೆ ಎನ್ನುತ್ತವೆ *(ಕಠೋಪನಿಷತ್ ೪.೭,೧೨; ಶ್ವೇತಾಶ್ವತರೋಪನಿಷತ್ ೩.೧೩)*.

ಹಾಗೆ ನಮ್ಮೊಳಗೇ ಇದ್ದರೂ ನಮ್ಮ ನಿಜಸ್ವರೂಪವೇ ಆಗಿದ್ದರೂ ಅದೇಕೆ ನಮ್ಮ ಅನುಭವಕ್ಕೆ ಬರುತ್ತಿಲ್ಲ?

ಲಾಟೀನಿನ ಬತ್ತಿಯು ಉಜ್ಜ್ವಲವಾಗಿ ಉರಿಯುತ್ತಿದ್ದರೂ ಅದರ ಚಿಮಣಿಯು ಮಸಿಯಿಂದ ಕಪ್ಪಾಗಿದ್ದರೆ ಬೆಳಕು ಆಚೆಗೆ ಬರುವುದಿಲ್ಲ; ಬಂದರೂ ಅಲ್ಪಪ್ರಮಾಣದಲ್ಲಿ ಬರುತ್ತದೆಯಷ್ಟೆ. ಹಾಗೆಯೇ ನಮ್ಮ ಮನಸ್ಸು – ಯಾವುದರ ಮೂಲಕವೇ ನಮಗೆ ಆತ್ಮಾನುಭವ ಬರುತ್ತದೆಯೋ *(ಕಠೋಪನಿಷತ್ ೩.೧೨; ೪.೧೧)* ಆ ಮನಸ್ಸು – ಅರಿಷಡ್ವರ್ಗದಿಂದ ಮಲಿನವಾಗಿರುವ ಕಾರಣ ಈ ಆತ್ಮನ ಅಭಿವ್ಯಕ್ತಿಗೆ ಅಡ್ಡಿಯನ್ನುಂಟುಮಾಡುತ್ತಿದೆ.

ಎಂದಮೇಲೆ ನಾವು ಬದುಕಿರುವಾಗಲೇ ಈ ಮನಸ್ಸನ್ನು ಎಲ್ಲ ರೀತಿಯಿಂದಲೂ ನಿಗ್ರಹಿಸಿ ಪರಿಶುದ್ಧಮಾಡಿ ಆತ್ಮಾನುಭವ ಪಡೆಯುವುದರ ಮೂಲಕ ಮುಕ್ತಿಯನ್ನು ಪಡೆಯಬೇಕು. ಇದನ್ನೇ ಜೀವನ್ಮುಕ್ತಿಯೆನ್ನುತ್ತಾರೆ.

ಈ ಅದ್ಭುತ ಗ್ರಂಥವು ಇದನ್ನು ಪಡೆಯುವ ಸಾಧನೆಯ ಬಗ್ಗೆ ಬಹು ವಿಸ್ತಾರವಾಗಿ ವರ್ಣಿಸಿರುತ್ತದೆ. ಅದರ ಸಾರವನ್ನೀಯಲು – ಕರಿಯನ್ನು ಕನ್ನಡಿಯಲ್ಲಿ ಅಡಗಿಸುವಂತೆ – ಪ್ರಯತ್ನಿಸೋಣ.

### ಜೀವನ್ಮುಕ್ತಿಗೆ ಪ್ರಮಾಣಗಳು

ಶಂಕರ ಭಗವತ್ಪಾದರು ತಮ್ಮ ಗೀತಾಭಾಷ್ಯದ ಪ್ರಾರಂಭದಲ್ಲಿ ಮುಕ್ತಿಯನ್ನು ಪಡೆಯಲು **ಪ್ರವೃತ್ತಿಮಾರ್ಗ** ಮತ್ತು **ನಿವೃತ್ತಿ ಮಾರ್ಗ** ಎಂಬ ಎರಡು ಪಥಗಳನ್ನು ನಿರ್ದೇಶಿಸಿರುತ್ತಾರೆ. ಮೊದಲನೆಯದು ಕರ್ಮಮಾರ್ಗ, ಗೃಹಸ್ಥರ ಸಾಧನಾ ಪಥ. ಎರಡನೆಯದು ಜ್ಞಾನಮಾರ್ಗ, ಅಥವಾ ಸಂನ್ಯಾಸಿಗಳ ಪಥ. ಎರಡರ ಗುರಿಯೂ

ಒಂದೇ ಆದರೂ – ಮೋಕ್ಷ ಅಥವಾ ಮುಕ್ತಿ – ಎರಡನೆಯದು ಕ್ಷಿಪ್ರಫಲದಾಯಕವಾದ ನೇರವಾದ ಮಾರ್ಗ. ಆದುದರಿಂದಲೇ ವಿದ್ಯಾರಣ್ಯರು ಈ ಗ್ರಂಥದಲ್ಲಿ ಸಂನ್ಯಾಸವನ್ನೇ ಅತ್ಯಂತ ಪ್ರಮುಖವಾಗಿ ಆರಿಸಿಕೊಂಡಿರುತ್ತಾರೆ.

ಅವರ ಪ್ರಕಾರ – ಅಥವಾ ಶಾಂಕರಮತಾನುಸಾರವಾಗಿ – ಮುಕ್ತಿಗೆ ಜ್ಞಾನವೇ ಮುಖ್ಯ ಸಾಧನೆ. ಜ್ಞಾನಮಾರ್ಗವು ಸರ್ವ ಕರ್ಮ ಸಂನ್ಯಾಸದಿಂದಲೇ ಸಾಧ್ಯ ಮತ್ತು ಅದು ಸಾಂಪ್ರದಾಯಿಕ ಸಂನ್ಯಾಸದೀಕ್ಷೆಯನ್ನು ಅಪೇಕ್ಷಿಸುತ್ತದೆ ಎನ್ನಬಹುದು.

ಸಂನ್ಯಾಸವು ಎರಡು ವಿಧ: ವಿವಿದಿಷಾಸಂನ್ಯಾಸ ಮತ್ತು ವಿದ್ವತ್ಸಂನ್ಯಾಸ.

ಮೊದಲನೆಯದು ಮುಕ್ತಿಯನ್ನು ಪಡೆಯಲು ಬಯಸಿ ಸ್ವೇಚ್ಛೆಯಿಂದ ಸ್ವೀಕರಿಸುವ, ಸಾಧನಾಪ್ರಧಾನವಾದ ಮಾರ್ಗ. ಕಾವಿವಸ್ತ್ರಧಾರಣೆ, ದಂಡ–ಕಮಂಡಲುಗಳ ಪರಿಗ್ರಹ, ಭಿಕ್ಷಾಟನೆ, ಪರಿವ್ರಜನ ಮುಂತಾದುವು ಇದರ ಲಕ್ಷಣಗಳು.




ಎರಡನೆಯದು ಜ್ಞಾನವನ್ನು, ಆದುದರಿಂದಲೇ (ಜೀವನ್)ಮುಕ್ತಿಯನ್ನು, ಪಡೆದ ಮೇಲೆ ಆ ವಿದ್ವಾಂಸನು, ಜ್ಞಾನಿಯು, ಸಹಜವಾಗಿಯೇ ಪ್ರಪಂಚವನ್ನು ತ್ಯಾಗ ಮಾಡುವ ಲಕ್ಷಣವುಳ್ಳದ್ದು. ಗ್ರಂಥವು ಎರಡನ್ನೂ ವಿವರಿಸುತ್ತದೆ.

ಇಂತಹ ಜೀವನ್ಮುಕ್ತನನ್ನು ಶಾಸ್ತ್ರಗಳು ಸ್ಥಿತಪ್ರಜ್ಞ, ಭಕ್ತ, ಗುಣಾತೀತ, ಬ್ರಾಹ್ಮಣ, ಅತಿವರ್ಣಾಶ್ರಮಿ ಎಂಬ ಹಲವು ನಾಮಗಳಿಂದ ಕರೆದಿವೆ.

ಈ ಹೆಸರುಗಳೇ ಜೀವನ್ಮುಕ್ತನ ಲಕ್ಷಣಗಳನ್ನು ವಿವರಿಸುತ್ತವೆ. ಜೀವನದಲ್ಲಿ ಬರುವ ಸುಖದುಃಖಾದಿ ಎಲ್ಲ ರೀತಿಯ ಅನುಭವ ಗಳಲ್ಲೂ ಮನಸ್ಸನ್ನು ಹಿಗ್ಗಲು ಕುಗ್ಗಲು ಬಿಡದೆ ಸಾಮಾನ್ಯಸ್ಥಿತಿ ಯಲ್ಲಿಡಬಲ್ಲವನೇ ಸ್ಥಿತಪ್ರಜ್ಞ *(ಗೀತಾ ೨.೫೪–೭೨).*

ಭಗವಂತನಲ್ಲಿ ತನ್ನನ್ನು ಪೂರ್ಣವಾಗಿ ಸಮರ್ಪಿಸಿಕೊಂಡಿರುವವನೇ ಭಕ್ತ. ಅವನು ರಾಗದ್ವೇಷಾದಿಗಳನ್ನು ಮೀರಿದವನು, ಆದುದರಿಂದಲೇ ಸಂತೃಪ್ತನು, ಎಲ್ಲರಿಗೂ ಮಿತ್ರನು. ಅವನಿಂದ ಇತರರಿಗೆ ಅಥವಾ ಇತರರಿಂದ ಅವನಿಗೆ ಎಂದಿಗೂ ಉದ್ವೇಗವುಂಟಾಗದು. ಹಾಗಾಗಿ ಪರಮಾತ್ಮನಿಗೆ ಸದಾ ಪ್ರಿಯನು *(ಗೀತಾ ೧೨.೧೩–೧೯).*

ತ್ರಿಗುಣಗಳ ಪ್ರಭಾವವನ್ನು ಮೀರಿ ನಿಂತು ಸಮತ್ವಬುದ್ಧಿಯಿಂದ ಕೂಡಿ ಭಗವಂತನನ್ನು ಸೇವಿಸುವವನೇ ಗುಣಾತೀತ *(ಗೀತಾ ೧೪.೨೨–೨೬).*

ಇನ್ನು ಬ್ರಾಹ್ಮಣನ ವರ್ಣನೆ. ಬ್ರಹ್ಮವನ್ನರಿತಿರುವವನೇ ಬ್ರಾಹ್ಮಣ. ಒಂದು ಕಡೆ ಅತ್ಯಂತ ತೀವ್ರ ವೈರಾಗ್ಯ, ಆಶಾರಾಹಿತ್ಯ. ಆದುದರಿಂದಲೇ ಸರ್ವಕರ್ಮಪರಿತ್ಯಾಗಿ. ಸದಾ ಏಕಾಂತವನ್ನು ಬಯಸುವವನು *(ಮಹಾಭಾರತ–ಶಾಂತಿಪರ್ವ).*

ಕಡೆಯದಾಗಿ ಅತಿವರ್ಣಾಶ್ರಮಿ. ವರ್ಣಾಶ್ರಮಧರ್ಮಗಳನ್ನು ಮೀರಿಹೋಗಿರುವ ಇವನ ವರ್ಣನೆಯನ್ನು ಸೂತಸಂಹಿತೆಯೆಂಬ ಗ್ರಂಥದಲ್ಲಿ ಕಾಣಬಹುದು. ಆ ಕಾರಣದಿಂದಲೇ ಅವನು ಎಲ್ಲರಿಗೂ ಗುರು. ಅವನಿಗೆ ತಾನು ದೇಹೇಂದ್ರಿಯಗಳನ್ನು ಮೀರಿರುವ ಆತ್ಮವಸ್ತುವೆಂಬ, ಸರ್ವಜಗತ್ತಿಗೂ ಸಾಕ್ಷಿಯಾಗಿರುವ ಚೈತನ್ಯವೆಂಬ ಅರಿವು ಸದಾ ಇರುತ್ತದೆ. ವೇದ–ವೇದಾಂತಗಳಲ್ಲಿ ಉಕ್ತವಾಗಿರುವುದೆಲ್ಲವೂ ಅನುಭವಕ್ಕೆ ಬಂದಿರುತ್ತದೆ.

ಇದರಿಂದ ಇಷ್ಟನ್ನು ಅರಿಯಬಹುದು: ಜೀವನ್ಮುಕ್ತಿ ಎಂಬ ವಿಶೇಷ ಅವಸ್ಥೆ ಅಥವಾ ಶಾಶ್ವತ ಅನುಭವ ಇದೆ. ಅಂತಹ ಜನರನೇಕರು ಜಗತ್ತಿಗೆ ಬಂದು ಆದರ್ಶವನ್ನಿತ್ತು ಹೋಗಿದ್ದಾರೆ. ಅವರ ನಡೆನುಡಿಗಳನ್ನೇ ಸಾಧನೆಯಾಗಿ ಅನುಸರಿಸಿದರೆ ನಾವೂ ಅವರಂತೆಯೇ ಜೀವನ್ಮುಕ್ತರಾಗಬಹುದು.

ಮುಕ್ತಿಯು ಎರಡು ವಿಧವೆಂದು – ಜೀವನ್ಮುಕ್ತಿ ಮತ್ತು ವಿದೇಹ ಮುಕ್ತಿ – ಕೆಲವು ವೇದಾಂತಿಗಳ ಮತ. ಆತ್ಮಜ್ಞಾನವಾದ ಮೇಲೂ ಸ್ವಲ್ಪಕಾಲ ಪ್ರಾರಬ್ಧಕರ್ಮದ ಫಲವಾಗಿ ಶರೀರವಿದ್ದರೆ ಅದು ಜೀವನ್ಮುಕ್ತಿ. ಶರೀರಪಾತವಾದ ಮೇಲೆ ಆಗುವ ಮುಕ್ತಿಯೇ ವಿದೇಹ ಮುಕ್ತಿ.

ಆದರೆ ವಿದ್ಯಾರಣ್ಯರು ಜ್ಞಾನಸಮಕಾಲದಲ್ಲಿಯೇ ಮುಕ್ತಿಯಾಗುವುದೆಂದೂ, ಮುಂದೆ ದೇಹಧಾರಣೆಯಿಲ್ಲವಾದುದರಿಂದ ಜೀವನ್ಮುಕ್ತಿಯನ್ನೇ ವಿದೇಹ ಮುಕ್ತಿಯೆಂದು ಭಾವಿಸಬೇಕೆಂದೂ ಅಭಿಪ್ರಾಯಪಟ್ಟಿದ್ದಾರೆ.

### ಜೀವನ್ಮುಕ್ತಿಯ ಸಾಧನೆಗಳು

ಜೀವನ್ಮುಕ್ತಿಯನ್ನು ಪಡೆಯಲು ಮತ್ತು ಅದನ್ನು ರಕ್ಷಿಸಲು ವಿದ್ಯಾರಣ್ಯರು ಮೂರು ಮುಖ್ಯ ಸಾಧನಗಳನ್ನು ವಿವರಿಸುತ್ತಾರೆ: ತತ್ತ್ವಜ್ಞಾನ, ವಾಸನಾಕ್ಷಯ ಮತ್ತು ಮನೋನಾಶ.

ಹಾಗೆಯೇ ಅವುಗಳ ಮೂರು ದ್ವಂದ್ವಗಳನ್ನೂ ವಿವರಿಸುತ್ತಾರೆ.

ತತ್ತ್ವಜ್ಞಾನ–ವಾಸನಾಕ್ಷಯ; ವಾಸನಾಕ್ಷಯ–ಮನೋನಾಶ; ಮನೋನಾಶ–ತತ್ತ್ವಜ್ಞಾನ – ಇವೇ ಆ ಮೂರು ದ್ವಂದ್ವಗಳು.

ತತ್ತ್ವಜ್ಞಾನವೆಂದರೆ ಇದೆಲ್ಲವೂ ಆತ್ಮವಸ್ತುವೇ. ಪಂಚೇಂದ್ರಿಯಗಳ ಅನುಭವಕ್ಕೆ ಬರುತ್ತಿರುವ ರೂಪ–ರಸಾದಿ ಜಗತ್ತು ಮಾಯಾಮಯ (ಕೇವಲ ತೋರ್ಕೆ); ಇದು ನಿಜವಾಗಿ ಇಲ್ಲ ಎಂಬ ದೃಢನಿಶ್ಚಯ. ಇದು ಶಾಸ್ತ್ರ–ಆಚಾರ್ಯರ ಉಪದೇಶ




ದಿಂದಲೂ ತರ್ಕಪೂರ್ಣ ಮನನದಿಂದಲೂ ಬರುವಂಥದ್ದು.

ವಾಸನಾ ಎಂದರೆ ಪೂರ್ವಾಪರ ವಿಮರ್ಶೆಯಿಲ್ಲದೆ, ಇದ್ದಕ್ಕಿದ್ದಂತೆಯೆ ಮನಸ್ಸಿನಲ್ಲಿ ಏಳುವ, ಕ್ರೋಧವೇ ಮೊದಲಾದ ಅವಗುಣಗಳಿಗೆ ಕಾರಣವಾದ, ಚಿತ್ತ ಸಂಸ್ಕಾರ. ಇದಕ್ಕೆ ಮುಖ್ಯವಾಗಿ ಹಿಂದಿನ ಜನ್ಮಗಳಲ್ಲಿ ಪದೇಪದೇ ಮಾಡಿದ್ದ ಮತ್ತು ಅನುಭವಿಸಿದ್ದ ಕರ್ಮಗಳೇ ಕಾರಣ.

ಮನೋನಾಶವೆಂದರೆ ಮನಸ್ಸಿನ ನಾಶವಲ್ಲ! ಸದಾ ವೃತ್ತಿರೂಪದಲ್ಲಿ ಏಳುತ್ತಿರುವ ಮನಸ್ಸಿನಲ್ಲಿ ಆ ವೃತ್ತಿಗಳನ್ನು ಪೂರ್ಣವಾಗಿ ನಿರೋಧಿಸಿದಾಗ ಉಂಟಾಗುವ ಶಾಂತ ಅವಸ್ಥೆ.

ಸಾಧಕನು ಇದನ್ನು ಬೇರೆಬೇರೆಯಾಗಿ ಅಭ್ಯಾಸ ಮಾಡಿದರೆ ಪ್ರಯೋಜನವಿಲ್ಲ. ಹಿಂದೆ ಸೂಚಿಸಿದ ದ್ವಂದ್ವದ ರೂಪದಲ್ಲಿಯೇ ಅಭ್ಯಸಿಸಬೇಕು.

ಅದು ಹೇಗೆಂದರೆ: –

ತತ್ತ್ವಜ್ಞಾನವಿಲ್ಲದಿದ್ದಾಗ ಜಗತ್ತು ನಿಜವಾಗಿ ಕಾಣುತ್ತದೆ. ಇಂದ್ರಿಯ-ವಿಷಯ-ಸಂಯೋಗದಿಂದ ಇದು ಮನಸ್ಸಿನಲ್ಲಿ ಅನುಭವಕ್ಕೆ ಬರುತ್ತಿರಲು 'ಈ ಜಗತ್ತಿನಲ್ಲಿ ಏನೂ ಇಲ್ಲ, ಇದು ಮಾಯೆ, ಬ್ರಹ್ಮವೊಂದೇ ಸತ್ಯ'ವೆಂಬ ನಿಶ್ಚಯ ಬರಲು ಸಾಧ್ಯವಿಲ್ಲ. ಎಂದಮೇಲೆ ಮನೋನಾಶವೂ ಇಲ್ಲ.

ವಾಸನಾಕ್ಷಯವಾಗದಿದ್ದಾಗ, ಪುನರ್ಜನ್ಮದ ಸಂಸ್ಕಾರದಿಂದ ಕ್ರೋಧಾದಿಗಳು ಎದ್ದುಕೊಳ್ಳಬಹುದು. ಅಂತಹ ಮನಸ್ಸಿನಲ್ಲಿ ತತ್ತ್ವಜ್ಞಾನವು ಉದಯಿಸಲು ಸಾಧ್ಯವೇ ಇಲ್ಲ; ಏಕೆಂದರೆ ಶಮಾದಿಗುಣಗಳಿದ್ದರೆ ಮಾತ್ರ ಅದು ಉಂಟಾಗಲು ಸಾಧ್ಯ. ಹಾಗೆಯೇ ತತ್ತ್ವಜ್ಞಾನದ ಅಭಾವದಿಂದ ಜಗತ್ತು ನಿಜವೆಂದು ಭಾವಿಸಿ, ಕ್ರೋಧಾದಿಗಳು ಮನಸ್ಸಿನಲ್ಲಿ ಏಳುವುದಕ್ಕೆ ಅವಕಾಶವಾಗಿ, ವಾಸನಾಕ್ಷಯವಾಗುವುದೇ ಇಲ್ಲ.

ಅದೇ ರೀತಿ ಮನೋನಾಶವಿಲ್ಲದಿದ್ದಾಗ, ಕ್ರೋಧಾದಿ ವೃತ್ತಿಗಳು ಸದಾ ಏಳುತ್ತಲೇ ಇರುವುದರಿಂದ ವಾಸನೆಗಳು ಬಲಿಷ್ಠವಾಗುತ್ತಾ ಹೋಗುತ್ತವೆ. ಹೀಗೆ ವೃತ್ತಿಗಳು ಎದ್ದುಕೊಳ್ಳುತ್ತಿರುವವರೆಗೆ ಮನೋನಾಶವೂ ಅಸಾಧ್ಯ.

### ವಾಸನಾಕ್ಷಯದ ವಿವರಣೆ

ವಾಸನಾಕ್ಷಯದ ಸಾಧನೆಯನ್ನು ಅರಿಯುವ ಮೊದಲು ಅದರ, ಎಂದರೆ ವಾಸನೆಯ ಸ್ವರೂಪವನ್ನರಿಯಬೇಕು.

ವಾಸನೆಯು **ಶುದ್ಧ** ಮತ್ತು **ಮಲಿನ** ಎಂದು ಎರಡು ವಿಧ.

ಆತ್ಮಸಾಕ್ಷಾತ್ಕಾರವಾದ ಮೇಲೆ ಶರೀರವಿರುವವರೆಗೂ ಸುಟ್ಟ ಬೀಜದಂತೆ ಫಲ ಕೊಡದೆ ಇರುವ ಸಂಸ್ಕಾರವೇ **ಶುದ್ಧವಾಸನಾ.**

**ಮಲಿನವಾಸನೆ**ಯು ಮೂರು ವಿಧ: ಲೋಕವಾಸನೆ, ಶಾಸ್ತ್ರವಾಸನೆ ಮತ್ತು ದೇಹವಾಸನೆ.

ಲೋಕದ ಜನರು ತನ್ನನ್ನು ನಿಂದಿಸದೆ ಸದಾ ಹೊಗಳಬೇಕು ಎಂಬ ಆಸೆಯೇ ಲೋಕವಾಸನೆ. ಆದರೆ ಇದು ಅಸಾಧ್ಯ.

ಅನೇಕ ಶಾಸ್ತ್ರಗಳನ್ನು ಕಲಿಯಲು ಇರುವ ಗೀಳು ಮತ್ತು ಶಾಸ್ತ್ರೀಯ ಕರ್ಮಗಳನ್ನು ಸದಾ ಅನುಷ್ಠಾನ ಮಾಡುವುದು – ಇದೇ ಶಾಸ್ತ್ರವಾಸನೆ. ಆದರೆ ಇದಕ್ಕೆ ಮಿತಿಯೇ ಇಲ್ಲ.

ದೇಹವೇ ತಾನೆಂದು ಭ್ರಮಿಸಿ ಅದನ್ನು ಸದಾ ಶುಚಿಯಾಗಿ ನೀರೋಗವಾಗಿ ಮತ್ತು ಸುಂದರವಾಗಿ ಇಡಬೇಕು ಎಂಬ ಹಂಬಲವೇ ದೇಹವಾಸನೆ. ನವದ್ವಾರಗಳಿಂದಲೂ ದುರ್ಗಂಧ ವಸ್ತುವನ್ನು ಸುರಿಸುತ್ತಿರುವ ಈ ದೇಹವನ್ನು ಹಾಗಿಡಲು ಸಾಧ್ಯವೇ ಇಲ್ಲ.

ವಾಸನೆಗಳು ನೆಲೆಸಿರುವುದು ಮನಸ್ಸಿನಲ್ಲಿ. ಮನಸ್ಸು ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರು ಗುಣಗಳಿಂದ ಆಗಿದೆ. ಅದರಲ್ಲೂ ಸತ್ತ್ವದ ಪ್ರಭಾವ ಹೆಚ್ಚು. ವೇದಾಂತದಲ್ಲಿ ಹೇಳಿರುವ ವಿವೇಕ, ವೈರಾಗ್ಯ ಮೊದಲಾದ ಸಾಧನೆಗಳಿಂದ ರಜಸ್ಸು – ತಮಸ್ಸುಗಳ ಪ್ರಭಾವ ತುಂಬಾ ಕಡಮೆಯಾದಾಗ ವಾಸನಾಕ್ಷಯವು ಸುಲಭವಾಗಿ ಆಗುತ್ತದೆ.

### ಮನೋನಾಶದ ವಿವರಣೆ

ಮನೋನಾಶವೆಂದರೆ ಮನಸ್ಸಿನ ನಿಗ್ರಹ. ಇದು ಹಠನಿಗ್ರಹ ಮತ್ತು ಕ್ರಮನಿಗ್ರಹ ಎಂದು ಎರಡು ಬಗೆ.

ಇಂದ್ರಿಯಗಳ ಬಾಹ್ಯಕೇಂದ್ರಗಳನ್ನು ನಿಗ್ರಹಿಸುವುದೇ ಹಠನಿಗ್ರಹ. ಇದರಿಂದ ಮನೋನಿಗ್ರಹ ಸಾಧ್ಯವಾಗದು.

ಅಧ್ಯಾತ್ಮವಿದ್ಯೆಯ ಸಾಧನೆಗಳ ಸಹಾಯದಿಂದ ಮನಸ್ಸನ್ನು ನಿಗ್ರಹಿಸುವುದೇ ಕ್ರಮನಿಗ್ರಹ. ಇದು ಹೆಚ್ಚು ಸುಲಭ. ಮನಸ್ಸಿಗೆ ಗೋಚರವಾಗುವ ದೃಶ್ಯವಸ್ತುಗಳ ಪ್ರಯೋಜನ-ಅಭಾವವೂ ದೃಗ್ವಸ್ತುವಿನ (ಆತ್ಮದ) ಅಗೋಚರತ್ವವೂ ತಿಳಿದಾಗ ಅದು ಸೌದೆಯಿಲ್ಲದ ಬೆಂಕಿಯಂತೆ ಶಾಂತವಾಗುತ್ತದೆ. ಮನದಲ್ಲಿ ಏಳುವ ವೃತ್ತಿಗಳ ನಿರೋಧಕ್ಕೆ ಅಷ್ಟಾಂಗಯೋಗವು ಸಹಕಾರಿ.

### ಸ್ವರೂಪಸಿದ್ಧಿಯ ಅಥವಾ ಜೀವನ್ಮುಕ್ತಿಯ ಪ್ರಯೋಜನ

ಮಾನವಜನ್ಮದ ಮುಖ್ಯ ಉದ್ದಿಶ್ಯ ಮುಕ್ತಿಯನ್ನು ಪಡೆಯುವುದು. ಜೀವಿಸಿರುವಾಗಲೇ ಅದನ್ನು ಪಡೆಯಬಹುದು. ಆಗ ಅದು ಜೀವನ್ಮುಕ್ತಿ ಎನ್ನಿಸಿಕೊಳ್ಳುತ್ತದೆ. ಅಂತಹ ಜೀವನ್ಮುಕ್ತಿಯನ್ನು ಪಡೆಯಬೇಕಾದರೆ ಸಾಧನೆ ಮಾಡಬೇಕು.

ಇದನ್ನೆಲ್ಲ ವಿವರಿಸಿಯಾದಮೇಲೆ ಈಗ ಅದರಿಂದಾಗುವ ಪ್ರಯೋಜನವನ್ನು ವರ್ಣಿಸುತ್ತಾರೆ. ಇಂತಹ ವಿವರಣೆಯು ಸಾಧಕರಿಗೆ ಉತ್ತೇಜನ ಕೊಡುವುದಲ್ಲದೆ ಸಿದ್ಧರಿಗೂ ಬೇಕಾಗಿರುವ ಕೆಲವು ಉಪಯುಕ್ತ ಸಲಹೆಗಳನ್ನು ನೀಡುವುದಕ್ಕಾಗಿಯೇ ಈ ಅಧ್ಯಾಯವು ಮೀಸಲಾಗಿದೆ.

ನಮ್ಮ ನಿಜಸ್ವರೂಪವಾದ ಆತ್ಮತತ್ತ್ವವನ್ನು ನೇರವಾಗಿ ಅನುಭವಕ್ಕೆ ತಂದುಕೊಂಡಾಗ ಅದನ್ನು ಸ್ವರೂಪಸಿದ್ಧಿಯೆಂತಲೂ ಅಥವಾ ಜೀವನ್ಮುಕ್ತಿಯೆಂತಲೂ ಕರೆಯಲಾಗುತ್ತದೆ. ಇದರಿಂದ ಜೀವನ್ಮುಕ್ತನಿಗೆ ಐದು ರೀತಿಯ ಪ್ರಯೋಜನವುಂಟಾಗುತ್ತದೆ.

ತತ್ತ್ವಜ್ಞಾನವು ಸರಿಯಾದ ಪ್ರಮಾಣಗಳಿಂದ ಉತ್ಪನ್ನವಾಗಿದ್ದರೂ ಸಂಶಯ-ವಿಪರ್ಯಯಗಳಿಂದ ಅದನ್ನು ಕಾಪಾಡಬೇಕಾಗುತ್ತದೆ. ಈ ಜ್ಞಾನದ ರಕ್ಷೆ ಜೀವನ್ಮುಕ್ತಿಯಿಂದ ದೊರಕುವ ಮೊದಲನೆಯ ಪ್ರಯೋಜನ.

ಜೀವನ್ಮುಕ್ತಿಯನ್ನು ಪಡೆಯಲು ಮಾಡುವ ಸಾಧನೆಯಲ್ಲಿ ವಿವಿಧ ಯೋಗಭೂಮಿಕೆಗಳು ಅಂತರ್ಗತವಾಗಿರುತ್ತವೆ. ಅವು ದೇವತ್ವವನ್ನು ಪಡೆಯುವ ಸಾಧನವಾಗಬಹುದು. ಇದನ್ನು ತಪಸ್ಸೆಂದು ಕರೆಯಬಹುದು. ಈ ತಪಸ್ಸು ಅನಾಯಾಸವಾಗಿ ಲಭಿಸುವುದು ಎರಡನೆಯ ಪ್ರಯೋಜನ.

ಸದಾ ಅಂತರ್ಮುಖಿಯಾಗಿರುವ ಯೋಗಿಯು ಎಂದಿಗೂ ಬಾಹ್ಯದಲ್ಲಿ ವಾದ-ನಿಂದೆಗಳಿಗೆ ಒಳಗಾಗನು. ಇದಕ್ಕೆ ವಿಸಂವಾದದ ಅಭಾವ ಎನ್ನುವರು. ಇದು ಮೂರನೆಯ ಪ್ರಯೋಜನ.

ಜೀವನ್ಮುಕ್ತನಾದ ಆತ್ಮಜ್ಞಾನಿಗೆ ಪಡೆಯಬೇಕಾದ ಯಾವ ವಸ್ತುವೂ ಇಲ್ಲದ್ದರಿಂದ ದುಃಖಕ್ಕೆ ಅವಕಾಶವಿಲ್ಲ ಮತ್ತು ಸದಾ ಸುಖದಲ್ಲಿ, ಆನಂದದಲ್ಲಿ, ಮುಳುಗಿರುತ್ತಾನೆ. ಇವು – ದುಃಖನಾಶ ಮತ್ತು ಸುಖದ ಅಭಿವ್ಯಕ್ತಿ – ಕಡೆಯ ಎರಡು ಪ್ರಯೋಜನಗಳು.

### ವಿದ್ವತ್ಸಂನ್ಯಾಸ

ಇದು ಗ್ರಂಥದ ಅಂತಿಮ ಅಧ್ಯಾಯದಲ್ಲಿ ಬರುವ ವಿಷಯ.

ಶುಕ್ಲಯಜುರ್ವೇದಕ್ಕೆ ಸೇರಿರುವ ಪರಮಹಂಸೋಪನಿಷತ್ತು ಜೀವನ್ಮುಕ್ತಿಯಿಂದ ಸಹಜವಾಗಿಯೇ ಬರುವ ವಿದ್ವತ್ಸಂನ್ಯಾಸವನ್ನು ವಿವರಿಸಿರುತ್ತದೆ. ವಿದ್ಯಾರಣ್ಯರು ಇದರ ಮೇಲೆ ವಿಸ್ತಾರವಾಗಿ ವ್ಯಾಖ್ಯಾನ ಮಾಡುವುದರ ಮೂಲಕ ಹಲವು ಉಪಯುಕ್ತ ಆಧ್ಯಾತ್ಮಿಕ ಸಾಧನಗಳನ್ನು ಸಾಧಕರಿಗಾಗಿ ಕೊಟ್ಟಿರುತ್ತಾರೆ; ಏಕೆಂದರೆ ಸಿದ್ಧಪುರುಷನ ಸಹಜಗುಣಗಳೆಲ್ಲ ಸಾಧಕರಿಗೆ ಸಾಧನೆಗಳಾಗುತ್ತವೆ. ವಿವಿದಿಷಾಸಂನ್ಯಾಸದಿಂದ ಪ್ರಾರಂಭವಾದ ಈ ಗ್ರಂಥವು ವಿದ್ವತ್ಸಂನ್ಯಾಸದಲ್ಲಿ ಮುಕ್ತಾಯವಾಗಿರುವುದು ಉಚಿತವೇ ಸರಿ.

ಸಂನ್ಯಾಸಿಯು ಈ ಆರು ವಿಷಯಗಳನ್ನು – ಅವು ಬಂಧಕಾರಕವಾದುದರಿಂದ – ಬಿಡಬೇಕು: ಮಳೆಗಾಲದ ದಿನಗಳನ್ನು ಬಿಟ್ಟು ಮಿಕ್ಕ ದಿನಗಳಲ್ಲಿ ಒಂದೇ ಜಾಗದಲ್ಲಿ ಒಂದು ದಿನಕ್ಕಿಂತ ಹೆಚ್ಚು ನಿಲ್ಲಬಾರದು; ಹೆಚ್ಚು ಭಿಕ್ಷಾಪಾತ್ರೆಗಳನ್ನು ಸಂಗ್ರಹಿಸಬಾರದು; ಭವಿಷ್ಯದಲ್ಲಿ ಉಪಯೋಗಕ್ಕೆಂದು ಏನನ್ನೂ ಕೂಡಿಡಬಾರದು; ಶಿಷ್ಯರನ್ನು ಮಾಡಿಕೊಳ್ಳಬಾರದು; ಜ್ಞಾನಸಾಧನೆಯಲ್ಲಿ ಸದಾ ಎಚ್ಚರದಿಂದಿರಬೇಕು; ಆತ್ಮಜ್ಞಾನಕ್ಕೆ ಸಂನ್ಯಾಸಜೀವನಕ್ಕೆ ಸಂಬಂಧವಿಲ್ಲದ ಮಾತುಗಳನ್ನಾಡಬಾರದು.

ಇದಲ್ಲದೆ ಚಿನ್ನದಾಸೆಯನ್ನು ವಿಶೇಷವಾಗಿ ಕಟುವಾಗಿ ನಿಂದಿಸಿದೆ.

ಕಡೆಯದಾಗಿ – ಯಾವ ಪರಬ್ರಹ್ಮವಸ್ತುವನ್ನು ವೇದಾಂತ ಗ್ರಂಥಗಳು ವಿವರಿಸಿವೆಯೋ ಆ ಬ್ರಹ್ಮದಲ್ಲಿ ಸದಾ ನೆಲೆಸಿರುವ ಯೋಗಿಯು ಪರಮಹಂಸನೆಂದೂ ಕೃತಕೃತ್ಯನೆಂದೂ ಕರೆಯಲ್ಪಡುತ್ತಾನೆ. ಅವನಿಗೆ ಇನ್ನು ಮುಂದೆ ಮಾಡಬೇಕಾದ ಕರ್ತವ್ಯಗಳಾವುವೂ ಇರುವುದಿಲ್ಲ.

### ಮುಕ್ತಾಯ

ಹೀಗೆ ಆಧ್ಯಾತ್ಮಿಕ ಸಾಧನೆಯ – ಅದರಲ್ಲೂ ಜ್ಞಾನಮಾರ್ಗದ ಮತ್ತು ಸಂನ್ಯಾಸದ – ವಿಷಯದಲ್ಲಿ ಅತ್ಯುತ್ತಮ ಉಪಯುಕ್ತ ವಿಷಯಗಳನ್ನು ಒಳಗೊಂಡಿರುವ ಈ ಗ್ರಂಥರತ್ನವು ಸಾಧಕರಿಗೆ, ವಿಶೇಷವಾಗಿ ವಿವಿದಿಷಾಸಂನ್ಯಾಸಿಗಳಿಗೆ ಅತ್ಯಂತ ಪ್ರಿಯವಾಗಿರುವುದು ಸಹಜವೇ ಸರಿ.

ಪರಮಹಂಸರ ಸಾಕ್ಷಾತ್ ಶಿಷ್ಯರಲ್ಲಿ ತಮ್ಮ ಜ್ಞಾನಮಯ ತಪೋಮಯ ಜೀವನಕ್ಕಾಗಿ ಪ್ರಸಿದ್ಧರಾಗಿದ್ದ, ಪೂಜ್ಯರಾಗಿದ್ದ ಸ್ವಾಮಿ ತುರೀಯಾನಂದರಿಗೆ ಈ ಗ್ರಂಥವು ಅತ್ಯಂತವಾಗಿ ಹಿಡಿಸಿತ್ತು. ಆದುದರಿಂದಲೇ ಅವರು ಪ್ರತಿಯೊಬ್ಬ ಸಂನ್ಯಾಸಿಯೂ ಇದನ್ನು ತನ್ನ ಜೀವಮಾನದಲ್ಲಿ ಏಳು ಬಾರಿ ಅಧ್ಯಯನ ಮಾಡಬೇಕೆಂದು ಹೇಳಿರುತ್ತಾರೆ.



# ‘ಶ್ರೀರಾಮಕೃಷ್ಣ ವಚನವೇದ’
# ಆಧ್ಯಾತ್ಮಿಕ ಸಾಧನೆಯ ಮೂಲಗ್ರಂಥ

**ಸ್ವಾಮಿ ಮಂಗಳನಾಥಾನಂದ**

**ಶ್ರೀರಾಮಕೃಷ್ಣ ಪರಮಹಂಸರ ಶಿಷ್ಯರೇ ಆದ ‘ಮ’ ಅವರು ಪ್ರತಿದಿನವೂ ತನ್ನ ಗುರುವಿನಿಂದ ಕೇಳಿದ ಮಾತುಕತೆಗಳ ಮಹತ್ವವನ್ನರಿತು, ಮುಂದೆ ತನಗೆ ಉಪಯುಕ್ತವಾದೀತೆಂದು ಅವನ್ನೆಲ್ಲ ತಮ್ಮ ಡೈರಿಯಲ್ಲಿ ಬರೆದಿಟ್ಟುಕೊಂಡರು. ಮುಂದೆ ಅವನ್ನು ಪ್ರಕಟಿಸಿದಾಗ, ಅವು ಅವತಾರಪುರುಷನೊಬ್ಬನ ವಾಣಿಯೆಂದು ಪ್ರಸಿದ್ಧವಾಯಿತಲ್ಲದೆ, ವೇದಕ್ಕೆ ಸಮಾನವೆನಿಸಿಕೊಂಡಿತು. ಈ ಕೃತಿಯ ವೈಶಿಷ್ಟ್ಯವನ್ನು ವಿವರಿಸಿರುವ ಲೇಖಕರು ಉತ್ತಮ ವಾಗ್ಮಿಗಳೂ, ಭಜನೆ-ಕೀರ್ತನೆಗಳಲ್ಲಿ ನುರಿತವರೂ ಆಗಿದ್ದು, ಪ್ರಸ್ತುತ ಬೆಂಗಳೂರು ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಈಗಾಗಲೇ ಪ್ರಕಟವಾಗಿವೆ.**



**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾऽತ್ಮಾನಂ ಸೃಜಾಮ್ಯಹಮ್॥**

*(ಗೀತೆ, ೪.೭)*

ಈ ಸೃಷ್ಟಿಯಲ್ಲಿ ಭಗವಂತನು ಯುಗ ಯುಗದಲ್ಲೂ ಅವತರಿಸುತ್ತಾನೆ. ಯುಗಕ್ಕೆ ತಕ್ಕ ಅವತಾರ. ಅವತಾರದ ಕಾರ್ಯ ಮುಗಿದ ಮೇಲೆ ಆ ಭಗವಂತ ಭೂಮಿಯಿಂದ ನಿರ್ಗಮಿಸುತ್ತಾನೆ. ಆತನ ಜೀವನ-ಸಂದೇಶಗಳು ಜನಗಳ ಮನಗಳಲ್ಲಿ ಶಾಶ್ವತವಾಗಿ ನೆಲೆಸಿರುತ್ತದೆ. ಪರಂಪರೆಯಂತೆ ಮುಂದಿನ ಪೀಳಿಗೆಗೆ ಪ್ರವಹಿಸುತ್ತದೆ.

ಶ್ರೀರಾಮನ ಜೀವನ ಸಂದೇಶಗಳು ಇಂದಿಗೂ ರಾಮಾಯಣ ಮಹಾಕಾವ್ಯದಿಂದ ಪ್ರಚಲಿತವಾಗಿದೆ. ಭಾಗವತ-ಭಗವದ್ಗೀತೆಯ ಮೂಲಕ ಶ್ರೀಕೃಷ್ಣನ ವಾಣಿಗಳು ಅನುರಣಿತವಾಗಿದೆ. ಬೈಬಲ್ ಮೂಲಕ ಕ್ರಿಸ್ತನ ಕಥೆ, ಮತ್ತು ಜೀವನ ಮತ್ತು ಸಂದೇಶಗಳು ತಿಳಿಯಲ್ಪಡುತ್ತದೆ. ಹಾಗೆಯೇ ಈ ಯುಗದ ಅವತಾರ ವರಿಷ್ಠರಾದ ಶ್ರೀರಾಮಕೃಷ್ಣರ ಜೀವನ-ಸಂದೇಶಗಳು ನಮಗೆ **‘ಶ್ರೀರಾಮಕೃಷ್ಣ ವಚನವೇದ’** ದ ಮೂಲಕ ತಲುಪಿದೆ.

ಜಗತ್ತಿನ ಇತಿಹಾಸದಲ್ಲಿ **ಶ್ರೀರಾಮಕೃಷ್ಣ ವಚನವೇದವು** ಅವತಾರಪುರುಷನ ಮಾತುಗಳನ್ನು ನೇರವಾಗಿ, ಸಾಕ್ಷಾತ್ತಾಗಿ, ಯಥಾವತ್ತಾಗಿ ಅಂದೇ ಬರೆದುಕೊಂಡಂತಹ ಏಕೈಕ ಆಧ್ಯಾತ್ಮಿಕ ಗ್ರಂಥ. ಶ್ರೀರಾಮ, ಶ್ರೀಕೃಷ್ಣ, ಬುದ್ಧ, ಏಸುಕ್ರಿಸ್ತ, ಇವರುಗಳ ಸಂದೇಶಗಳು ನೇರವಾಗಿ ಬರೆಯಲ್ಪಡಲಿಲ್ಲ. ಬೈಬಲ್‌ನ New-Testament ಓದಿದರೆ ಇದು ತಿಳಿದುಬರುತ್ತದೆ. ಒಂದು ಘಟನೆಯನ್ನು ಅಥವಾ ಕಥೆಯನ್ನು ನಾಲ್ಕು ಶಿಷ್ಯರು – Mathew, Mark, Luke ಮತ್ತು John – ನಾಲ್ಕು ರೀತಿಯಲ್ಲಿ ಬರೆದಿದ್ದಾರೆ. ಇಡೀ **‘ವಚನವೇದ’**ವನ್ನು ಮಹೇಂದ್ರನಾಥ ಗುಪ್ತ ಅಥವಾ ಮಾಸ್ಟರ್ ಮಹಾಶಯ ಅಥವ ನೆಚ್ಚಿನ ‘ಮ’ ಬರೆದನು. ಮಾಸ್ಟರ್ ಮಹಾಶಯ ಶ್ರೀರಾಮಕೃಷ್ಣರನ್ನು ಭೇಟಿಯಾದ ದಿನಗಳನ್ನು ತನ್ನ ದಿನಚರಿಯಲ್ಲಿ (dairy) ಯಥಾವತ್ತಾಗಿ ತಾರೀಖು, ವಾರ, ನಕ್ಷತ್ರ ಮತ್ತು ಸಮಯದ ಸಮೇತವಾಗಿ ದಾಖಲಿಸಿದ್ದಾನೆ. ಇದನ್ನೇ ಮುಂದೆ ಆತ ಪುಸ್ತಕರೂಪದಲ್ಲಿ ಹೊರತಂದ. ಶ್ರೀರಾಮನ ಅವತಾರದಲ್ಲಿ ವಾಲ್ಮೀಕಿ ಇದ್ದಂತೆ, ಶ್ರೀಕೃಷ್ಣನ ಅವತಾರದಲ್ಲಿ ವ್ಯಾಸರಿದ್ದಂತೆ, ಶ್ರೀರಾಮಕೃಷ್ಣರ ಅವತಾರದಲ್ಲಿ ಮಹೇಂದ್ರನಾಥ ಗುಪ್ತನ ಪಾತ್ರ. ೧೯೦೨ ರಿಂದ ೧೯೩೨ ರ ವರೆಗೆ ಸುಮಾರು ಮೂವತ್ತು ವರ್ಷಗಳ ಪರಿಶ್ರಮದಿಂದ ಐದು ಸಂಪುಟ ಗಳಲ್ಲಿ (ಈಗ ಎರಡು) ಈ ಗ್ರಂಥ ಪ್ರಕಟವಾಯಿತು. ಐದನೇ ಸಂಪುಟವು ಪ್ರಕಟವಾಗುವ ಮುನ್ನವೇ ಮಾಸ್ಟರ್ ದೇಹತ್ಯಾಗ ಮಾಡಿದ್ದ. ಮೂಲ ಗ್ರಂಥವು ಬಂಗಾಳಿಯಲ್ಲಿ **‘ಶ್ರೀರಾಮಕೃಷ್ಣ ಕಥಾಮೃತ’** ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿದೆ. ಕನ್ನಡ ದಲ್ಲಿ **‘ಶ್ರೀರಾಮಕೃಷ್ಣ ವಚನವೇದ’** ಮತ್ತು ಆಂಗ್ಲ ಭಾಷೆಯಲ್ಲಿ ‘The Gospel of Sri Ramakrishna’ ಎಂದು ಅನುವಾದಿಸಲ್ಪಟ್ಟಿದೆ.

ಶ್ರೀರಾಮಕೃಷ್ಣರೇ ಮಹೇಂದ್ರನಿಗೆ ಒಮ್ಮೆ ಹೀಗೆ ಹೇಳುತ್ತಾರೆ. ‘‘ಭಗವತಿ ನನಗೆ ತಿಳಿಸಿದ್ದಾಳೆ, ನೀನು ಜಗತ್ತಿನಲ್ಲಿ ಅವಳ ಕೆಲಸ




ವನ್ನು ಸ್ವಲ್ಪ ಮಾಡಬೇಕಾಗುತ್ತದೆ. ನೀನು ಭಾಗವತವನ್ನು ಅಂದರೆ ಭಗವಂತನ ವಾಣಿಯನ್ನು ಲೋಕದ ಜನರಿಗೆ ತಿಳಿಸಬೇಕಾಗುತ್ತದೆ. ಭಗವಂತನು ಭಾಗವತ ಪಂಡಿತನನ್ನು ಜಗತ್ತಿಗೆ ಬಂಧಿಸಿರುತ್ತಾನೆ. ಏಕೆಂದರೆ ಈ ಅದ್ಭುತ ಗ್ರಂಥವನ್ನು ವರ್ಣಿಸಲು ಯಾರು ಉಳಿದಿರುತ್ತಾರೆ? ಬಹುಜನರ ಹಿತಕ್ಕಾಗಿ ಪರಮಾತ್ಮನು ಹೀಗೆ ಮಾಡುತ್ತಾನೆ. ಆದ್ದರಿಂದಲೇ ಜಗನ್ಮಾತೆ ನಿನ್ನನ್ನು ಸಂಸಾರದಲ್ಲಿ ಇಟ್ಟಿದ್ದಾಳೆ.''

ಮಾಸ್ಟರ್ ಶ್ರೀರಾಮಕೃಷ್ಣ ವಚನವೇದವನ್ನು (ಮುಂದೆ 'ವಚನವೇದ') ಬರೆಯುವ ಮುನ್ನ ತನ್ನ ದಿನಚರಿಯನ್ನು ತನ್ನ ಮುಂದೆ ತೆಗೆದಿಟ್ಟುಕೊಂಡು ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದ. ಧ್ಯಾನದಲ್ಲಿ ಯಾವ ದಿನದ ವಿಚಾರವಾಗಿ ಬರೆಯಬೇಕಿತ್ತೋ ಅದು ತನ್ನ ಮನಃಪಟಲದ ಮೇಲೆ ಸ್ಪಷ್ಟವಾಗಿ ದರ್ಶನವಾಗುತ್ತಿತ್ತು. ಘಟನೆಗಳು ನಡೆದು ಹಲವು ವರ್ಷಗಳಾಗಿದ್ದರೂ ಅವೆಲ್ಲ ಅವನ ಮನಸ್ಸಿನಲ್ಲಿ ಹಚ್ಚಹಸಿರಾದ್ದವು. ಮಾಸ್ಟರ್‌ನೇ ಹೇಳುವಂತೆ , ಒಂದೊಂದು ಪದಕ್ಕೆ ಎಷ್ಟೋ ಘಂಟೆಗಳ ಕಾಲ ಧ್ಯಾನ ಮಾಡುತ್ತಿದ್ದ. ಕೆಲವೊಮ್ಮೆ ಒಂದೊಂದು ವಾಕ್ಯದ ಮೇಲೆ 'ಸಾವಿರ ಸಲ' ಧ್ಯಾನ ಮಾಡುತ್ತಿದ್ದ. ನೂರಕ್ಕೆ-ನೂರು ಸ್ಪಷ್ಟವಾದ ಮೇಲೆಯೇ ಬರೆಯಲು ಮುಂದುವರಿಯುತ್ತಿದ್ದ. ಏಕೆಂದರೆ ಆತನಿಗೆ ತಿಳಿದಿತ್ತು, ತಾನು ಪ್ರಕಟಿಸುತ್ತಿರುವುದು ಅವತಾರಪುರುಷನ ವಾಣಿಯನ್ನು ಎಂದು. ಒಂದು ಪದ ಅಥವಾ ವಾಕ್ಯ ಸಂಶಯಕ್ಕೆ ಈಡಾದರೆ, ಇದರ ಅನುಮಾನದ (inference) ಮೇಲೆ ಇಡೀ ಗ್ರಂಥವನ್ನು ಶಂಕಿಸುತ್ತಾರೆ. ಆದ್ದರಿಂದಲೇ ಇದೊಂದು ಗುರುತರ ಜವಾಬ್ದಾರಿ.

ಮಾಸ್ಟರ್ ಪುಸ್ತಕರೂಪದಲ್ಲಿ ಪ್ರಕಟಿಸುವ ಮುನ್ನ ಬರಹವನ್ನು ಕರಪತ್ರಗಳ ಮೂಲಕ ಬರೆದು ಶ್ರೀಮಾತೆಯವರಿಗೆ ಹಾಗೂ ಸ್ವಾಮಿ ವಿವೇಕಾನಂದರಿಗೆ ಕಳುಹಿಸಿದ್ದ. ಅವರು ಇದನ್ನು ಓದಿ, ಈ ಕಾರ್ಯವನ್ನು ಸಂಪೂರ್ಣವಾಗಿ ಅನುಮೋದಿಸುತ್ತ, ಪ್ರೋತ್ಸಾಹಿಸುತ್ತ ಹಾಗೂ ಇದನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಸ್ಟರ್‌ಗೆ ಅದ್ಭುತ ಪತ್ರಗಳನ್ನು ಬರೆದಿದ್ದಾರೆ.

ಸ್ವಾಮಿ ಬ್ರಹ್ಮಾನಂದರಂತೂ ಒಬ್ಬ ಭಕ್ತನಿಗೆ: ''ನೀನು ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬೇಕು ಎಂಬ ಇಚ್ಛೆ ಇದ್ದರೆ, ಪ್ರತಿನಿತ್ಯ 'ವಚನವೇದ'ವನ್ನು ಓದು'' ಎಂದು ಹೇಳಿದ್ದಾರೆ. ಮಾಸ್ಟರ್ ಮಹಾಶಯ ಹೇಳುತ್ತಾನೆ, ''ವಚನವೇದದ ಪ್ರತಿಯೊಂದು ವಾಕ್ಯವೂ ಮಂತ್ರವೇ, ಏಕೆಂದರೆ ಅದು ಸ್ವಯಂ ಅವತಾರ ಪುರುಷನ ಮುಖದಿಂದ ಹೊರಹೊಮ್ಮಿದ್ದು.'' ಆದ್ದರಿಂದ ಈ ಯುಗದ ಆಧ್ಯಾತ್ಮಿಕ ಗ್ರಂಥ, **'ಶ್ರೀರಾಮಕೃಷ್ಣ ವಚನವೇದ.'**

ಆದ್ದರಿಂದಲೇ 'ವಚನವೇದ'ದ ಮುನ್ನುಡಿಯಲ್ಲಿ ರಾಷ್ಟ್ರಕವಿ ಕುವೆಂಪು ಹೀಗೆ ಬರೆಯುತ್ತಾರೆ: ''ಶ್ರೀರಾಮಕೃಷ್ಣ ವಚನವೇದವೆಂದರೆ ಅದೊಂದು ಕರತಲ ದೇವಸ್ಥಾನ, ಕರತಲ ತಪೋರಂಗ, ಕರತಲ ಪುಣ್ಯಕ್ಷೇತ್ರ ...''

ಶ್ರೀರಾಮಕೃಷ್ಣರ ಹಲವು ಭಾವಗಳು, ಭಾವಸಮಾಧಿಗಳು ಕೀರ್ತನೆ-ನರ್ತನಗಳು, ಹಾಡುಗಳು; ಭಕ್ತರು – ಅವರ ಭಾವಗಳು, ಶಿಷ್ಯರು – ಅವರ ಭಾವಗಳು, ಉತ್ಸವಗಳು, ಕವನಗಳು, ಸಂದರ್ಶನಗಳು, ನಗೆ-ಹಾಸ್ಯ; ಆಧ್ಯಾತ್ಮಿಕ ಬೋಧನೆಗಳು, ಅವರ ಅದ್ಭುತ ಅನುಭವಗಳು ಹೀಗೆ ಅನಂತ ಅನುಭವ ಸಾಗರದ ಮಡಿಲಾಗಿದೆ 'ವಚನವೇದ.' ಆದರೆ ಇಲ್ಲಿ ಕೆಲವು ಕಿಂಡಿಗಳನ್ನು ಮಾತ್ರ ತೆರೆದು ತೋರಿಸಲು ಪ್ರಯತ್ನಿಸುತ್ತೇವೆ. ಇಷ್ಟನ್ನು ಓದಿ ಕೇವಲ ಇಷ್ಟೇ ಎಂದು ಎಂದಿಗೂ ಭಾವಿಸುವಂತಿಲ್ಲ. ಯಾವಾಗಲೂ ಮೂಲಗ್ರಂಥಕ್ಕೆ ಶರಣು ಹೋಗಬೇಕು. ಗ್ರಂಥವನ್ನು ಪರಿಚಯಿಸಲು ಇದೊಂದು ಪ್ರಯತ್ನ ಮಾತ್ರ.

### ೧. ಭಗವಂತನನ್ನು ಕಾಣಬಹುದು:

**ಒಬ್ಬ ಬ್ರಾಹ್ಮ ಭಕ್ತ:** ಭಗವಂತನನ್ನು ನೋಡಲು ಸಾಧ್ಯವೆ? ಸಾಧ್ಯವಿದ್ದರೆ ನನ್ನಿಂದೇಕೆ ಆತನನ್ನು ನೋಡಲಾಗುತ್ತಿಲ್ಲ?

**ಶ್ರೀರಾಮಕೃಷ್ಣರು:** ಸಾಧ್ಯ. ನಿಸ್ಸಂದೇಹವಾಗಿಯೂ ಆತನನ್ನು ನೋಡಬಹುದು. ಆತನ ಸಾಕಾರರೂಪವನ್ನು ನೋಡಬಹುದು. ಆತನ ಅರೂಪವನ್ನೂ ನೋಡಬಹುದು. ಅದನ್ನು ನಾನು ನಿನಗೆ ಹೇಗೆ ವಿವರಿಸಲಿ?

*(ಭಾಗ ೧, ಪು. ೯೧. ಪ್ರಕಟಣೆ ೨೦೦೬)*

ಮತ್ತೊಂದು ಕಡೆ ಹೇಳುತ್ತಾರೆ:

''ಸತ್ಯವಾಗಿಯೂ ಭಗವಂತ ನಮ್ಮ ಕಣ್ಣಿಗೆ ಕಾಣಿಸಿಕೊಳ್ಳು ತ್ತಾನೆ. ನಮ್ಮೊಡನೆ ಮಾತುಕತೆ ಆಡುತ್ತಾನೆ. ಆಗ ಆತನಿಂದ ಆದೇಶ ಪಡೆಯಲು ಸಾಧ್ಯ . ಆ ರೀತಿಯಾಗಿ ಆದೇಶ ಪಡೆದ ವ್ಯಕ್ತಿಯ ಬಾಯಿಂದ ಬರುವ ಮಾತಿಗೆ ಎಷ್ಟು ಬಲ! ಅದು ಪರ್ವತಗಳನ್ನೂ ಚಲಿಸಿಬಿಡಬಲ್ಲುದು..'' *(ಭಾಗ ೧, ಪು.೮೨)*

## ೨. ಕಾಣಲು ವ್ಯಾಕುಲತೆ ಬೇಕು

ಎಲ್ಲರೂ ನಿಶ್ಶಬ್ದರಾಗಿ ಕುಳಿತಿದ್ದಾರೆ. ಬಲರಾಮನ ವೃದ್ಧ ತಂದೆ ಸದ್ದು ಮಾಡದೆ ಜಪಮಾಲೆ ತಿರುಗಿಸುತ್ತಿದ್ದಾನೆ.

ಶ್ರೀರಾಮಕೃಷ್ಣರು ಮಾಸ್ಟರ್ ಮತ್ತು ಉಳಿದವರಿಗೆ: ''ಇವರು ಅಷ್ಟೊಂದು ಜಪ ಮಾಡುತ್ತಾರೆ, ಅಷ್ಟೊಂದು ತೀರ್ಥಯಾತ್ರೆ ಮಾಡುತ್ತಾರೆ, ಆದರೂ ಹೀಗಿದ್ದಾರಲ್ಲ ಏಕೆ? ಇವರ ವಯಸ್ಸು ಹದಿನೆಂಟು ತಿಂಗಳಿನದು ಎನ್ನುವ ಹಾಗಿದ್ದಾರಲ್ಲ!

''ಒಮ್ಮೆ ನಾನು ಹರೀಶನಿಗೆ ಹೇಳಿದೆ: ಭಗವಂತನಿಗಾಗಿ ವ್ಯಾಕುಲತೆ ಇಲ್ಲದೆ ಇತ್ತು ಎಂದರೆ ಕಾಶಿಗೆ ಹೋಗುವುದರ ಆವಶ್ಯ ಕತೆಯೇನಿದೆ? ವ್ಯಾಕುಲತೆಯೊಂದು ಇತ್ತು ಎಂದರೆ, ಈ ಜಾಗವೇ ಕಾಶಿಯಾಗಿ ಬಿಡುತ್ತದೆ.

''ಅವರು ಅಷ್ಟೊಂದು ಜಪ, ಅಷ್ಟೊಂದು ತೀರ್ಥಯಾತ್ರೆ ಮಾಡುತ್ತಾರೆ. ಆದರೆ ಅವರಿಗೆ ಯಾವ ಸಾಕ್ಷಾತ್ಕಾರವೂ ದೊರೆ ಯುತ್ತಿಲ್ಲವಲ್ಲ ಏಕೆ? ಅವರಲ್ಲಿ ವ್ಯಾಕುಲತೆ ಇಲ್ಲ. ವ್ಯಾಕುಲತೆ ಯಿಂದ ಆತನನ್ನು ಕರೆದದ್ದೇ ಆದರೆ ಖಂಡಿತ ಆತ ತನ್ನ ದರ್ಶನ ವನ್ನು ಕೊಟ್ಟೇ ಕೊಡುತ್ತಾನೆ.'' *(ಭಾಗ ೧, ಪು. ೨೯೪, ೨೯೫)*

## ೩. ತಾಯಿ ಬಂದಿದ್ದಾಳೆ.. !

ಮಾಸ್ಟರ್ ಪದೇ ಪದೇ ಒಂದು ಘಟನೆಯ ಬಗ್ಗೆ ಹೇಳುತ್ತಿದ್ದ: ''ದಕ್ಷಿಣೇಶ್ವರದಲ್ಲಿ ಅವರ ಕೋಣೆಯ ತುಂಬ ಜನ ಕುಳಿತಿದ್ದಾರೆ. ಠಾಕೂರರು ಹೇಳಿದರು, ತಾಯಿ, ಬಂದಿದ್ದಾಳೆ. ಇಲ್ಲಿಗೆ ತಾಯಿ ಬಂದಿದ್ದಾಳೆ! ತಾಯಾಣೆಗೂ ಹೇಳುತ್ತಿದ್ದೇನೆ, ಜಗನ್ಮಾತೆ ಬಂದಿ ದ್ದಾಳೆ' ಎಂದು. ಮತ್ತು ಅವರು ಅವಳೊಂದಿಗೆ ಮಾತನಾಡಿ ದರು.''

## ೪. ಮಾನವ ಜನ್ಮದ ಉದ್ದೇಶ

ಪರಮಹಂಸರು ಹೇಳಿದ್ದಾರೆ: ''ಸಾಧನೆಯನ್ನು ಮಾಡಿದರೆ ಭಗವಂತನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬಹುದು.'' ಮತ್ತೆ ಹೇಳಿದ್ದಾರೆ: ''ಭಗವದ್ದರ್ಶನವೇ ಮಾನವ ಜೀವನದ ಉದ್ದೇಶ. ''

ಶ್ರೀರಾಮಕೃಷ್ಣರು ಮಾಸ್ಟರಿಗೆ: ''ಸ್ವಲ್ಪ ಸಾಧನೆಯಲ್ಲಿ ತೊಡ ಗಿದ್ದೇ ಆದರೆ, ಯಾರಾದರೂ ಬಂದು ಹೀಗೆ ಹೀಗೆ ಮಾಡಬೇಕು ಎಂದು ಹೇಳಿಕೊಟ್ಟು ಬಿಡುತ್ತಾರೆ ...'' *( ಭಾಗ ೧, ಪು. ೩೨೭)*

## ೫. ಪಡೆಯಲು ಮಾರ್ಗ...?

ಮಾಸ್ಟರ್ ವಿನಯದಿಂದ: ''ಹೌದು, ಆಯಿತು. ಒಳ್ಳೆಯದು. ಏನು ಮಾಡಿದರೆ ಭಗವಂತನ ಕಡೆ ಮನಸ್ಸು ಹರಿಯಲಾರಂಭಿ ಸುತ್ತದೆ?''

ಶ್ರೀರಾಮಕೃಷ್ಣರು: ಅ) ಭಗವಂತನ ನಾಮಗುಣ ಕೀರ್ತನೆ ಯನ್ನು ಸರ್ವದಾ ಮಾಡುತ್ತಿರಬೇಕು.

ಆ) ಸತ್ಸಂಗ, ಎಂದರೆ ಭಗವದ್ಭಕ್ತರ ಸಾಧುಸತ್ಪುರುಷರ ಸಹ ವಾಸ ಆಗಾಗ ಮಾಡುತ್ತಿರಬೇಕು. ಮನಸ್ಸು ಹಗಲಿರುಳೂ ಸಂಸಾರದಲ್ಲೇ ಪ್ರಾಪಂಚಿಕ ಕೆಲಸಕಾರ್ಯಗಳಲ್ಲೇ ನಿರತವಾಗಿ ಬಿಟ್ಟಿದ್ದರೆ ಅದು ಭಗವನ್ಮುಖವಾಗಲಾರದು.

ಇ) ಆಗಾಗ ನಿರ್ಜನ ಪ್ರದೇಶಕ್ಕೆ ಹೋಗಿ ಭಗವದ್ಧ್ಯಾನದಲ್ಲಿ ತೊಡಗುವುದು ಅತ್ಯಂತ ಆವಶ್ಯಕ... ಧ್ಯಾನವನ್ನು ಅಂತರ್ಯ ದಲ್ಲೋ, ಏಕಾಂತ ಸ್ಥಳದಲ್ಲೋ, ನಿಬಿಡ ಅರಣ್ಯದಲ್ಲೋ ಮಾಡ ಬೇಕು.

ಈ) ಸತತ ಸದಸದ್ವಿಚಾರ ಮಾಡುತ್ತಿರಬೇಕು. ಭಗವಂತ ನೊಬ್ಬನೇ ಸತ್, ನಿತ್ಯ ವಸ್ತು; ಉಳಿದುದೆಲ್ಲಾ ಅಸತ್, ಅನಿತ್ಯವಸ್ತು ಎಂದು. ಹೀಗೆ ವಿಚಾರ ಮಾಡುತ್ತ ಅನಿತ್ಯವಸ್ತುಗಳ ಮೇಲಿನ ಅನುರಾಗವನ್ನು ಕೊನೆಗೆ ಮನಸ್ಸಿನಿಂದ ಕಿತ್ತೊಗೆಯಬೇಕು.

*(ಭಾಗ ೧, ಪು. ೭)*

## ೬. ಕಲಿಯುಗಕ್ಕೆ ನಾರದೀಯ ಭಕ್ತಿ

''ಈ ಕಲಿಯುಗದಲ್ಲಿ ವೇದೋಕ್ತ ಕರ್ಮಗಳನ್ನು ಮಾಡಲು ಸಮಯವೆಲ್ಲಿ? ಅದಕ್ಕಾಗಿಯೇ ಈ ಯುಗಕ್ಕೆ ನಾರದೀಯ ಭಕ್ತಿ. ಕರ್ಮಯೋಗ ಬಹಳ ಕಠಿಣ. ನಿಷ್ಕಾಮ ಭಾವನೆಯಿಂದ ಮಾಡ ಲಾಗದಿದ್ದರೆ ಅದು ಬಂಧನಕ್ಕೆ ಕಾರಣವಾಗುತ್ತದೆ. ಜೊತೆಗೆ ಈ ಶರೀರ ಅನ್ನಗತಪ್ರಾಣ ಬೇರೆ. ವಿಧಿನಿಯಮಗಳಿಗನುಸಾರ ಕರ್ಮ ಮಾಡಲು ಸಮಯವಿಲ್ಲ. ದಶಮೂಲಿಕೆಗಳ ಕಷಾಯ ಕುಡಿಯಲು ಹೋದರೆ ರೋಗಿ ಈ ಕಡೆ ಯಮಪುರಿಗೆ ಟಿಕೆಟ್ಟು ತೆಗೆದುಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಈಗಿನವರಿಗೆ ಫೀವರ್ ಮಿಕ್ಸ್ಚರ್.

''...ಚಿರಕಾಲವೂ ಕರ್ಮಗಳನ್ನು ಮಾಡುತ್ತಿರಬೇಕಾದ ಆವಶ್ಯಕತೆಯೇನೂ ಇರುವುದಿಲ್ಲ. ಆತನ ಅಡಿದಾವರೆಗಳಲ್ಲಿ ಶುದ್ಧಭಕ್ತಿ, ಪ್ರೇಮ ಬೆಳೆದಷ್ಟು ಕರ್ಮಗಳು ಕಡಿಮೆ ಕಡಿಮೆ ಯಾಗುತ್ತಾ ಬರುತ್ತವೆ. ಆತನನ್ನು ಪಡೆದುಕೊಂಡರೆ ಅವು ತಾವಾ ಗಿಯೇ ನಿಂತುಹೋಗುತ್ತವೆ. ಸೊಸೆ ಗರ್ಭಿಣಿಯಾದರೆ, ಅತ್ತೆ ಆಕೆಯ ಕೆಲಸಗಳನ್ನು ಕಡಿಮೆ ಮಾಡುತ್ತಾಳೆ. ಹೆತ್ತನಂತರ ಆಕೆ ಯಾವ ಕೆಲಸವನ್ನೂ ಮಾಡಬೇಕಾಗಿರುವುದಿಲ್ಲ.'' *(ಭಾಗ ೨, ಪು. ೪೧; ಪ್ರಕಟಣೆ ೨೦೦೫)*

**೭. ಅದ್ಭುತ ಭಾವಸಮಾಧಿಯ ವರ್ಣನೆ:**

ಪರಮಹಂಸರು ಸ್ಥಿರವಾಗಿ ನಿಂತಿದ್ದಾರೆ. ನರೇಂದ್ರ ಹಾಡು ತ್ತಿದ್ದಾನೆ... ಅವರು ಎವೆಯಿಕ್ಕದೆ ನೆಟ್ಟ ಕಣ್ಣುಗಳಿಂದ ಸ್ಥಿರವಾಗಿ ನಿಂತಿದ್ದಾರೆ. ಉಸಿರಾಡುವಂತೆಯೂ ತೋರಿಬರಲಿಲ್ಲ. ಕೇಳಲಾಗಿ ಒಬ್ಬ ಭಕ್ತ ಹೇಳಿದ ಪರಮಹಂಸರು ಸಮಾಧಿಯಲ್ಲಿದ್ದಾರೆ ಎಂಬು ದಾಗಿ ...

ನರೇಂದ್ರ ಹಾಡುತ್ತಿದ್ದಾನೆ:

**'ನಿರಂಜನ ಹರಿಚಿದ್ಘನ ಮೂರುತಿಯನು ನೆನೆಯೊ**
**ನಿರಂತರ ಮೋಹನಮೂರುತಿಯನು ನೆನೆಯೊ..'**

ಹಾಡಿನ ಈ ಚರಣ ಹಾಡುತ್ತಿದ್ದಾಗ ಪರಮಹಂಸರ ಶರೀರ ಕಂಪಿಸಲಾರಂಭಿಸಿತು. ರೋಮಾಂಚನವಾಗಿ ಕಣ್ಣುಗಳಿಂದ ಪ್ರೇಮಾಶ್ರು ಸುರಿಯಲಾರಂಭಿಸಿತು. ಏನನ್ನೋ ನೋಡುತ್ತಾ ಆಗಾಗ ಮುಗುಳ್ನಗೆ ನಗುತ್ತಿದ್ದಾರೆ. ''ಕೋಟಿಚಂದ್ರಸಮ ಕಾಂತಿಯ ನಾಚಿಸಿ'' ಹೊಳೆಯುತ್ತಿದ್ದ ಭಗವಂತನ ಚಿನ್ಮಯ ಕೂಡಿ ದರ್ಶನ ... ಎಂಬುದು ಇದೇ ಏನು?

**ಹೃದಯ ಪದ್ಮದಲ್ಲಿ ಪೂಜಿಸು ಆತನ**
**ಶಾಂತಮಾನಸದಿ ಜ್ಞಾನನಯನದಲಿ**

ಮತ್ತೇ ಅದೇ ಭುವನಮೋಹನ ಮುಗುಳುನಗೆ, ಶರೀರ ಹಿಂದಿನಂತೆ ನಿಷ್ಪಂದ. ಅರ್ಧ ಮುಚ್ಚಿದ ಕಣ್ಣುಗಳು. ಯಾವುದೊ ಅಪೂರ್ವ ರೂಪದರ್ಶನ ಮಾಡುತ್ತ ಮಹದಾನಂದ ಸಾಗರದಲ್ಲಿ ಈಜಾಡುತ್ತಿರುವಂತೆ ಕಂಡಿತು. *(ಭಾಗ ೧, ಪು. ೧೬-೧೭)*

**೮. ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ**

'' 'ನಾನು ಮುಕ್ತಪುರುಷ. ಸಂಸಾರದಲ್ಲಿ ಇದ್ದರೆ ತಾನೆ ಏನು, ಅರಣ್ಯದಲ್ಲಿ ಇದ್ದರೆ ತಾನೆ ಏನು, ನನಗೆಲ್ಲಿಯದು ಬಂಧನ? ನಾನು ಭಗವಂತನ ಮಗು, ರಾಜಾಧಿರಾಜನ ಮಗು. ನನಗಾವು ದರ ಬಂಧನ?' ಎಂಬುದಾಗಿ ಯಾರು ಸತತ ಚಿಂತಿಸುತ್ತಾನೊ, ಆತ ಮುಕ್ತನಾಗಿಬಿಡುತ್ತಾನೆ. ಒಂದು ಪಕ್ಷ ಹಾವೇನಾದರೂ ಕಡಿದರೆ 'ನನ್ನನ್ನು ವಿಷ ಏನೂ ಮಾಡಲಾರದು' ಎಂಬುದಾಗಿ ದೃಢವಾಗಿ ನಂಬಿದರೆ ಆಗ ಅದರಿಂದ ಪಾರಾಗಿಬಿಡಬಹುದು. ಹಾಗೆ 'ನಾನು ಬದ್ಧನಲ್ಲ, ಮುಕ್ತ' ಎಂಬುದಾಗಿ ದೃಢವಾಗಿ ನಂಬಿದರೆ ಹಾಗೇ ಆಗಿಬಿಡಬಹುದು - ಮುಕ್ತನೇ ಆಗಿಬಿಡ ಬಹುದು.'' *(ಭಾಗ ೧, ಪು.೨೮)*

**೯. ಕಾಮಕಾಂಚನವೇ ಮಾಯೆ**

(ಬಲರಾಮನಿಗೆ): '' ಅಂದು ಇಲ್ಲಿಗೆ ಒಬ್ಬ ಬಂದಿದ್ದ. ನನಗೆ ಗೊತ್ತಾಯಿತು ಆತ ತನ್ನ ಕರೀ ಹೆಂಡತಿಯ ದಾಸ ಅಂತ. ಜನರಿಗೆ ಭಗವಂತನ ದರ್ಶನ ಏಕೆ ದೊರೆಯುವುದಿಲ್ಲ ಗೊತ್ತೆ? ಕಾಮ ಕಾಂಚನವೆಂಬುದು ಮಧ್ಯದಲ್ಲಿ ಅಡ್ಡವಾಗಿ ಬಿದ್ದಿರುವುದರಿಂದ.''

''ಕಾಮಕಾಂಚನವೇ ಮಾಯೇ ಎಂಬುದು. ಅದರ ಮಧ್ಯೆ ಬಹಳ ಕಾಲದ ವರೆಗಿದ್ದರೆ, ಕ್ರಮೇಣ ಎಚ್ಚರಿಕೆ ತಪ್ಪಿಹೋಗುತ್ತದೆ. - ಅದೇ ಆನಂದವಾಗಿರುವಂತೆ ತೋರಿಬರುತ್ತದೆ.'' *(ಭಾಗ ೧, ಪು. ೭೮-೭೯)*

**೧೦. ಭಗವಂತನನ್ನು ಪ್ರೀತಿಸಬೇಕು**

''ಮುಖ್ಯಾಂಶವೇನೆಂದರೆ ಭಗವಂತನನ್ನು ಪ್ರೀತಿಸಬೇಕು - ತಾಯಿ ಮಗುವನ್ನು ಪ್ರೀತಿಸುವ ಹಾಗೆ, ಸತಿ ಪತಿಯನ್ನು ಪ್ರೀತಿ ಸುವ ಹಾಗೆ, ವಿಷಯಿ ವಿಷಯಗಳನ್ನು ಪ್ರೀತಿಸುವ ಹಾಗೆ. ಈ ಮೂರು ಪ್ರೀತಿಗಳನ್ನೂ, ಈ ಮೂರು ಆಕರ್ಷಣೆಗಳನ್ನೂ ಒಟ್ಟು ಗೂಡಿಸಿದರೆ ಅದು ಏನಾಗುತ್ತದೋ ಅದಷ್ಟನ್ನೂ ಭಗವಂತನ ಕಡೆ ತಿರುಗಿಸುವುದಾದರೆ ಆತನ ದರ್ಶನ ದೊರೆಯುತ್ತದೆ.'' *(ಭಾಗ ೧, ಪು. ೯)*

**'ಶ್ರೀರಾಮಕೃಷ್ಣ ವಚನವೇದ'**ದ ಒಂದು ಪಕ್ಷಿನೋಟ ನೀಡಿ ದ್ದಾಯಿತು. ಲಕ್ಷಾಂತರ ಜನರು, ಭಕ್ತರು ಶ್ರೀರಾಮಕೃಷ್ಣರ ವಾಣಿ ಯನ್ನು ಓದಿ ಬೆಳಕನ್ನು ಕಾಣುತ್ತಿದ್ದಾರೆ. ಶ್ರೀರಾಮಕೃಷ್ಣರ ಸಂಪ ರ್ಕಕ್ಕೆ ಬರುವ ಮುನ್ನವೇ ಸುಮಾರು ಹದಿನೈದು ವರ್ಷ ದಿನಚರಿ ಬರೆಯುವ ಅಭ್ಯಾಸವಿತ್ತು, ಮಾಸ್ಟರ್ ಮಹಾಶಯನಿಗೆ. ಆತನೇ ತಮಾಷೆಗೆ ಹೇಳುತ್ತಿದ್ದ, ''ನನಗೆ ಹದಿನೈದು ವರ್ಷದ ಅನುಭವ ವಿದೆ'' ಎಂದು.

ಬುದ್ಧನು ತನ್ನ ವಾಣಿಯನ್ನು, ಸಂದೇಶಗಳನ್ನು ಆಗಿನ ಆಡು ಭಾಷೆಯಾದ ಪಾಳಿಯಲ್ಲಿ ಬೋಧಿಸಿದ. ಹಾಗೆಯೇ ಶ್ರೀರಾಮ ಕೃಷ್ಣರೂ ಕೂಡ ತಮ್ಮ ಮಾತೃಭಾಷೆಯಾದ ಬಂಗಾಳಿಯಲ್ಲೇ ಉಪದೇಶವಿತ್ತಿದ್ದಾರೆ. ಆ ಉಪದೇಶಗಳು 'ಅಮೃತಮಯ.' ಪ್ರತಿಯೊಂದು ಮಾತಿನಲ್ಲೂ ಅಮೃತವು ತುಂಬಿ, ಸಾಗರವು ಉಕ್ಕುವಂತೆ ಉಕ್ಕುತ್ತದೆ. ಆದ್ದರಿಂದ ಮಾಸ್ಟರ್ ಬಂಗಾಳಿಯಲ್ಲಿ **'ಶ್ರೀರಾಮಕೃಷ್ಣ ಕಥಾಮೃತ'** ಎಂದೇ ಹೆಸರಿಟ್ಟಿದ್ದಾನೆ. ಈ ಗ್ರಂಥದ ಅಧ್ಯಯನವು ನಮ್ಮ ಜೀವನವನ್ನು ಅಮೃತಮಯವನ್ನಾಗಿ ಮಾಡಲಿ ಎಂದು ಪ್ರಾರ್ಥಿಸೋಣ.

*ಗ್ರಂಥದ ವಿವರ*


೧) ಮೂಲ: ಬಂಗಾಳೀ: ಹೆಸರು : **ಶ್ರೀರಾಮಕೃಷ್ಣ ಕಥಾಮೃತ** (ಎರಡು ಸಂಪುಟಗಳಲ್ಲಿ) ಉದ್ಬೋದನ ಕಾರ್ಯಾಲಯ, ಕೊಲ್ಕತ್ತಾ.

೨) ಕನ್ನಡ : **ಶ್ರೀರಾಮಕೃಷ್ಣ ವಚನವೇದ,** (೨ ಸಂಪುಟಗಳು) ಶ್ರೀರಾಮಕೃಷ್ಣಾಶ್ರಮ, ಯಾದವಗಿರಿ, ಮೈಸೂರು-೨೦.

೩) English: **The Gospel of Sri Ramakrishna,** (Two Volumes) Ramakrishna Math, Mylapore, Chennai 600 004.


✤

# ಶ್ರೀ ಶಾರದಾದೇವೀ ವಚನವೇದದಲ್ಲಿ ಆಧ್ಯಾತ್ಮಿಕ ಸಾಧನೆ

**– ಸ್ವಾಮಿ ಶಿವಾಕಾಂತಾನಂದ**

**ಶ್ರೀಮಾತೆ ಶಾರದಾದೇವಿಯವರ ಶಿಷ್ಯಂದಿರು ಹಾಗೂ ಭಕ್ತರು ಬರೆದ ಸ್ಮೃತಿಚಿತ್ರಗಳ ಸಂಕಲನವೇ 'ಶ್ರೀಶಾರದಾದೇವಿ ವಚನವೇದ.' ಇಲ್ಲಿನ ಸ್ಮೃತಿಚಿತ್ರಗಳುದ್ದಕ್ಕೂ ಶ್ರೀಮಾತೆಯವರ ಮಾತು, ಉಪದೇಶ, ಘಟನೆಗಳು ಹಾಸುಹೊಕ್ಕಾಗಿ ಬರುತ್ತವೆ. ಈ ದಿವ್ಯಕೃತಿಯನ್ನು ಪರಿಚಯಿಸಿರುವ ಸ್ವಾಮೀಜಿ ಕೇರಳದ ಕಾಲಡಿಯಲ್ಲಿರುವ ರಾಮಕೃಷ್ಣ ಅದ್ವೈತ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಉತ್ತಮ ವಾಗ್ಮಿಗಳು ಮತ್ತು ಲೇಖಕರು. ಇವರು ಬರೆದ ಹಲವು ಲೇಖನಗಳು ಈಗಾಗಲೇ ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

ಶ್ರೀಮಾತೆಯವರ ಉಕ್ತಿಸಂಕಲನ '**ಶ್ರೀ ಶ್ರೀ ಮಾಯೇರ್ ಕಥಾ**' ಎಂದು ಬಂಗಾಲಿ ಭಾಷೆಯಲ್ಲಿ ಪ್ರಸಿದ್ಧವಾದ ಗ್ರಂಥ ಎರಡು ಸಂಪುಟಗಳಲ್ಲಿ ಪ್ರಕಟವಾಯಿತು. ಇದರ ಆಂಗ್ಲಭಾಷಾ ಅನುವಾದವನ್ನು 'The Gospel of Holy Mother' ಎಂಬ ಶೀರ್ಷಿಕೆಯಲ್ಲಿ ರಾಮಕೃಷ್ಣ ಮಠ, ಮೈಲಾಪುರ, ಮದ್ರಾಸ್ ಅವರಿಂದ ೧೯೮೪ರಲ್ಲಿ ಪ್ರಕಟಿಸಲಾಯಿತು. ಅನೇಕ ವರ್ಷಗಳಿಂದಲೂ ಕನ್ನಡ ಜನತೆ ಕಾತರದಿಂದ ಕಾಯುತ್ತಿದ್ದ ತರ್ಜುಮೆ 'ಶ್ರೀಶಾರದಾದೇವಿ ವಚನವೇದ'ವೆಂದು ನಾಮಾಂಕಿತವಾಗಿ ಇತ್ತೀಚೆಗೆ ಪ್ರಕಟವಾಗಿದೆ. ಈ ಗ್ರಂಥವು ಶ್ರೀಮಾತೆಯವ ರೊಂದಿಗೆ ಅವರ ತ್ಯಾಗೀ ಶಿಷ್ಯರು, ಭಕ್ತರು ನಡೆಸಿದ ಮಾತುಕತೆಗಳ ಸಂಕಲನ. ಅಂತಹ ೩೮ ಸ್ಮೃತಿಲೇಖನಗಳಿರುವ ಈ ಗ್ರಂಥವನ್ನು ಮೂರು ಭಾಗವಾಗಿ ವಿಂಗಡಿಸಲಾಗಿದೆ.

ಕೊಲ್ಕೊತ್ತದಲ್ಲಿ ಇರುವಾಗ ಶ್ರೀಮಾತೆಯವರು ಒಳಕೋಣೆಯಲ್ಲಿ ವಾಸಿಸುತ್ತ, ಘೋಷಾ ಪದ್ಧತಿ (ತಲೆಯ ಮೇಲೆ ಸರಗು ಹಾಕುವುದು) ಯನ್ನು ಅನುಸರಿಸುತ್ತಿದ್ದರು. ಎಲ್ಲರೂ ಅಷ್ಟು ಸುಲಭವಾಗಿ ಅವರ ಬಳಿ ಸಾರಲು ಅವಕಾಶವಿರಲಿಲ್ಲ. ಸಾಮಾನ್ಯವಾಗಿ ಸ್ತ್ರೀಭಕ್ತರು, ಎಳೆವಯಸ್ಸಿನ ಹುಡುಗರು, ಬೆರಳೆಣಿಕೆಯಷ್ಟು ತ್ಯಾಗೀ ಶಿಷ್ಯಂದಿರಿಗೆ ಶ್ರೀಮಾತೆಯವರೊಡನೆ ತಂಗಲು ಹಾಗೂ ಅವರೊಡನಾಡಲು ಹೆಚ್ಚಿನ ಅವಕಾಶವಿರುತ್ತಿತ್ತು. ಕೆಲವು ಭಾಗ್ಯವಂತರು ಅವರ ಬಳಿಯಲ್ಲೆ ಕೆಲವು ದಿನ ನಿಲ್ಲಲು ಅವಕಾಶ ಪಡೆದರು. ಅಂತಹವರ ವರದಿಯಿಂದ, ಹಾಗೂ ಆಗಂತುಕ ಭಕ್ತರ ನೆನಪುಗಳ ಉದ್ಯಾನದಿಂದ ಸಂಗ್ರಹಿಸಿರುವ ಸುಂದರ ಪುಷ್ಪರಾಶಿ ಈ ಗ್ರಂಥ.

ಶ್ರೀರಾಮಕೃಷ್ಣರ ವಚನವೇದದಂತೆಯೇ ಇದು ದಿವ್ಯತೆಯೆಡೆಗೆ ಕೊಂಡೊಯ್ಯುವ ಜ್ಯೋತಿ. ವಚನವೇದವಾದರೋ ತೇಜೋರಾಶಿಯಿಂದ ಉಜ್ಜ್ವಲವಾಗಿ ಬೆಳಗುವ ಭಾಸ್ಕರ ರಶ್ಮಿಯಾದರೆ, ಶ್ರೀಮಾತೆಯವರ ವಚನಗಳು ಅದೇ ದಿವ್ಯತೆಯನ್ನು ಸೂಸುವ ಶರಜ್ಜ್ಯೋತ್ಸ್ನೆ, ಮಣಿಕಾಂತಿ. ಸೂರ್ಯನ ಬೆಳಕನ್ನು ಎಲ್ಲರೂ ನೋಡಲು ಸಾಧ್ಯವೆ? ಆದ್ದರಿಂದಲೇ ಅಮ್ಮನ ವಾಕ್ಯಗಳು ಎಲ್ಲರಿಗೂ ಆಪ್ಯಾಯಮಾನ. ಸೂರ್ಯನ ಬೆಳಕನ್ನು ಚಂದ್ರನು ಪ್ರತಿಬಿಂಬಿಸುವಂತೆ, ಶ್ರೀಮಾತೆಯವರು ಶ್ರೀರಾಮ



ಕೃಷ್ಣರ ಅನೇಕ ಉಕ್ತಿಗಳನ್ನು ಪುನರುದ್ಧರಿಸುತ್ತಾರೆ. ಇನ್ನೂ ಹೆಚ್ಚಿನ ವಿಶೇಷವೆಂದರೆ, ಈ ಗ್ರಂಥದಲ್ಲಿ 'ಶ್ರೀರಾಮಕೃಷ್ಣ ವಚನವೇದ'ದಂತೆ ಕೇವಲ ಉಪದೇಶವಷ್ಟೇ ಅಲ್ಲದೆ, ನಮಗೆ ದೊರೆಯುವುದು ಶ್ರೀಮಾತೆಯವರ ದಿನಚರಿ, ಸಾಧನೆ, ಪೂಜಾದಿ ಕಾರ್ಯಗಳು, ಅತಿಥಿಗಳು, ಮನೆಯಲ್ಲಿರುವ ಬಂಧು, ಭಕ್ತರೊಡನೆ ಶ್ರೀಮಾತೆ ಒಡನಾಡುತ್ತಿದ್ದ ಪರಿ. ಅವರು ಎಲ್ಲರನ್ನು ಬರಮಾಡಿಕೊಳ್ಳುತ್ತಿದ್ದ ರೀತಿಯೇ ಅದ್ಭುತ. ಮೊದಲ ಭೇಟಿಯಲ್ಲಿಯೇ ಪ್ರೀತಿಯ ಸೆಲೆಯಲ್ಲಿ ತಮ್ಮವರನ್ನಾಗಿಸಿಕೊಳ್ಳುವ ಹೃದಯ. ಭಕ್ತರ ಬೆಳಗ್ಗಿನ ಸ್ನಾನ, ಸಂಧ್ಯಾವಂದನೆಯಿಂದ ಹಿಡಿದು, ಊಟ ತಿಂಡಿ ರಾತ್ರಿ ಮಲಗುವವರೆಗೂ ಅವರನ್ನು ನೋಡಿಕೊಳ್ಳುತ್ತಿದ್ದರು. ಮಧ್ಯಾಹ್ನ ವಿಶ್ರಾಂತಿ ಸಮಯ ಹಾಸಿಗೆ ಹಾಸಿ ಬೀಸಣಿಗೆಯನ್ನೂ ಬೀಸುತ್ತ ಮಲಗಿಸುತ್ತಿದ್ದರು. ತಾವೇ ಕೈಯಾರೆ ಅಡುಗೆ ಮಾಡಿ, ಉಣಬಡಿಸಿ, ಪ್ರಸಾದ ನೀಡಿ ಎಂಜಲೆಲೆ ಎತ್ತಲೂ, ಗೋಮಯ ಸಾರಿಸಲೂ ಅವಕಾಶವೀಯ ದಿರುವ ಅಲೌಕಿಕ ಮಾತೃಮಮತೆ, ವಾತ್ಸಲ್ಯಪೂರ್ಣ ಆತಿಥ್ಯ. ಆಧ್ಯಾತ್ಮಿಕ ಪಿಪಾಸುಗಳಿಗೆ ಮಂತ್ರ ನೀಡಿ, ಗುರುವಾಗಿ, ಇಷ್ಟ ದೇವತೆಯಾಗಿ, ಸಾಧನೆಗೆ ನೆರವಾಗಿ, ಅಶಕ್ತರಾದಲ್ಲಿ ಅವರ ಸಾಧನೆಯನ್ನೂ ತಾವೇ ಮಾಡುವೆನೆಂಬ ವಾಗ್ದಾನ. ಕೊನೆಗೆ ಹೋಗುವಾಗ ಅವರನ್ನು ಮನೆ ಬಾಗಿಲ

ವರೆಗೋ, ಸ್ವಲ್ಪ ದೂರ ನಡೆದೋ ಅಥವಾ ಊರ ಹೆಬ್ಬಾಗಿಲಿನ ವರೆಗೋ ಬಂದು ಅವರು ಕಣ್ಮರೆಯಾಗುವವರೆಗೂ ಅಲ್ಲೇ ಕಣ್ಣೀರು ಸುರಿಸುತ್ತ ಬೀಳ್ಕೊಡುಗೆ, ಹೀಗೆ ಹತ್ತು ಹಲವಾರು ರೀತಿಯಲ್ಲಿ ಅವರು ಅಹೇತುಕವಾಗಿ ಹರಿಸುತ್ತಿದ್ದ ಪ್ರೀತಿ-ವಾತ್ಸಲ್ಯದ ಪರಿ ಅವರ್ಣನೀಯ, ಅನುಭವವೇದ್ಯ. ಸ್ವಂತ ದೈಹಿಕ ಆರೋಗ್ಯ, ಸಂಸಾರ ತಾಪತ್ರಯಗಳನ್ನು ಬದಿಗಿಟ್ಟು, ತಮ್ಮ ಸಂತಾನರಾಶಿಗೆ ನೀಡುತ್ತಿದ್ದ ಮಾತೃವಾತ್ಸಲ್ಯ ಲೇಪಿತವಾದ ಸಮಯ ಮತ್ತು ಸಕಲ ರೀತಿಯ ಸೇವೆ ಅನುಪಮ. ಒಮ್ಮೆ ಮಧ್ಯಾಹ್ನ ವಿಶ್ರಾಂತಿಯ ವೇಳೆ ಕೆಲವು ಮಂದಿ ಸ್ತ್ರೀಭಕ್ತರು ಶ್ರೀಮಾತೆಯವರನ್ನು ಕಂಡು ಮಾತನಾಡಿ ಹೋದ ನಂತರ ಸರಯೂಬಾಲಾದೇವಿ ಹೇಳುತ್ತಾಳೆ, ''ಅಯ್ಯೋ! ನಮಗೋಸ್ಕರ ನೀವು ಎಷ್ಟೊಂದನ್ನೆಲ್ಲ ಸಹಿಸಿಕೊಳ್ಳುತ್ತೀರಿ ತಾಯಿ! ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವಾಗಲೂ ಯಾವ ಯಾವ ರಾಜ್ಯದ ಕಾಡುಹರಟೆಗಳು!'' ಅದಕ್ಕೆ ಅಲ್ಲವೆ ಶಂಕರಾಚಾರ್ಯರು ಹೇಳಿದ್ದು, **'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ.'**

ಶ್ರೀಮಾತೆಯವರು ಶ್ರೀರಾಮಕೃಷ್ಣರ ಶಕ್ತಿ. ಶ್ರೀರಾಮಕೃಷ್ಣರಿಗೆ ಅವರು ಒಂದು ಸಂದರ್ಭದಲ್ಲಿ ''ನಾನು ನಿಮ್ಮ ಉದ್ದೇಶವನ್ನು ಸಫಲಗೊಳಿಸಲು ಬಂದಿದ್ದೇನೆ, ಅದನ್ನು ನಾಶಮಾಡಲಲ್ಲ.'' ಎಂದರು. ಶ್ರೀರಾಮಕೃಷ್ಣರ ಅವತಾರದ ಮುಖ್ಯ ಉದ್ದೇಶವೇ ಪ್ರಾಪಂಚಿಕತೆಯಿಂದ ಪ್ರತಿಯೊಬ್ಬರನ್ನೂ ವಿಮುಖಗೊಳಿಸಿ ಭಗವನ್ಮುಖರಾಗಿಸುವುದು. ಒಮ್ಮೆ ಶ್ರೀರಾಮಕೃಷ್ಣರು, ''ಕಲ್ಕತ್ತೆಯ ಜನರು ಹುಳುಗಳಂತೆ ಸಾಯುತ್ತಿದ್ದಾರೆ, ನೀನೇನೂ ಮಾಡಲಾರೆಯಾ? ನಾನೇ ಎಲ್ಲವನ್ನೂ ಮಾಡಬೇಕೆ?'' ಎಂದು ಶ್ರೀಮಾತೆಯವರನ್ನು ಕೇಳಿದರು. ಇದಕ್ಕೆ ಶ್ರೀಮಾತೆಯ ಉತ್ತರ, ''ನಾನೊಬ್ಬ ಸ್ತ್ರೀ, ನಾನೇನು ಮಾಡಬಲ್ಲೆ?'' ವಾಸ್ತವವಾಗಿ ಮುಂದೆ ಶ್ರೀರಾಮಕೃಷ್ಣರಿಗಿಂತ ಹೆಚ್ಚಾಗಿ ಶ್ರೀಮಾತೆಯರೇ ಮಾಡಬೇಕಾಗಿ ಬಂತು. ಶ್ರೀರಾಮಕೃಷ್ಣರು ರಾಧಿಯೆಂಬ ಪಂಜರದಲ್ಲಿ ಶ್ರೀಮಾತೆಯವರನ್ನು ಇನ್ನೂ ಹಲವು ವರ್ಷ ಜಗದೋದ್ಧಾರ ಕಾರ್ಯಕ್ಕೆ ಜಗತ್ತಿನಲ್ಲಿ ಬಂಧಿಸಿಟ್ಟರು. ಎಂತೆಂತಹ ಭಕ್ತರೆಲ್ಲ ಬರುತ್ತಿದ್ದರು, ಮಂತ್ರ ಪಡೆಯಲು! ಅವರಿಗಾದರೋ ಯಾವ ಯೋಗ್ಯತೆಯೂ ಇಲ್ಲ! ಅದರಿಂದ ಅವರ ಕಷ್ಟಗಳನ್ನು ಶ್ರೀಮಾತೆ ತಮ್ಮ ದೇಹದ ಮೇಲೆಳೆದುಕೊಳ್ಳುತ್ತಿದ್ದರು. ಅನಾರೋಗ್ಯದಿಂದ ಕೂಡಿದ್ದರೂ ಕೂಡ ಅನೇಕ ಬಾರಿ ದಯೆ ತೋರಿಸಿ ದೀಕ್ಷೆ ಕೊಡುತ್ತಿದ್ದರು. ಇದರಿಂದ ಅವರ ದೇಹಾರೋಗ್ಯ ಇನ್ನಷ್ಟು ಕ್ಷೀಣಿಸುತ್ತಿತ್ತು. ಜಯರಾಂಬಾಟಿಯಲ್ಲಿ ಒಬ್ಬ ಮುದುಕ ಬಲ ವಂತವಾಗಿ ಶ್ರೀಮಾತೆಯವರ ಪಾದಧೂಳಿ ತೆಗೆದುಕೊಂಡಿದ್ದ. ಸ್ವಾಮಿ ಈಶಾನಾನಂದರು ಶ್ಯಾಮಬಜಾರಿನಿಂದ ವಾಪಸ್ಸು ಬಂದು ನೋಡುವಾಗ ಶ್ರೀಮಾತೆ ಜಗಲಿಯ ಮೇಲೆ ಚಾಪೆ ಹಾಸಿಕೊಂಡು ನೋವಿನಿಂದ ಮಲಗಿದ್ದರು. ಶ್ರೀಮಾತೆ, ''ಆ ಹೊತ್ತಿನಿಂದ ನನಗೆ ತಡೆಯಲಾರದ ಉರಿ; ಹೊಟ್ಟೆನೋವಿನಿಂದ ಸಾಯುತ್ತಿದ್ದೇನೆ. ಮೂರು ನಾಲ್ಕು ಸಲ ಕಾಲು ತೊಳೆದುಕೊಂಡಿದ್ದೇನೆ. ಆದರೂ ಮಾಯವಾಗುತ್ತಿಲ್ಲ... ಎಷ್ಟು ಬಗೆಯ ಜನರು ಬರುತ್ತಾರೆ'' ಎಂದರು. ಬ್ರಹ್ಮಾನಂದರು ಹೇಳುತ್ತಾರೆ: ''ನಾವು ನಮ್ಮ ಕಣ್ಣಿನಿಂದಲೇ ಕಾಣುತ್ತಿದ್ದೇವೆ. ಮಾತೆ ಎಲ್ಲರ ಪಾಪ, ತಾಪಗಳನ್ನು ತಮ್ಮ ಮೇಲೆಳೆದುಕೊಂಡು ಅವರನ್ನು ಉದ್ಧರಿಸುತ್ತಿದ್ದಾರೆ. ಜಗನ್ಮಾತೆಗಲ್ಲದೆ ಬೇರೆ ಯಾರಿಗಾದರೂ ಈ ಶಕ್ತಿ ಇರಲು ಸಾಧ್ಯವೆ?''

ಈ ಗ್ರಂಥದಿಂದ ನಮಗೆ ಸ್ವಾರ್ಥಮಯ ಬದುಕಿನಿಂದ ಸಾರ್ಥಕಪೂರ್ಣ ಬದುಕಿಗೆ ಅಪೂರ್ವವಾದ ಮಾರ್ಗದರ್ಶನ ದೊರೆಯುವುದು. ಒಂದು ದಿನ ಮುಂಜಾನೆ ಮನೆಯಲ್ಲಿ ಒಬ್ಬರು ಭತ್ತ ಕುಟ್ಟುತ್ತಿದ್ದರು. ಶ್ರೀಮಾತೆ ಅದಕ್ಕೆ ಕೈ ಜೋಡಿಸುತ್ತಿದ್ದರು. ಸಾಮಾನ್ಯವಾಗಿ ಅವರು ಪ್ರತಿದಿನವೂ ಹಾಗೆ ಮಾಡುತ್ತಿದ್ದರು. ಆಗ ರಾಸ್‌ಬಿಹಾರಿ (ಮುಂದೆ ಸ್ವಾಮಿ ಅರೂಪಾನಂದರು) ಅವರನ್ನು ಕೇಳಿದ, ''ಅಮ್ಮ, ನೀವು ಇಷ್ಟೊಂದು ಶ್ರಮ ಪಡುವುದೇಕೆ?'' ಅದಕ್ಕೆ, ''ಮಗೂ, ಆದರ್ಶವನ್ನು ತೋರಿಸಿಕೊಡುವುದಕ್ಕಾಗಿ ಎಷ್ಟನ್ನು ಮಾಡಬೇಕೋ ಅದಕ್ಕಿಂತ ಹೆಚ್ಚಾಗಿಯೇ ನಾನು ಮಾಡಿದ್ದೇನೆ.'' ಅಂತಹ ಅದ್ಭುತ ದೈವೀಜೀವನವನ್ನು ಅನುಸರಿಸಲು ನಮ್ಮಂತಹ ಸಾಮಾನ್ಯರಿಗೆ ಅಸಾಧ್ಯವಾದರೂ, ಅನುಸರಿಸುವ ಪ್ರಯತ್ನ ಎಷ್ಟೇ ಆಂಶಿಕವಾದರೂ ಸರಿ. ಒಂದೆಡೆ ಪ್ರಯತ್ನದ ಸಾಫಲ್ಯತೆ - ಇನ್ನೊಂದೆಡೆ ಶ್ರೀಮಾತೆಯ ಕೃಪೆ, ಇವೆರಡರಿಂದ ನಾವು ಜೀವನವೆಂಬ ದುಃಖ ಸಾಗರವನ್ನು ದಾಟಬಹುದು. **'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್'** - *(ಗೀತಾ, ೨.೪೦).* ಹೀಗಾಗಿ ಈ ಗ್ರಂಥದ ಪ್ರತಿಯೊಂದು ಪುಟವೂ ಸಾಧನೆಯ ಕೈದೀವಿಗೆ.

ಸಾಧಕನಿಗೆ ಮುಖ್ಯವಾಗಿ ಇರಬೇಕಾದುದು ಜಗತ್ತಿನ ಸರ್ವ ಬಂಧನಗಳಿಂದ ಬಿಡುಗಡೆಯಾಗಿ ಮುಕ್ತನಾಗಬೇಕೆಂಬ ಬಯಕೆ. ಅದಕ್ಕಾಗಿಯೇ ನಿರ್ದಿಷ್ಟವಾಗಿ ಮಾಡಬೇಕಾದ ಎಡೆಬಿಡದ ಪ್ರಯತ್ನಗಳಿಗೆ ಸಿದ್ಧನಾಗಿರಬೇಕು. ಶ್ರೀಮಾತೆಯವರು, ''ಮಗೂ, ಸಂಸಾರವೆಂದರೆ ಕೆಸರಿನ ಕೊಳ. ಅದರಲ್ಲಿ ಬಿದ್ದುಬಿಟ್ಟರೆ ಏಳುವುದು ಅತ್ಯಂತ ಕಷ್ಟ. ಬ್ರಹ್ಮ, ವಿಷ್ಣು ಮೊದಲಾದವರೇ ಅದರಲ್ಲಿ ಸಿಕ್ಕು ಉಸಿರುಗಟ್ಟಿ ಹೋಗುತ್ತಾರೆ ಎಂದಮೇಲೆ ಮನುಷ್ಯ ಎಷ್ಟರವನು!'' ಎನ್ನುತ್ತಾರೆ. ಇಂತಹ ಭಯಾನಕ ಸಂಸಾರದ ಸೆಳೆತದಿಂದ ಬಿಡುಗಡೆ ಹೊಂದುವಲ್ಲಿ ಸಾಧಕನು ಸಫಲನಾಗುವನೆ? ರಹಸ್ಯವೇನೆಂದರೆ ಒಂದಲ್ಲ ಒಂದು ದಿನ ಎಲ್ಲ ಜೀವಿಗಳು ಪಾರಾಗಲು ಪ್ರಯತ್ನಿಸಲೇಬೇಕು, ಸಾಧನೆಯ ಹಾದಿಯನ್ನು ತುಳಿಯಲೇಬೇಕು. ಈಗ ನವಾವತಾರದ ಒಳ್ಳೆಯ ಗಾಳಿ ಬೀಸುತ್ತಿದೆ. ಜಾಣರಾಗಿ ಈಗ ನಮ್ಮ ಜೀವನ ನೌಕೆಯ ಪರದೆಯನ್ನು ಬಿಚ್ಚಿದರೆ ಸುಲಭವಾಗಿ ದಡ ಸೇರಬಹುದು. ಹಾಗೇನಾದರೂ ಸಂಕಲ್ಪಿಸಿದಲ್ಲಿ, ಸಾಧಕ ಜೀವನದಲ್ಲಿ ಬರುವ ಏಳು ಬೀಳುಗಳ ಮಧ್ಯೆ ತನ್ನನ್ನು ಯಾವುದೋ ಒಂದು ಅಲೌಕಿಕ ಮಾತೃಶಕ್ತಿ ಕೈಹಿಡಿದು ಮುನ್ನಡೆಸುತ್ತಿದೆ ಎಂಬ ನಂಬಿಕೆ, ಹಿಂದೆ ಆಗಿ ಹೋಗಿರುವ ಅನು

ಯಾಯಿಗಳ ಮತ್ತು ಭಕ್ತರ ಮೇಲೆ ಆಮ್ನಾಯ ಶ್ರದ್ಧೆ, ವರ್ತಮಾನದಲ್ಲಿ ಇದೇ ಮಾರ್ಗದಲ್ಲಿ ಮುನ್ನಡೆಯುತ್ತಿರುವವರ ಸತ್ಸಂಗ, ಕೊನೆಗೆ ದಿವ್ಯತ್ರಯರ, ಶಾಸ್ತ್ರೋಪದೇಶಗಳಲ್ಲಿ ಎಳ್ಳಷ್ಟೂ ಸಂಶಯ ರಹಿತ ವಿಶ್ವಾಸ - ಇಷ್ಟು ಆರಂಭ ಹೂಡಿಕೆಯಿದ್ದಲ್ಲಿ (ಇನಿಷಿಯಲ್ ಇನ್ವೆಸ್ಟ್ಮೆಂಟ್) ಶ್ರೀರಾಮಕೃಷ್ಣರ ಪಥದಲ್ಲಿ ಮುಂದುವರಿಯಬಹುದು. ಹಾಗಿಲ್ಲದಿದ್ದಲ್ಲಿ ಬೇರೆ ಮಾರ್ಗಗಳಲ್ಲಿ ಎಷ್ಟೇ ಪ್ರಯತ್ನ ಪಟ್ಟರೂ ಮುಂದುವರೆಯದೆ ಕೊನೆಗೆ ನಿರಾಶೆ, ಆಧ್ಯಾತ್ಮಿಕ ಜೀವನದ ವಿಷಯದಲ್ಲಿಯೇ ಅಪನಂಬಿಕೆ ಕಾಡುವುದು. ಶ್ರೀಮಾತೆಯವರು ಈ ಪಥದಲ್ಲಿ ನಮ್ಮನ್ನು ಕೈ ಹಿಡಿದು ಕರೆದುಕೊಂಡು ಹೋಗಲಿದ್ದಾರೆ. ನಮ್ಮನ್ನು ಶ್ರೀರಾಮಕೃಷ್ಣರ ಬಳಿಗೆ ಸೇರಿಸಿ, ಪುನಃ ಮಾರ್ಗ ಮುಖಕ್ಕೆ ಬರುತ್ತಾರೆ ಮತ್ತೆ ಉಳಿದವರನ್ನು ಕರೆದುಕೊಂಡು ಹೋಗಲು.

ಕಲಿಯುಗದ ಸಾಧಕರಿಗೆ ದುಷ್ಟ ಇಂದ್ರಿಯಗಳು ಮತ್ತು ದುರ್ಬಲ ಮನಸ್ಸು. ಅವುಗಳ ತೃಷ್ಣಾಸಂಗ ಬಯಕೆಯನ್ನು ಪೂರೈಸಲು ಕೇವಲ ಬೆರಳುತುದಿಯ ಸ್ಪರ್ಶದಿಂದ ಸಾರ್ಥಕಗೊಳಿಸುವ ಆಧುನಿಕ ಅಂತರ್ಜಾಲ ಯುಗ. ಇಂತಹ ಜಗತ್ತಿಗೆ ಭಗವಂತನನ್ನು ಪಡೆದುಕೊಳ್ಳುವ ಸುಲಭ ಸಾಧನೆ ಮತ್ತು ಆಶ್ವಾಸನೆಗಳನ್ನು ಮಾತೆಯವರು ಈ ಗ್ರಂಥದಲ್ಲಿ ಇತ್ತಿದ್ದಾರೆ. ಇದನ್ನು ಕುರಿತು ಒಂದಿಷ್ಟು ನೋಡೋಣ.

**ಸಂಸಾರಪಂಕ :** ಈ ಸಂಸಾರವನ್ನು ಘೋರ ದುಃಖಾರಣ್ಯಕ್ಕೆ ಶ್ರೀಶಂಕರರು **'ಲಕ್ಷ್ಮೀನೃಸಿಂಹಕರಾವಲಂಬನ ಸ್ತೋತ್ರ**'ದಲ್ಲಿ ತುಲನೆ ಮಾಡುತ್ತಾರೆ. ಈಗ ಎಷ್ಟೇ ಕಷ್ಟವಿದ್ದರೂ ಮುಂದೆ ನಮಗೆ ಇಂದ್ರಿಯಗಳ ಮೂಲಕವೇ, ಈ ಮರ್ತ್ಯಲೋಕದಲ್ಲಿಯೇ ಸುಖ-ಭೋಗಗಳು ಸಿಗಬಹುದೆಂಬ ಮಾಯೆಯಿಂದಲೇ ಸಂಸಾರವು ನಡೆಯುತ್ತಿರುವುದು. ಕಷ್ಟವು ಸಾಕಪ್ಪಾ ಸಾಕು ಎನ್ನಿಸುವವರೆಗೂ ನಾವು ಸುಖಾನ್ವೇಷಣೆಯಲ್ಲಿಯೇ ಇರುತ್ತೇವೆ. ಮರೀಚಿಕೆಯನ್ನು ಕಂಡು ಬಾಯಾರಿಕೆ ತಣಿಸಲು ಅರಸುವಂತೆ ಅಲೆದಲೆದು ಅತಿ ದಣಿದು ಈ ಜಗತ್ತಿನಲ್ಲಿ ಸುಖವಿಲ್ಲವೆಂಬ ದೃಢ ನಿರ್ಣಯಕ್ಕೆ ಬಂದ ಮೇಲೆ ಈ ಸಂಸಾರ ಪಂಕದಿಂದ ಹೊರಬರಲು ಬೇರೆ ದಾರಿ ಹುಡುಕುತ್ತೇವೆ.

ಶ್ರೀಮಾತೆಯವರು ಹೇಳುತ್ತಾರೆ ''ಸಂಸಾರದಲ್ಲಿ ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ಅದೇನು ಸುಖ ಅನುಭವಿಸುತ್ತಾರೋ! ಕಾಮಿನೀ, ಕಾಂಚನ ಇವೆರಡರಲ್ಲೇ ಅವರು ಮಗ್ನರಾಗಿ ಎಲ್ಲವನ್ನೂ ಮರೆತುಬಿಟ್ಟಿದ್ದಾರೆ. ಸಂಸಾರದಲ್ಲಿ ಎಲ್ಲವೂ ದುಃಖದಲ್ಲಿ ಕೊನೆಗೊಳ್ಳುವುದು.'' ಒಬ್ಬ ಭಕ್ತ ಹೋದ ಮೇಲೆ ಶ್ರೀಮಾತೆಯವರು ಹೇಳುತ್ತಾರೆ, ''ಅವನು ಸಂಸಾರದಲ್ಲಿ ಮುಳುಗಿಬಿಟ್ಟಿದ್ದಾನೆ! ಬಹಳ ಮಂದಿ ಮಕ್ಕಳ ತಂದೆಯಾಗಿದ್ದಾನೆ. ಹೇಳುತ್ತಾನೆ, ಶ್ರೀರಾಮಕೃಷ್ಣರ ದರ್ಶನವೇಕೆ ಆಗುತ್ತಿಲ್ಲ? ಅಂತ. ಶ್ರೀರಾಮಕೃಷ್ಣರ ಬಳಿಗೆ ಬಹಳ ಮಂದಿ ಸ್ತ್ರೀಯರು ಬರುತ್ತಿದ್ದರು. ಅವರು, 'ನಮಗೆ ಭಗವಂತನಲ್ಲಿ ಮನಸ್ಸು ನಿಲ್ಲುತ್ತಿಲ್ಲ ಏಕೆ?' ಎಂದು ಕೇಳುವಾಗ ಅವರಿಗೆ ಶ್ರೀರಾಮಕೃಷ್ಣರು, 'ಇನ್ನೂ ನಿಮ್ಮ ದೇಹದಿಂದ ಹೆರಿಗೆಮನೆಯ ವಾಸನೆ ಹೋಗಿಲ್ಲ. ಮೊದಲು ಹೆರಿಗೆ ಮನೆಯ ವಾಸನೆ ಹೊರಟುಹೋಗಲಿ. ಈಗ ಅವಸರವೇಕೆ? ಕ್ರಮೇಣ ಎಲ್ಲವೂ ಸಾಧ್ಯವಾಗುವುದು. ಈ ಜನ್ಮದಲ್ಲಿ ನಾವು ಭೇಟಿಯಾದೆವು, ಮುಂದಿನ ಜನ್ಮದಲ್ಲಿ ಮತ್ತೆ ಭೇಟಿಯಾಗಬಹುದು, ಆಗ ಅದೆಲ್ಲ ಸಾಧ್ಯವಾಗುವುದು' ಎನ್ನುತ್ತಿದ್ದರು.''

ಒಮ್ಮೆ ಪ್ರಸನ್ನ ಮಾವ ಬಂದು ಶ್ರೀಮಾತೆಗೆ ಹೇಳಿದರು ''ಅಕ್ಕಾ, ನಾನು ಕೇಳಿದ್ದೇನೆ. ನೀನು ಯಾರಿಗೋ ಕನಸಿನಲ್ಲಿ ಬಂದು ದರ್ಶನ ಕೊಟ್ಟೆ, ಅವರಿಗೆ ಮಂತ್ರದೀಕ್ಷೆಯನ್ನೂ ಕೊಟ್ಟೆ; ಅವರಿಗೆ ಮುಕ್ತಿ ಲಭಿಸುತ್ತದೆ ಎಂದೂ ಹೇಳಿದ್ದೀಯಂತೆ. ನಮ್ಮನ್ನು ನಿನ್ನ ಮಡಿಲಲ್ಲಿಟ್ಟು ಬೆಳೆಸಿದೆ, ದೊಡ್ಡವರನ್ನಾಗಿ ಮಾಡಿದೆ, ನಾವು ಯಾವಾಗಲೂ ಹೀಗೆಯೇ ಇರಬೇಕೇ? ಅದಕ್ಕೆ ನಗುತ್ತ ಶ್ರೀಮಾತೆಯವರು ಉತ್ತರ ಕೊಟ್ಟರು 'ಶ್ರೀ ರಾಮಕೃಷ್ಣರು ಏನು ಮಾಡುತ್ತಾರೋ ಹಾಗೆ ಆಗುವುದು. ನೋಡು ಶ್ರೀಕೃಷ್ಣ ಗೊಲ್ಲಬಾಲಕರೊಂದಿಗೆ ಎಷ್ಟೊಂದು ಆಟವಾಡುತ್ತಿದ್ದ, ನಗುತ್ತಿದ್ದ, ಅಲೆಯುತ್ತಿದ್ದ! ಅವರ ಎಂಜಲನ್ನೂ ತಿನ್ನುತ್ತಿದ್ದ. ಅವರಿಗೆ ಕೃಷ್ಣ ಯಾರೆಂದು ಅರ್ಥವಾಯಿತೆ?'

''ಆಸೆಯಿಂದಲೇ ಎಲ್ಲವೂ ಉಂಟಾಗುತ್ತವೆ. ಆಸೆಗಳಿಲ್ಲದಿದ್ದರೆ ಯಾವ ಬಂಧನವಿದ್ದೀತು? ನೋಡು, ನಾನು ಈ ಸಂಸಾರವೆಲ್ಲವನ್ನೂ ನಡೆಸಿಕೊಂಡು ಹೋಗುತ್ತಿದ್ದೇನೆ. ಆದರೆ ನನಗೆ ಯಾವುದೇ ಆಸೆಗಳಿಲ್ಲ. ಸ್ವಲ್ಪವೂ ಇಲ್ಲ. ಎಲ್ಲಿಯ ತನಕ ನಾನು ಎನ್ನುವುದು ಇರುವುದೋ ಅಲ್ಲಿಯ ತನಕ ಆಸೆಗಳು ಇದ್ದೇ ಇರುತ್ತವೆ.''

**ಕರ್ಮಯೋಗ :** ನಾವು ಮಾಡುವ ಎಲ್ಲಾ ಕೆಲಸಗಳನ್ನೂ ಆಧ್ಯಾತ್ಮಿಕ ಸಾಧನೆಯೆಂಬ ದೃಷ್ಟಿಯಿಂದ ಮಾಡುವುದೆ ಕರ್ಮಯೋಗ. ಪಾಲಿಗೆ ಬಂದ ಕೆಲಸವನ್ನು ಸರಿಯಾದ ಸಮಯಕ್ಕೆ, ಒಪ್ಪಾಗಿ, ಉತ್ಸಾಹದಿಂದ, ಜಾಗ್ರತರಾಗಿ ಮಾಡುವುದು ಒಳ್ಳೆ ಕೆಲಸಗಾರನ ರೀತಿ. ಕರ್ಮವು ಸಾಧನೆಗೆ ಬಾಧಕವೆಂಬ ಭ್ರಾಂತಿಯಿಂದ ಕೆಲಸಗಳಿಂದ ದೂರವಾಗಿ, ತೀವ್ರ ಸಾಧನೆಯನ್ನು ಮಾಡಲು ಬೇಕಾದ ಚಿತ್ತಶುದ್ಧಿ ಇಲ್ಲದೆ, ಸಮಯವನ್ನು ಉಪಯೋಗಿಸಲು ಬಾರದೆ ಸೋಮಾರಿಗಳಾಗಿ ಆಧ್ಯಾತ್ಮಿಕ ವ್ಯಕ್ತಿಗಳೆಂದು ಸೋಗು ಹಾಕುತ್ತ ನಿದ್ರೆ, ಕಾಡು ಹರಟೆ, ಪರಾನ್ನ ಪರಾಯಣರಾಗಿ ಅಂಡಲೆಯುತ್ತಾರೆ. '**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್। ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥**' (ಕೈ-ಕಾಲು ಮೊದಲಾದ ಕರ್ಮೇಂದ್ರಿಯಗಳ ಮೂಲಕ ಕೆಲಸವನ್ನು ಮಾಡದೆ ಭೋಗವಸ್ತುಗಳ ವೃತ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಆನಂದವನ್ನು ಅನುಭವಿಸುತ್ತಿರುವನಿಗೆ ಮಿಥ್ಯಾಚಾರಿಯೆಂದು ಹೇಳುತ್ತಾರೆ). ಆದರೆ 'ಪರೋಪಕಾರಾರ್ಥಮಿದಂ ಶರೀರಮ್' ಎನ್ನುತ್ತ ನಾವು ಮಾಡುವ ಸಕಲ ಕ್ರಿಯೆಯೂ ಭಗವಂತನ ಸೇವೆ, ಈ ಕರ್ಮ ಫಲವೂ ಅವನಿಗೇ ಅರ್ಪಿತವಾಗಲಿ ಎಂಬ ಭಾವನೆಯಿಂದ ನಡೆಸಿದ ತಪೋಮಯ

ಜೀವನದಿಂದ ರಜಸ್ಸನ್ನು ದಾಟಿ, ಚಿತ್ತಶುದ್ಧಿ ದ್ವಾರಾ ಸತ್ತ್ವಕ್ಕೆ ಏರ ಬಹುದು. ಶ್ರೀಮಾತೆಯವರಿಗೆ ಆಲಸ್ಯವೆಂಬುದೇ ಇರಲಿಲ್ಲ. ಇಡೀ ದಿವಸ ಎಲ್ಲಾ ಕೆಲಸಗಳನ್ನೂ ತಾವೇ ಮಾಡುತ್ತಿದ್ದರು. ಅವರ ಪ್ರತಿಯೊಂದು ಕಾರ್ಯವೂ ಪರರ ಯೋಗಕ್ಷೇಮಕ್ಕಾಗಿ ನಡೆಸು ತ್ತಿರುವುದನ್ನು ಸ್ಪಷ್ಟವಾಗಿ ಕಾಣಬಹುದಾಗಿತ್ತು. ಅದರೊಡನೆಯೇ ಒಂದು ಲಕ್ಷ ಜಪವನ್ನೂ ಮಾಡುತ್ತಿದ್ದರು. ಶ್ರೀರಾಮಕೃಷ್ಣರ ಪರಂ ಪರೆಯಲ್ಲಿ ಕರ್ಮಯೋಗವು ಸಾಧನೆಯ ಅವಿಭಾಜ್ಯ ಅಂಗ. ಸರಯೂಬಾಲಾದೇವಿ ಹೇಳುತ್ತಾರೆ ''ಒಬ್ಬಾಕೆ ಸೇವಕಿಗೆ ಶ್ರೀಮಾತೆ ಹೇಳಿದರು ಗಂಧ ತೇಯು ವಾಗ ಅದು ಮುದ್ದೆಯಾಗಬಾರದು, ಹುಳ ತಿನ್ನದ ಹೂ, ಬಿಲ್ವಪತ್ರೆಗಳನ್ನು ಆರಿಸಬೇಕು. ಪೂಜೆ ಮಾಡು ವಾಗ ಅಥವಾ ಪೂಜೆಗೆ ಸಾಮಾಗ್ರಿಗಳನ್ನು ಅಣಿಗೊಳಿಸುವಾಗ ಆ ಸಾಮಾನುಗಳಿಗೆ ದೇಹದ ಭಾಗಗಳು ಅಥವಾ ಕೂದಲು, ಬಟ್ಟೆಬರೆ ಗಳನ್ನು ಮುಟ್ಟಿಸಬಾರದು. ವಿಶೇಷ ಗಮನ ಕೊಟ್ಟು ಈ ರೀತಿ ಸೇವೆ ಮಾಡಬೇಕು. ನೈವೇದ್ಯ ಇತ್ಯಾದಿಗಳನ್ನು ಸರಿಯಾದ ಸಮಯದಲ್ಲಿ ಮಾಡಬೇಕು.'' ಒಮ್ಮೆ ಸ್ವಾಮಿ ಪರಮೇಶ್ವರಾನಂದರು ಮಠದ ಕೆಲಸ ಕಾರ್ಯಗಳು ಹೆಚ್ಚಾಗಿ, ತಾವು ತಪಸ್ಸು ಮಾಡಲು ಹೋಗಲು ಶ್ರೀಮಾತೆ ಯವರ ಅನುಮತಿ ಕೇಳಿದಾಗ ಶ್ರೀಮಾತೆ,''ಅದೇನು ಮಗೂ? ನೀನು ನನ್ನ ಕೆಲಸ ಮಾಡುತ್ತಿದ್ದೀಯಾ, ಶ್ರೀರಾಮಕೃಷ್ಣರ ಕೆಲಸ ಮಾಡುತ್ತಿದ್ದೀಯಾ. ಇದು ತಪಸ್ಸಿಗಿಂತ ಕಡಿಮೆಯೆ?'' ಎಂದರು. ಪಾಲಿಗೆ ಬಂದ ಕರ್ತವ್ಯವನ್ನು ಸಾಧನೆಯನ್ನಾಗಿ ಪರಿ ವರ್ತಿಸಲು ಶ್ರೀಮಾತೆಯವರ ಜೀವನ ಆದರ್ಶಪ್ರಾಯ.

**ಆಹಾರ ಶುದ್ಧಿ** : ನಾವು ತಿನ್ನುವ ಆಹಾರದ ಸ್ಥೂಲ-ಸೂಕ್ಷ್ಮ ಘಟಕಗಳಿಂದ ಸಪ್ತಧಾತುಗಳು ತಯಾರಾಗುತ್ತವೆ. ಈ ನಮ್ಮ ದೇಹವು ಅನ್ನದಿಂದ ತಯಾರಾಗಿದೆ. ಪಂಚಕೋಶಗಳಲ್ಲಿ ಪ್ರಥಮ ವಾಗಿ ನಿಲ್ಲುವುದು ಅನ್ನಮಯಕೋಶ. ಶರೀರ ಶುದ್ಧತೆ-ಅಶುದ್ಧತೆಯು ಮನಸ್ಸು ಮತ್ತು ಬುದ್ಧಿಯ ಮೇಲೆ ಪರಿಣಾಮ ವನ್ನು ಉಂಟು ಮಾಡುತ್ತದೆ. ಶ್ರೀಮಾತೆಯವರು ನಮ್ಮ ಆಹಾರ ಕ್ರಮ ಹೇಗಿರಬೇಕೆಂದು ಶಿಷ್ಯರಿಗೆ ತಿಳಿಸುತ್ತಿದ್ದರು. ''ಏನೇನು ತಿನ್ನುತ್ತೀಯೋ ಅದನ್ನು ಭಗವಂತನಿಗೆ ಅರ್ಪಿಸಿ ತಿನ್ನು. ಪ್ರಸಾದ ವಲ್ಲದ ಅನ್ನವನ್ನು ಸೇವಿಸಬಾರದು. ಎಂತಹ ಆಹಾರ ಉಣ್ಣು ತ್ತೀಯೋ ಅಂತಹ ರಕ್ತ ಉಂಟಾಗುವುದು. ಶುದ್ಧ ಆಹಾರ ಉಂಡರೆ ಶುದ್ಧ ರಕ್ತವುಂಟಾಗುವುದು, ಶುದ್ಧ ಮನಸ್ಸು ಉಂಟಾ ಗುವುದು, ಶಕ್ತಿ ದೊರಕುವುದು. ಶುದ್ಧ ಮನಸ್ಸಿನಿಂದ ಶುದ್ಧವಾದ ಭಕ್ತಿಯುಂಟಾಗುವುದು, ಪ್ರೇಮ ಉಂಟಾಗುವುದು. ಮೊದಲ ಬಾರಿಯ ಶ್ರಾದ್ಧದ ಅನ್ನವನ್ನು ತಿನ್ನಬಾರದು. ಅದರಿಂದ ಭಕ್ತಿಗೆ ಭಾರೀ ಹಾನಿಯಾಗುವುದು. ಇತರ ಶ್ರಾದ್ಧಗಳ ಅನ್ನ ತಿಂದರೂ ಪರವಾಗಿಲ್ಲ, ಮೊದಲ ಶ್ರಾದ್ಧದ ಅನ್ನವನ್ನು ತಿನ್ನಲೇಬಾರದು. ಶ್ರೀರಾಮಕೃಷ್ಣರು ಅದನ್ನು ನಿಷೇಧಿಸಿದ್ದರು.''

**ಸತ್ಯಪರಿಪಾಲನೆ** : ಸತ್ಯಸ್ವರೂಪನಾದ ಭಗವಂತನನ್ನು ಪಡೆ ಯಲು, ನಮ್ಮ ನಿತ್ಯ ಜೀವನದಲ್ಲಿ ಸತ್ಯವನ್ನು ನುಡಿಯುವುದು, ಸತ್ಯವನ್ನು ಪರಿಪಾಲನೆ ಮಾಡುವುದು ಅತ್ಯಂತ ಆವಶ್ಯವಾದ ಅಂಗ. ಕಲಿಯುಗದಲ್ಲಿ ಸತ್ಯಪರಿಪಾಲನೆಯೇ ತಪಸ್ಸು. ಗುಹೆಗೋ, ಕಾಡಿಗೋ ಹೋಗಿ ಮಾಡುವ ತಪಸ್ಸು ಕೇವಲ ದೇಹ ದಂಡನೆ ಯಷ್ಟೇ. ಅಲ್ಲಿ ನಮ್ಮ ವ್ಯಕ್ತಿತ್ವದ ಸತ್ವ ಪರೀಕ್ಷೆಯಾಗುವುದೇ ಇಲ್ಲ. ಈಗಿನ ಕಾಲದಲ್ಲಿ ಸತ್ಯವನ್ನು ಪಾಲಿಸುವುದು ಅತ್ಯಂತ ಕಷ್ಟ. ಇಂದು ಮೌಂಟ್ ಎವರೆಸ್ಟನ್ನು ಅನೇಕರು ರಾಗಿಗುಡ್ಡ ಏರುವಂತೆ ಏರು ತ್ತಾರೆ, ಗಹನ ಕಾನನಕ್ಕೆ ನುಗ್ಗುತ್ತಾರೆ, ಆಕಾಶದಿಂದ ಧುಮುಕುತ್ತಾರೆ, ಸಮುದ್ರದ ಆಳವನ್ನು ತಟ್ಟುತ್ತಾರೆ. ಅವರಿಗೆ ನೂರಕ್ಕೆ ನೂರು ಭಾಗ ಸತ್ಯ ಪರಿಪಾಲನೆ ಮಾಡಲು ಪ್ರಯತ್ನಿಸಿದ್ದಾರೇನು? ಎಂದು ಕೇಳಿ! ಯಾವುದನ್ನು ಪಾಲಿಸಲು ಕಷ್ಟಕರವೋ ಅದೇ ತಪಸ್ಸು. ಆದ್ದರಿಂದ ಸತ್ಯಪರಿಪಾಲನೆಯೆಂಬುದು ನಿಜವಾದ ತಪಸ್ಸೇ ದಿಟ.

ಶ್ರೀಮಾತೆಯವರು ಸತ್ಯಪರಿಪಾಲನೆಯನ್ನು ಕುರಿತು ಹೇಳು ತ್ತಾರೆ ''ಈ ಕಲಿಯುಗದಲ್ಲಿ ಕೇವಲ ಸತ್ಯಕ್ಕೆ ಬದ್ಧವಾಗಿದ್ದರೆ ಭಗ ವಂತನ ದರ್ಶನವಾಗುತ್ತದೆ. ಶ್ರೀರಾಮಕೃಷ್ಣರು ಹೇಳುತ್ತಿದ್ದರು, 'ಯಾರು ಸತ್ಯವಚನವನ್ನು ಆಡುತ್ತಾರೋ ಅವರು ಭಗವಂತನ ಮಡಿಲಲ್ಲೇ ಮಲಗಿದ್ದಾರೆ.' ಅಂತ''

**ಇಂದ್ರಿಯಸಂಯಮ** : ಭೋಗದ ವಸ್ತುಗಳು ನಮ್ಮ ಸುತ್ತ ಮುತ್ತ ಇದ್ದರೆ ಇಂದ್ರಿಯಗಳು ಅವನ್ನು ಅನುಭವಿಸಲು ನಮ್ಮ ಚಿತ್ತವನ್ನು ಪ್ರಬಲವಾಗಿ ಸೆಳೆಯುತ್ತವೆ. ಸಾಧಕನು ಪ್ರತಿದಿನ ಬೆಳಗ್ಗೆ ಸಂಜೆ ನಿಯಮಿತ ಸಮಯದಲ್ಲಿ ಜಪ, ಧ್ಯಾನ ಮತ್ತು ಆಗಾಗ ಏಕಾಂತ ಸ್ಥಳದಲ್ಲಿ ಸಾಧನೆಯನ್ನು ಮಾಡುತ್ತಿರಬೇಕು. ಕೆಲಸದ ವೇಳೆಯಲ್ಲಿ ಪ್ರಾಪಂಚಿಕ ವ್ಯವಹಾರಕ್ಕೆ ತೊಡಗಿಸಿ ಕೊಂಡಾಗ ಮನಸ್ಸು ಮಲಿನವಾಗದಂತೆ ಜಾಗರೂಕನಾಗಿರಬೇಕು.

**ಶ್ರೀಮಾತೆಯವರ ಉಪದೇಶಗಳು:**

''ಮನುಷ್ಯರ ಬುದ್ಧಿ ಎಷ್ಟರಮಟ್ಟಿನದು? ಏನು ಕೇಳಬೇಕಾಗಿ ದೆಯೋ ಅದರ ಬದಲು ಇನ್ನೇನನ್ನೋ ಕೇಳುತ್ತಾನೆ. ಶಿವನ ಮೂರ್ತಿ ಮಾಡಲು ಹೋಗಿ ಮಂಗನ ಮೂರ್ತಿ ಮಾಡಿದಂತೆ. ಭಗವಂತನಲ್ಲಿ ಶರಣಾಗತನಾದರೆ ಒಳ್ಳೆಯದು. ಯಾವಾಗ ಏನೇನು ಅಗತ್ಯವೋ ಅದನ್ನೆಲ್ಲ ಅವನೇ ಕೊಡುತ್ತಾನೆ. ಆದರೂ ಭಕ್ತಿಗಾಗಿ ಮತ್ತು ಮನಸ್ಸಿನಲ್ಲಿ ಆಸೆಗಳಿಲ್ಲದಂತಾಗಲು ಪ್ರಾರ್ಥಿಸಬೇಕು. ಈ ಬಯಕೆಗಳು ಇತರ ಬಯಕೆಗಳ ಸಾಲಿಗೆ ಸೇರುವುದಿಲ್ಲ.''

ಒಮ್ಮೆ ಸ್ವಾಮಿ ಶಾಂತಾನಂದರು ''ಅಮ್ಮಾ, ಮನಸ್ಸು ಸ್ಥಿರವಾಗುವುದಿಲ್ಲ ಏಕೆ? ಭಗವಂತನ ಕಡೆಗೆ ಚಿಂತಿಸತೊಡಗಿದಾಗ ಲೆಲ್ಲ ಮನಸ್ಸು ನಾನಾ ವಿಷಯಗಳ ಕಡೆಗೆ ಹೋಗುತ್ತದೆ.'' ಎಂದು ಕೇಳಿದರು.

ಶ್ರೀಮಾತೆ - ''ಅದು (ಮನಸ್ಸಿನ ದೌರ್ಬಲ್ಯ) ಪ್ರಕೃತಿ ನಿಯಮ. ಹೇಗೆ ಅಮಾವಾಸ್ಯೆ, ಹುಣ್ಣಿಮೆ ಎನ್ನುವುದಿದೆಯೋ ಹಾಗೆ ಮನಸ್ಸೂ ಕೆಲವೊಮ್ಮೆ ಉನ್ನತಭಾವದಿಂದ ತುಂಬಿರುತ್ತದೆ, ಕೆಲವೊಮ್ಮೆ ಕೆಟ್ಟ ಭಾವನೆಗಳಿಂದ ತುಂಬಿರುತ್ತದೆ. ಮನಸ್ಸು




ಯಾವಾಗಲೂ ಕೆಟ್ಟ ಕೆಲಸದತ್ತಲೇ ಹರಿಯುವುದು. ಒಳ್ಳೆಯ ಕೆಲಸ ಮಾಡಬೇಕೆಂದಿದ್ದರೂ ಮನಸ್ಸು ಅತ್ತ ಸಾಗದು. ಹಣ, ಹೆಂಡತಿ, ಮಕ್ಕಳು ಇಂಥ ವಿಷಯಗಳ ಕಡೆಗೆ ಮನಸ್ಸು ಹೋಗುವುದು ಕೆಟ್ಟದ್ದು. ದಿನದ ಕೆಲಸಕಾರ್ಯಗಳ ಕಡೆಗೆ ಮನಸ್ಸು ಹೋಗುವುದು ಸ್ವಾಭಾವಿಕವೇ. ಹಿಂದೆ ನಾನು ಪ್ರತಿದಿನ ಬೆಳಗ್ಗೆ ಮೂರು ಗಂಟೆಗೇ ಎದ್ದು ಧ್ಯಾನ ಮಾಡುತ್ತಿದ್ದೆ. ಒಂದು ದಿನ ದೇಹ ಚೆನ್ನಾಗಿರಲಿಲ್ಲ; ಆಲಸ್ಯವುಂಟಾಗಿ ನಾನು ಎಂದಿನಂತೆ ಎದ್ದು ಧ್ಯಾನ ಮಾಡಲಿಲ್ಲ. ಇದರಿಂದಾಗಿ ಕೆಲವು ದಿನ ಈ ಅಭ್ಯಾಸ ತಪ್ಪಿಹೋಯಿತು. ಆದ್ದರಿಂದ ಒಳ್ಳೆಯ ಕೆಲಸ ಮಾಡಲು ಆಂತರಿಕ ಪ್ರಯತ್ನ ಹಾಗೂ ದೃಢ ನಿಶ್ಚಯವಿರಬೇಕು. ನಹಬತ್‌ನಲ್ಲಿದ್ದಾಗ ನಾನು ರಾತ್ರಿ ಹೊತ್ತು ಗಂಗಾನದಿಯ ಪ್ರಶಾಂತವಾದ ನೀರಿನಲ್ಲಿ ಚಂದ್ರನ ಬಿಂಬವನ್ನು ನೋಡಿ ಅಳುತ್ತ ಪ್ರಾರ್ಥಿಸುತ್ತಿದ್ದೆ – ಚಂದ್ರನಲ್ಲೂ ಕಳಂಕವಿದೆ; ಆದರೆ ಚಂದ್ರಕಿರಣದಲ್ಲಿ ಯಾವುದೇ ಕಳಂಕವಿಲ್ಲ. ನನ್ನ ಮನಸ್ಸಿನಲ್ಲಿ ಯಾವುದೇ ಕಳಂಕವಿಲ್ಲದಿರಲಿ.'' ಆರಂಭದಲ್ಲಿ ಗಿಡ ಎಳೆಯದಾದಾಗ ಅದಕ್ಕೆ ನಾಲ್ಕೂ ಕಡೆ ಬೇಲಿ ಹಾಕಬೇಕು. ಅದೇ ಗಿಡ ದೊಡ್ಡ ಮರವಾದಾಗ ಆಡು, ದನ ಮುಂತಾದವುಗಳಿಂದ ಅದಕ್ಕೆ ಏನೂ ಆಗಲಾರದು. ನಿರ್ಜನ ಪ್ರದೇಶದಲ್ಲಿ ಸಾಧನೆ ಮಾಡುವುದು ಆವಶ್ಯಕ.''

ಪುರುಷರಿಗೆ ಶ್ರೀಮಾತೆಯವರು ''ಮಗೂ, ಹೆಂಗಸಿನ ಮರದ ಪ್ರತಿಮೆಯಾದರೂ ಸರಿ, ಆ ಕಡೆಗೆ ನೋಡಬೇಡ, ಅತ್ತ ಹೋಗಬೇಡ.'' ಎಂದು ಹೇಳುತ್ತಿದ್ದರು. ಹಾಗೆಯೇ ಸ್ತ್ರೀಯರಿಗೆ ''ಗಂಡು ಜಾತಿಯನ್ನು ಮಾತ್ರ ಎಂದಿಗೂ ನಂಬಬೇಡ. ಅನ್ಯ ಪುರುಷರನ್ನೇಕೆ, ನಿನ್ನ ತಂದೆಯಾಗಲಿ – ಏಕೆ ಸ್ವಯಂ ಭಗವಂತನೇ ಪುರುಷರೂಪ ಧರಿಸಿ ಬಂದು ನಿನ್ನ ಮುಂದೆ ನಿಂತರೂ ನಂಬಬೇಡ.'' ಕಾಮವೇನು ಒಂದೇ ಸಲ ಹೊರಟು ಹೋಗುವುದೆ? ದೇಹವಿರುವಾಗ ಅದು ಅಲ್ಪಸ್ವಲ್ಪವಿದ್ದೇ ಇರುವುದು. ಆದರೆ ನೋಡು ಹಾವಾಡಿಗನು ಹಾವನ್ನು ಮರುಳು ಮಾಡುವಂತೆ ಅದನ್ನು ಮಣಿಸಬಹುದು.''

''ಎಲ್ಲವೂ ಮನಸ್ಸನ್ನು ಅವಲಂಬಿಸಿದೆ. ಮನಸ್ಸು ಶುದ್ಧವಾಗದೆ ಏನೂ ಸಾಧ್ಯವಾಗದು. ಹಿಂದಿನ ಜನ್ಮದಲ್ಲಿ ಸಾಕಷ್ಟು ತಪಸ್ಸು, ಸಾಧನೆ ಮಾಡಿದ್ದರೆ ಮಾತ್ರ ಈ ಜನ್ಮದಲ್ಲಿ ಮನಸ್ಸು ಶುದ್ಧವಾಗಿರುತ್ತದೆ. ಚಿತ್ತದಲ್ಲಿ ಯಾವುದೇ ಹೊಸ ವಿಷಯದ ಅಲೆ ಎದ್ದಾಗ ಅದರಲ್ಲಿ ಮನಸ್ಸು ಕುತೂಹಲ ತಾಳುವುದು. ಏಕಾಕಿಯಾಗಿ ಅಳುತ್ತ ಅಳುತ್ತ ಭಗವಂತನಲ್ಲಿ ಪ್ರಾರ್ಥನೆ ಮಾಡಬೇಕು. ಅವನು ಮನಸ್ಸಿನ ಎಲ್ಲ ಮಾಲಿನ್ಯವನ್ನು ತೊಳೆಯುವನು ಹಾಗೂ ಎಲ್ಲ ದುಃಖಗಳನ್ನೂ ದೂರ ಮಾಡುವನು. ಅವನೇ ಎಲ್ಲ ತಿಳುವಳಿಕೆಯನ್ನು ನೀಡುವನು. ಸಣ್ಣಪುಟ್ಟ ಕೆಲಸಗಳಲ್ಲಿ ಮನಸ್ಸನ್ನು ತೊಡಗಿಸಿಕೊಂಡಿದ್ದರೆ ಕ್ಷುಲ್ಲಕ ಆಲೋಚನೆಗಳು ಏಳಲಾರವು. ಸುಮ್ಮನೆ ಕುಳಿತಿದ್ದರೆ ಅನೇಕ ರೀತಿಯ ಆಲೋಚನೆಗಳು ಮನಸ್ಸಿನಲ್ಲಿ ಏಳುತ್ತವೆ.''

''ಗುರು, ಕೃಷ್ಣ ವೈಷ್ಣವ – ಈ ಮೂವರ ದಯೆಯಾಯ್ತು
'ಒಂದ'ರ ದಯವಿಲ್ಲದೆ ಎಲ್ಲವು ಮುಳುಗಿಹೋಯ್ತು''

ಸಾಧನೆಯಲ್ಲಿ ಮುಂದುವರೆಯುತ್ತ ನಾವು ಮನಸ್ಸನ್ನು ವಿಷಯವಸ್ತುಗಳಿಂದ ಹೇಗೆ ಹಿಂದಿರುಗಿಸಬಹುದೆಂದು ಶ್ರೀಮಾತೆಯವರು ತಿಳಿಸಿಕೊಡುತ್ತಿದ್ದಾರೆ. ಒಮ್ಮೆ ಕಾಮಿನಿ ಎಂಬ ಕೆಲಸದಾಕೆ ಶ್ರೀಮಾತೆಯವರ ಮೊಳಕಾಲಿಗೆ ಸಂಧಿವಾತ ತೈಲವನ್ನು ಲೇಪಿಸುತ್ತಿದ್ದಳು. ಆಗ ಶ್ರೀಮಾತೆಯವರು, ''ದೇಹ ಬೇರೆ, ದೇಹಿ ಬೇರೆ. ದೇಹಿ ದೇಹವನ್ನೆಲ್ಲೆಡೆ ವ್ಯಾಪಿಸಿಕೊಂಡಿದೆ. ಆದ್ದರಿಂದಲೇ (ದೇಹಭಾವನೆಯಿಂದಲೇ) ನನಗೆ ಕಾಲಿನಲ್ಲಿ ನೋವು. ಇಲ್ಲಿಂದ ಮನಸ್ಸನ್ನು ತೆಗೆದುಕೊಂಡುಬಿಟ್ಟರೆ ಇನ್ನು ಮುಂದೆ ನೋವಾಗದು.'' ಇನ್ನೊಮ್ಮೆ ''ರಾಧುವಿನ ಮೇಲೆ ನನಗೀಗ ಸ್ವಲ್ಪವೂ ಮನಸ್ಸಿಲ್ಲ. ಅವಳ ರೋಗ ನೋಡಿ ನೋಡಿ ನನಗೀಗ ಸಾಕಾಗಿದೆ. ಬಲವಂತದಿಂದ ಮನಸ್ಸನ್ನು ಎಳೆದುತಂದು ಆಕೆಯ ಮೇಲಿಡಲು ಯತ್ನಿಸುತ್ತಿದ್ದೇನೆ'' ಎಂದರು.

**ವ್ಯಾಕುಲತೆ :** ಶ್ರೀಮಾತೆಯವರು ಮೇಲೆ ತಿಳಿಸಿದಂತೆ ಪಾಲಿಸಿದೊಡನೆ ಪ್ರಾಪಂಚಿಕತೆ ಎಂಬುದು ಒಮ್ಮೆಗೆ ಹೋಗುವುದಿಲ್ಲ. ವ್ಯಾಕುಲತೆಯನ್ನೂ ಜೊತೆಗೂಡಿಸಬೇಕು. ಆಗ ಚಿತ್ತಶುದ್ಧಿಯೂ ಸರಾಗವಾಗಿ ಆಗುತ್ತದೆ, ಜೊತೆಗೆ ವ್ಯಾಕುಲತೆಯು ಭಗವಂತನೆಡೆಗೆ ಮುನ್ನಡೆಸುತ್ತದೆ. ಶ್ರೀಮಾತೆಯವರು ಹೇಳುತ್ತಿದ್ದರು

''ಯಾರು ವ್ಯಾಕುಲತೆಯಿಂದ ಕರೆಯುತ್ತಾರೋ ಅವರಿಗೆ ಮಾತ್ರ ಶ್ರೀರಾಮಕೃಷ್ಣರನ್ನು ನೋಡಲು ಸಾಧ್ಯ.''

''ವೃಂದಾವನದ ಗೊಲ್ಲ ಹುಡುಗರು ಶ್ರೀಕೃಷ್ಣನನ್ನು ಜಪ-ಧ್ಯಾನಗಳಿಂದ ಪಡೆದರೆ? ಇಲ್ಲ, ಅವರು ಬಾರೋ, ತಿನ್ನೋ; ಇದನ್ನು ತೊಗೊಳ್ಳೋ ಎನ್ನುತ್ತ, ಪ್ರೀತಿಯಿಂದಲೇ ಶ್ರೀಕೃಷ್ಣನನ್ನು ಪಡೆದರು.''

**ಗುರು :** ವ್ಯಾಕುಲ ಜೀವಕ್ಕೆ ಭಗವಂತನೇ ಗುರುವನ್ನು ಕಳುಹಿಸುತ್ತಾನೆ. ಶ್ರೀಮಾತೆಯವರು ಸ್ವತಃ ಗುರುಸ್ಥಾನದಲ್ಲಿದ್ದರು. ಇತರ ಗುರುಗಳಿಗೂ, ಕುಲಗುರುಗಳಿಗೂ ಸಲ್ಲಿಸಬೇಕಾದ ಗೌರವಕ್ಕೆ ಕುಂದು ಬರದಂತೆ ನೋಡಿಕೊಳ್ಳುತ್ತಿದ್ದರು. ನಿಜವಾದ ಗುರುವು ಶಿಷ್ಯನ ಉದ್ಧಾರಕ್ಕಾಗಿ ಸ್ವಂತ ಸಾಧನೆಯಿಂದ ಗಳಿಸಿದ ಆಧ್ಯಾತ್ಮಿಕ ಶಕ್ತಿಯನ್ನು ಎರೆದು, ಅವನ ಕರ್ಮವನ್ನು ತಾನು ಅನುಭವಿಸುತ್ತಾನೆ. ಅಂತಹ ಉಚ್ಚ ಮಟ್ಟದ ಗುರು ಶ್ರೀಮಾತೆಯವರು. ಗುರುಪಾದಕಮಲದಲ್ಲಿ ಭಕ್ತಿ ಹಾಗೂ ಗುರುವಾಕ್ಯದಲ್ಲಿ ಶ್ರದ್ಧೆ ಹೇಗಿರಬೇಕೆಂದು ಇಲ್ಲಿ ತಿಳಿಸಿಕೊಡುತ್ತಾರೆ–

''ಗುರುವಾದವನು ಎಷ್ಟು ಸಲವಾದರೂ ಮರಳಿ ಕಳಿಸಿರಲಿ, ಯಾರಿಗೆ ನಿಜವಾಗಿಯೂ ಕೃಪೆ ಬೇಕಾಗಿದೆಯೋ ಅವರು ಭಿಕ್ಷೆಬೇಡಿಯಾದರೂ ಅವನ ಬಳಿಗೆ ಬರುತ್ತಾನೆ. ಒಟ್ಟಿನಲ್ಲಿ, ಯಾರಿಗೆ ಸಂಸಾರಸಾಗರವನ್ನು ದಾಟುವ ಸಮಯ ಬಂದೊದಗಿದೆಯೋ ಅವರು ಹಗ್ಗ ಕತ್ತರಿಸಿ ಬಂದೇ ಬಿಡುವರು. ಅವರನ್ನು ಯಾರೂ ಕಟ್ಟಿಹಾಕಲಾಗದು.

''ಮಂತ್ರದ ಮೂಲಕ ಶಕ್ತಿ ಹೋಗುತ್ತದೆ. ಗುರುವಿನ ಶಕ್ತಿ ಶಿಷ್ಯನಿಗೆ ಹೋಗುತ್ತದೆ, ಶಿಷ್ಯನದು ಗುರುವಿಗೆ ಬರುತ್ತದೆ. ಆದ್ದರಿಂದಲೇ ಮಂತ್ರದೀಕ್ಷೆ ನೀಡಿದಾಗ ಶಿಷ್ಯನ ಪಾಪಗಳನ್ನು ಸ್ವೀಕರಿಸಿ ದೇಹಕ್ಕೆ ಇಷ್ಟೊಂದು ವ್ಯಾಧಿಗಳು ಬರುತ್ತವೆ. ಗುರುವಾಗುವುದು ತುಂಬ ಕಠಿಣವಾದ ಕಾರ್ಯ. ಶಿಷ್ಯನ ಪಾಪಗಳನ್ನೆಲ್ಲ ಸ್ವೀಕರಿಸಬೇಕಾಗುವುದು. ಶಿಷ್ಯ ಪಾಪ ಮಾಡಿದರೆ ಗುರುವಿಗೂ ತಲುಪುವುದು. ಒಳ್ಳೆಯ ಶಿಷ್ಯ ದೊರಕಿದರೆ ಗುರುವಿಗೂ ಉಪಕಾರವಾಗುವುದು. ಕೆಲವರಿಗೆ ಬೇಗನೆ ಉನ್ನತಿಯಾಗುವುದು, ಇನ್ನು ಕೆಲವರಿಗೆ ನಿಧಾನವಾಗಿ ಆಗುವುದು. ಅವರವರ ಸಂಸ್ಕಾರ ಹೇಗೋ ಅದಕ್ಕೆ ಅನುಸಾರವಾಗಿ ಆಗುವುದು.

'ಗುರು ಕಿವಿಯಲ್ಲಿ ಮಂತ್ರವೀಯುವನು।
ಜಗದ್ಗುರು ಪ್ರಾಣದಲ್ಲಿ ಮಂತ್ರವೀಯುವನು॥'

ಒಮ್ಮೆ ಶ್ರೀಮಾತೆಯವರು ಮಂತ್ರನೀಡಿದ ನಂತರ ನುಡಿಯುತ್ತಾರೆ 'ಇಂದು ನಾನು ನಿನ್ನ ಪ್ರಾಣಕ್ಕೆ ಮಂತ್ರ ನೀಡಿದ್ದೇನೆ.'

**ಮಂತ್ರದೀಕ್ಷೆ, ಜಪ, ಧ್ಯಾನ ಸಾಧನೆ :** ಪರಂಪರಾಗತವಾಗಿ ಬಂದ ಮಂತ್ರವನ್ನು ಗುರುವು ಶಿಷ್ಯನಿಗೆ ನೀಡುವುದು ಮಂತ್ರ ದೀಕ್ಷೆ. ಈ ಮಂತ್ರವೆಂಬುದು ಆಯಾ ದೇವತೆಗಳ ಬೀಜಾಕ್ಷರ, ನಾಮ ಮತ್ತು ನಮಃ ಇತ್ಯಾದಿ ಮಂತ್ರಗಳನ್ನು ಒಳಗೊಂಡ ಶಕ್ತಿಯುತವಾದ ದೇವತಾ ಸ್ತುತಿ. ಮಂತ್ರದ ಜಪ, ಧ್ಯಾನ ಮುಂತಾದ ಸಾಧನೆಯ ಪ್ರಕ್ರಿಯೆಗಳು ರಹಸ್ಯವಾಗಿ ಕೇವಲ ಆ ಪರಂಪರೆಯ ಮೂಲಕ ಹರಿಯುತ್ತಿರುತ್ತದೆ. ಈ ಮಂತ್ರವನ್ನು ಆಯಾ ಪರಂಪರೆಯ ಪ್ರತಿ ಗುರುವೂ ಅದನ್ನು ಪ್ರಯೋಗಿಸಿ, ಅದರಿಂದ ಸಿದ್ಧಿ ಪಡೆದು ತನ್ನ ಶಿಷ್ಯನಿಗೆ ಶಕ್ತಿಯ ಸಮೇತ ಧಾರೆಯೆರೆಯುತ್ತಾನೆ. ಹೇಗೆ ವಿದ್ಯುಚ್ಛಕ್ತಿಯ ತಂತಿಗೆ ಇನ್ನೊಂದು ತಂತಿಯನ್ನು ಹೊಸೆದಾಗ ಆ ತಂತಿಯೊಳಗೂ ವಿದ್ಯುತ್ ಹರಿಯುವುದೋ ಹಾಗೆಯೇ ನಾವು ಆ ಪರಂಪರೆಗೆ ದೀಕ್ಷೆಯ ಮೂಲಕ ಬೆಸೆದುಕೊಂಡಾಗ ಶಕ್ತಿ ಸಂವಾಹಿನಿಗೆ ಒಳಗಾಗುತ್ತೇವೆ. ಒಂದು ವಿಶುದ್ಧ ಪರಂಪರೆಯ ಆದಿಗುರುವಾದ ಶ್ರೀರಾಮಕೃಷ್ಣರ ಮೊದಲ ಶಿಷ್ಯೆ ಶ್ರೀಮಾತೆಯವರು. ಹೀಗಾಗಿ ಯಾರು ಅವರಿಂದ ದೀಕ್ಷೆ ಪಡೆದರೋ, ಅವರು ಅರ್ಹರಾದರೂ, ಅನರ್ಹರಾದರೂ ಕೃತಾರ್ಥರಾಗಿ ಹೋದರು.

ಶ್ರೀಮಾತೆಯವರು ಹೇಳುತ್ತಾರೆ ''ಮಂತ್ರದ ಮೂಲಕ ದೇಹ ಪರಿಶುದ್ಧವಾಗುವುದು. ಭಗವಂತನ ಮಂತ್ರ ಜಪ ಮಾಡುವುದರಿಂದ ಮನುಷ್ಯ ಪವಿತ್ರನಾಗುವನು. ಕಡೆಯ ಪಕ್ಷ ದೇಹ ಶುದ್ಧಿಗಾದರೂ ಮಂತ್ರದೀಕ್ಷೆ ಪಡೆಯಬೇಕು. ವೈಷ್ಣವರು ಮಂತ್ರ ದೀಕ್ಷೆ ನೀಡಿದ ನಂತರ ಹೇಳುತ್ತಾರೆ, 'ಈಗ ಎಲ್ಲವೂ ನಿನ್ನ ಮನಸ್ಸನ್ನು ಅವಲಂಬಿಸಿದೆ.' ಜಪತಪಾದಿಗಳಿಂದ ಕರ್ಮಪಾಶ ಕತ್ತರಿಸಿ ಹೋಗುವುದು. ಆದರೆ ಪ್ರೇಮ, ಭಕ್ತಿಗಳಿಲ್ಲದೆ ಭಗವಂತನನ್ನು ಪಡೆಯಲಾಗದು. ಜಪತಪಗಳೆಂದರೆ ಏನು ಗೊತ್ತೆ? ಅವುಗಳಿಂದ ಇಂದ್ರಿಯ ಗಳ ಪ್ರಭಾವ ಕುಗ್ಗಿಹೋಗುವುದು. ಕರ್ಮದಿಂದಲೇ ಎಲ್ಲ ಸುಖ, ದುಃಖಗಳು ಉಂಟಾಗುತ್ತವೆ. ಕರ್ಮಫಲವನ್ನು ಅನುಭವಿಸಲೇಬೇಕು. ಆದ ಕಾರಣ ಭಗವಂತನ ನಾಮಜಪ ಮಾಡಿದರೆ ಕಾಲು ಕತ್ತರಿಸಿ ಹೋಗಬೇಕಾದಲ್ಲಿ ಒಂದು ಮುಳ್ಳು ಅಥವಾ ಸೂಜಿ ಚುಚ್ಚಿ ಅದರ ಫಲ ಅನುಭವಿಸಿದಂತಾಗುತ್ತದೆ. ಜಪತಪಾದಿಗಳನ್ನು ಮಾಡಿದರೆ ಕರ್ಮ ಬಹುಪಾಲು ಕ್ಷಯವಾಗುವುದು. ಭಗವಂತನ ನಾಮಜಪದಿಂದ ಕರ್ಮಫಲ ಕಡಿಮೆಯಾಗುವುದು. ಬಿರುಗಾಳಿಯಿಂದ ಮೋಡ ಚದುರಿ ಹೋಗುವಂತೆ ಭಗವಂತನ ನಾಮ ಜಪದಿಂದ ವಿಷಯವೆಂಬ ಮೋಡ ಚದುರಿಹೋಗುವುದು. ಜಪವನ್ನು ಅಭ್ಯಾಸ ಮಾಡುತ್ತ ಮನುಷ್ಯ ಸಿದ್ಧನಾಗುತ್ತಾನೆ. ಜಪಾತ್ ಸಿದ್ಧಿಃ, ಜಪಾತ್ ಸಿದ್ಧಿಃ, ಜಪಾತ್ ಸಿದ್ಧಿಃ. ಭಗವಂತನ ನಾಮ ಬೀಜ ಎಷ್ಟು ಸಣ್ಣದು? ಅದರಿಂದಲೇ ಕಾಲಕ್ರಮದಲ್ಲಿ ಭಾವ, ಭಕ್ತಿ, ಪ್ರೇಮ ಇತ್ಯಾದಿಗಳೆಲ್ಲ ಉಂಟಾಗುವುದು!''

ಸ್ವಾಮಿ ಶಾಂತಾನಂದರು – ''ಯಾವ ಸ್ಥಳದಲ್ಲಿ, ಯಾವ ರೀತಿ ಸಾಧನೆ –ಭಜನೆ ಮಾಡಬೇಕು?''

ಶ್ರೀಮಾತೆ – ''ನೀರಿಗೆ ತಾವಾಗಿಯೇ ಇಳಿದರೂ ಸರಿ, ಯಾರಾದರೂ ತಳ್ಳಿಬಿಟ್ಟರೂ ಸರಿ, ಬಟ್ಟೆಯಂತೂ ಒದ್ದೆಯಾಗುವುದು. ಪ್ರತಿದಿನವೂ ಧ್ಯಾನ ಮಾಡು. ಇನ್ನೂ ನಿನ್ನದು ಎಳೆಯ

ಮನಸ್ಸಲ್ಲವೇ! ಧ್ಯಾನ ಮಾಡುತ್ತ ಮನಸ್ಸು ಸ್ಥಿರವಾಗುವುದು. ಯಾವಾಗಲೂ ವಿಚಾರ ಮಾಡು. ಯಾವ ವಸ್ತುವಿನ ಕಡೆಗೆ ಮನಸ್ಸು ಹೋಗುವುದೋ ಅದನ್ನು ಅನಿತ್ಯವೆಂದೇ ಭಾವಿಸಿ ಮನಸ್ಸನ್ನು ದೇವರಿಗೆ ಅರ್ಪಿಸಿಬಿಡು.''

**ಶರಣಾಗತಿ :** ನಾವು ನಮ್ಮ ಅಹಂಕಾರವನ್ನು ತೊರೆದು ಸರ್ವಶಕ್ತನಾದ ಪರಮಾತ್ಮನಲ್ಲಿ ಸದಾ ಶರಣಾಗತಿ ಭಾವದಲ್ಲಿರುವುದು ಒಳ್ಳೆಯದು. ಅದರಲ್ಲಿಯೂ ಸಾಧನಾ ಜೀವನದಲ್ಲಿ ಬರುವ ಒಂದು ದೊಡ್ಡ ತೊಡಕೆಂದರೆ ಅಹಂಕಾರ. ಜಪ, ತಪ ಸಾಧನೆಯಿಂದ ಒಂದಿಷ್ಟು ಮನಃಶಾಂತಿ ದೊರಕಿ, ಕೊಂಚ ಮುಂದುವರೆದು, ಅಲ್ಪ-ಸ್ವಲ್ಪ ಅನುಭವಗಳಾದರೆ ಸಾಧಕನೆಂಬ ಅಹಂ ಬರುತ್ತದೆ. ಶರಣಾಗತ ಭಾವನೆಯಿಂದ ನಾವು ಬಾಗಬೇಕು. ಆ ಶರಣಾಗತ ಭಾವಕ್ಕಾಗಿಯೇ ಭಗವಂತನಲ್ಲಿ ಪ್ರಾರ್ಥಿಸಬೇಕು.

ಶ್ರೀಮಾತೆಯವರು ಹೇಳುತ್ತಾರೆ ''ಯಾರು ಭಗವಂತನಲ್ಲೇ ನಿರ್ಭರರಾಗಿರುತ್ತಾರೋ ಅವರನ್ನು ಭಗವಂತನು ಎಲ್ಲ ವಿಪತ್ತುಗಳಿಂದಲೂ ಪಾರುಮಾಡುತ್ತಾನೆ. ಇಷ್ಟೊಂದು ಜಪ ಮಾಡಿದೆ ಅಥವಾ ಇಷ್ಟೊಂದು ಕೆಲಸ ಮಾಡಿದೆ ಅನ್ನು - ಅದು ಏನೇನೂ ಅಲ್ಲ. ಮಹಾಮಾಯೆ ದಾರಿ ಬಿಟ್ಟುಕೊಡದಿದ್ದರೆ ಯಾರಿಗೆ ಏನು ಮಾಡಲಾದೀತು? ಹೇ ಜೀವ, ಶರಣಾಗತನಾಗು, ಕೇವಲ ಶರಣಾಗತನಾಗು. ಆಗ ಮಾತ್ರ ಮಹಾಮಾಯೆ ದಾರಿ ಬಿಟ್ಟುಕೊಡುವಳು.'' ಶ್ರೀಮಾತೆ ಕೈಜೋಡಿಸಿ ಶ್ರೀ ರಾಮಕೃಷ್ಣರನ್ನು ಪ್ರಾರ್ಥಿಸತೊಡಗಿದರು, ''ಶ್ರೀರಾಮಕೃಷ್ಣರು ನಿನ್ನನ್ನು ನೋಡಿಕೊಳ್ಳುತ್ತಿದ್ದಾರೆ. ನಿನಗೆ ಭಯವೇಕೆ? ಶ್ರೀರಾಮಕೃಷ್ಣರ ಕೆಲಸ ಮಾಡು; ಸಾಧನೆ ಭಜನೆ ಮಾಡು.''

ಮೇಲೆ ಸಾಧನೆಯ ಕೆಲವು ಮಜಲುಗಳನ್ನು ನೋಡಿದೆವು. ಈಗ ಶ್ರೀ ಮಾತೆಯವರ ಕೃಪೆಯನ್ನು ಕುರಿತು ಸ್ವಲ್ಪ ನೋಡೋಣ.

**ದಯಾಮಾತಾ :** ಅಹೇತುಕ ಕೃಪೆಯನ್ನು ಎಲ್ಲರ ಮೇಲೆ ವರ್ಷಿಸಲೆಂದೇ ಶ್ರೀಮಾತೆಯವರು ಅವತರಿಸಿರುವುದು. ಜಗನ್ಮಾತೆಯ ಪೂರ್ಣ ಸ್ವರೂಪದ ಅವತಾರವನ್ನು ಈ ಬಾರಿ ಶ್ರೀಮಾತೆಯವರು ಮಾಡಿ ಹೋಗಿದ್ದಾರೆ. ಬಲರಾಮ ಬಾಬು ಅವರ ಬಗ್ಗೆ ಹೇಳುತ್ತಿದ್ದ, ''ಶ್ರೀಮಾತೆಯವರು ಕ್ಷಮಾರೂಪದ ತಪಸ್ವಿನಿ. ಸಂತಾನ ಭಾವದಿಂದ ಅವರ ಮೊರೆಹೊಕ್ಕಲ್ಲಿ ಎಲ್ಲ ತಪ್ಪನ್ನು ಕ್ಷಮಿಸಿ ಅವರು ದಯೆ ತೋರುವರು. ಈ ರಹಸ್ಯವನ್ನು ಅವರೇ ಬಿಟ್ಟುಕೊಡುತ್ತಾರೆ. 'ನನ್ನದು ಮಕ್ಕಳ ಸ್ವಭಾವ. ನನಗೆ ಅಷ್ಟೊಂದು ಲೆಕ್ಕಾಚಾರ ಬುದ್ಧಿಯೇಕೆ? ಯಾರು ಕೇಳುತ್ತಾರೋ ಅವರಿಗೆ ಕೊಟ್ಟುಬಿಡುತ್ತೇನೆ' ಅಂತ.''

''ಮುಕ್ತಿ ಹೇಗೆಂದರೆ ಮಕ್ಕಳ ಕೈಯಲ್ಲಿರುವ ಸಿಹಿತಿಂಡಿಯ ಹಾಗೆ. ಕೆಲವರು ಅತಿಯಾಗಿ ಪೀಡಿಸುತ್ತಾರೆ. ನನಗೆ ಒಂದಿಷ್ಟು ಕೊಡು, ನನಗೆ ಒಂದಿಷ್ಟು ಕೊಡು ಅಂತ. ಆದರೂ ಆತ ಅವರಿಗೆ ಅದನ್ನು ಕೊಡುವುದೇ ಇಲ್ಲ. ಯಾರಿಗೆ ಕೊಡಬೇಕೆಂದು ಭಗವಂತನಿಗೆ ಮನಸ್ಸಾಗುವುದೋ ಅವನಿಗೆ ತಕ್ಷಣವೇ ಕೊಟ್ಟುಬಿಡುತ್ತಾನೆ. ಒಬ್ಬಾತ ಇಡೀ ಜೀವನ ದುಡಿದರೂ ಅವನಿಗೇನೂ ಸಿಗುವುದಿಲ್ಲ, ಇನ್ನೊಬ್ಬ ಮನೆಯಲ್ಲಿ ಕುಳಿತೇ ಎಲ್ಲವನ್ನೂ ಪಡೆಯುತ್ತಾನೆ. ಯಾವಾಗ ಅವನ ಕೃಪೆ ಯಾರಿಗಾಗುವುದೋ ಆಗ ಎಲ್ಲವೂ ಲಭಿಸಿದಂತೆ.''

ಶ್ರೀಮಾತೆಯವರು ವಿಶ್ವಹಿತಕ್ಕಾಗಿ ಸದಾ ಮಗ್ನರಾಗಿರುವ ಮಾತೃಮೂರ್ತಿ. ಹೇಳುತ್ತಾರೆ ''ನಾನು ದಯೆಯಿಂದಾಗಿ ನನ್ನನ್ನೇ ಮರೆತುಬಿಡುತ್ತೇನೆ. ನಾನು ಯಾರೆಂಬುದೇ ನನಗೆ ಮರೆತು ಹೋಗುತ್ತದೆ.''

**ಶ್ರೀಮಾತೆಯ ಶ್ರೀರಕ್ಷೆ :** ಯಾರು ಶರಣಾಗತರಾಗಿ ನೀನೇ ನನ್ನ ತಾಯಿಯೆಂದು ಅವರನ್ನು ಮೊರೆಹೊಕ್ಕರೋ ಅವರಿಗೆಲ್ಲ ಶ್ರೀಮಾತೆ ಆಸರೆ ನೀಡಿದ್ದಾರೆ. ಈ ಗ್ರಂಥ ದಲ್ಲಿ ಉಲ್ಲೇಖಿಸಿರುವ ಭಕ್ತರೆಲ್ಲ ಶ್ರೀಮಾತೆಯವರನ್ನು ಕೆಣಕಿ, ಪ್ರಶ್ನಿಸಿ ಆಶ್ವಾಸನೆಯನ್ನು ಪಡೆದಿದ್ದಾರೆ, ಅವರಿಗಾಗಿ ಮತ್ತು ನಮ್ಮೆಲ್ಲರಿಗಾಗಿ.

ಸಕಲಗುಣಭೂಷಿತಳೂ, ಕಾರುಣ್ಯಮಯಿಯೂ ಆಗಿರುವ ಶ್ರೀಮಾತೆಯವರ ಉಪದೇಶಗಳನ್ನು ಅನುಸರಿಸಿದಲ್ಲಿ ಅಲ್ಪಯತ್ನದಿಂದ, ಸಾಧನಾಮಾರ್ಗದಲ್ಲಿ ಅನೇಕ ದೂರವನ್ನು ಸರಾಗವಾಗಿ ಕ್ರಮಿಸಬಹುದು. ಕೊನೆಗೆ ಅವರ ಕೃಪೆಯಿಂದ ಈ ಜನ್ಮದಲ್ಲಿಯೇ ಭಗವತ್ಸಾಕ್ಷಾತ್ಕಾರವಾದರೂ ಸರ್ವಾತ್ಮ ಭಾವದಲ್ಲಿಯೇ ನಾವು ಮಾಡುವ ಕೆಲಸಗಳೆಲ್ಲಾ ಶ್ರೀರಾಮಕೃಷ್ಣರ ಸೇವೆಯೆಂಬ ಭಾವದಿಂದ ಮುಂದುವರೆಸಬಹುದು. ಸ್ವಯಂ ಜಗನ್ಮಾತೆಯಾದ ಶ್ರೀ ಶಾರದಾದೇವಿಯವರು ಸಾಮಾನ್ಯ ಸ್ತ್ರೀಯಂತೆ ಬದುಕಿ ಅವತಾರವನ್ನು ಪೂರೈಸಲಿಲ್ಲವೇ? ಇದೇ ಅತ್ಯಂತ ಉನ್ನತ ಮಟ್ಟದ ಅದ್ವೈತ ಸ್ಥಿತಿ. ನಾವು ಸಾಧನೆಯ ಉತ್ತುಂಗ ಸ್ಥಿತಿಯನ್ನು ತಲು ಪಿದ ಮೇಲೆ ಎಲ್ಲವೂ ಭಗವನ್ಮಯವೆಂಬ ಆನಂದ ಭಾವ, ವಿಜ್ಞಾನ ಸ್ಥಿತಿ. ಈ ಸ್ಥಿತಿಯಲ್ಲಿ ಯಾವ ವೇಷ-ಭೂಷಣಗಳಾಗಲೀ, ಕೀರ್ತಿ-ವೈಭವವಾಗಲೀ, ಸಿದ್ಧಿ-ಪವಾಡಗಳಾಗಲೀ ಇಲ್ಲ. ನಿರಾಡಂಬರ ಜೀವನವೇ ನಿರಾಕಾರ ಸಾಕ್ಷಾತ್ಕಾರದ ಗುರುತು. ಶ್ರೀಮಾತೆಯವರೇ ಹೇಳುತ್ತಾರೆ, ''ಭಗವಂತನ ಸಾಕ್ಷಾತ್ಕಾರ ವಾದರೆ ಏನಾಗುವುದು? ಎರಡು ಕೋಡು ಮೂಡುವುದೇ? ಇಲ್ಲ, ಸದಸದ್ವಿಚಾರವುಂಟಾಗುವುದು, ಜ್ಞಾನಚೈತನ್ಯವುಂಟಾಗುವುದು. ಅವನು ಜನನ ಮರಣದಿಂದ ಪಾರಾಗುವನು. ಭಾವದಿಂದಲೇ ಎಲ್ಲವೂ ಲಭ್ಯವಾಗುವುದು. ಭಾವವಿಲ್ಲದೆ ಯಾರು ತಾನೇ ಭಗವಂತನನ್ನು ನೋಡಿದ್ದಾರೆ? ಭಾವವಿಲ್ಲದ ಯಾರೊಂದಿಗೆ ಭಗವಂತ ಮಾತನಾಡಿದ್ದಾನೆ? ಭಾವದಲ್ಲೇ ಭಗವಂತನ ದರ್ಶನ, ಅವನೊಂದಿಗೆ ಮಾತುಕತೆ ಎಲ್ಲವೂ ಭಾವದಲ್ಲೇ ಉಂಟಾಗುವುದು.''

ಶ್ರೀಮಾತೆಯವರ ಕೃಪೆಯಿಂದ ನಮ್ಮೆಲ್ಲರಿಗೂ ಭಾವಶುದ್ಧಿ ಉಂಟಾಗಿ, ದರ್ಶನವುಂಟಾಗಿ ಅವನ ಸಾಮೀಪ್ಯ, ಸಾಯುಜ್ಯ ದೊರಕುವಂತಾಗಲಿ.



# ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ

ಸ್ವಾಮಿ ಕರುಣಾಕರಾನಂದ

**ಆಧುನಿಕ ಲೋಕಕ್ಕೆ ಸನಾತನ ಧರ್ಮದ ಆದರ್ಶಗಳನ್ನು ಸಾರಿ, ವೇದಾಂತದ ಹಳೆಯ ತತ್ತ್ವಗಳಿಗೆ ಹೊಸ ಬಗೆಯ ಭಾಷ್ಯವನ್ನೇ ಬರೆದ ಯುಗನಾಯಕ ಸ್ವಾಮಿ ವಿವೇಕಾನಂದರ ಸಮಗ್ರ ಕೃತಿಗಳ ಸಂಕಲನವೇ 'ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ.' ಇದನ್ನು ಪರಿಚಯಿಸಿರುವ ಪೂಜ್ಯ ಸ್ವಾಮೀಜಿ ಸಂಸ್ಕೃತ ಹಾಗೂ ವೇದಾಂತ ಶಾಸ್ತ್ರಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದು, ಮೈಸೂರು ರಾಮಕೃಷ್ಣ ಆಶ್ರಮದ ಅಂಗಸಂಸ್ಥೆಯಾದ 'ರಾಮಕೃಷ್ಣ ನೈತಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ'ಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಉತ್ತಮ ವಾಗ್ಮಿ ಹಾಗೂ ಬರಹಗಾರರಾಗಿದ್ದು, ಅವರ ಅನೇಕ ಬರಹಗಳು ಈಗಾಗಲೇ 'ವಿವೇಕಪ್ರಭ'ದಲ್ಲಿ ಪ್ರಕಟವಾಗಿವೆ.**



### ಆಧ್ಯಾತ್ಮಿಕ ಶಕ್ತಿಯ ಕಾಲುವೆ

ಒಮ್ಮೆ ಶ್ರೀರಾಮಕೃಷ್ಣರು ಒಂದು ಹಾಳೆಯಲ್ಲಿ 'ನರೇಂದ್ರನು (ಸ್ವಾಮಿ ವಿವೇಕಾನಂದರ ಮೊದಲಿನ ಹೆಸರು) ಲೋಕಕ್ಕೆ ಶಿಕ್ಷಣ ವನ್ನು ನೀಡುವನು' ಎಂದು ಬರೆದರು. ನರೇಂದ್ರನು ತಡವರಿಸುತ್ತ 'ನನ್ನಿಂದ ಅದಾಗದು ಎಂದನು. ಶ್ರೀರಾಮಕೃಷ್ಣರು 'ಇಲ್ಲ, ನೀನ ದನ್ನು ಮಾಡಲೇಬೇಕು' ಎಂದು ಒತ್ತಿ ಹೇಳಿದರು. 'ನನ್ನ ಸಿದ್ಧಿಗಳೇ ಕಾಲಕ್ರಮದಲ್ಲಿ ನಿನ್ನ ಮೂಲಕ ವ್ಯಕ್ತಗೊಳ್ಳುವುವು' ಎಂದು ಭವಿಷ್ಯ ನುಡಿದರು. ಅಷ್ಟೇ ಅಲ್ಲದೆ, ನರೇಂದ್ರನಿಗೆ ತಮ್ಮ ಮಹಾ ಸಮಾಧಿಗಿಂತಲೂ ಮೂರ್‍ನಾಲ್ಕು ದಿನಗಳ ಮೊದಲು ತಮ್ಮ ನೋಟ ದಿಂದಲೇ ತಮ್ಮಲ್ಲಿದ್ದ ಶಕ್ತಿಯನ್ನೆಲ್ಲ ಹರಿಸಿಬಿಟ್ಟರು. *( **Life of Swami Vivekananda** by his eastern and western disciples, vol.1 p. 182, Third reprint, December 1997 )* ಸ್ವಾಮಿ ವಿವೇಕಾನಂದರು ಚಿಕಾಗೋದಲ್ಲಿ ಪಾಲ್ಗೊಳ್ಳುವು ದಕ್ಕಾಗಿ ಹೋಗುವ ಮೊದಲು ಬಾಂಬೆಯಲ್ಲಿ ಸ್ವಾಮಿ ತುರೀಯಾ ನಂದರನ್ನು ಕುರಿತು, ''ಹರಿಭಾಯಿ, ನಾನು ಅಮೆರಿಕಾಕ್ಕೆ ಹೋಗು ತ್ತಿದ್ದೇನೆ. ಸರ್ವಧರ್ಮಸಮ್ಮೇಳನಕ್ಕಾಗಿ ಅಮೆರಿಕಾದಲ್ಲಿ ಅದೇ ನೇನು ತಯಾರಿಗಳು ನಡೆಯುತ್ತಿವೆಯೆಂದು ನೀನು ಕೇಳಿರು ವೆಯೊ, ಅವೆಲ್ಲವೂ (ತಮ್ಮ ಎದೆ ಮುಟ್ಟಿ ತೋರಿಸುತ್ತ) ಇದಕ್ಕಾ ಗಿಯೆ'' ಎಂದು ಪ್ರವಾದಿಯಂತೆ ಭವಿಷ್ಯ ನುಡಿದಿದ್ದರು.( ಅಲ್ಲೇ. ಪುಟ ೩೦೫) ಹೀಗೆ ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಶಕ್ತಿಯನ್ನು ಜಗತ್ತಿಗೆ ಉದಾರವಾಗಿ ನೀಡುವುದಕ್ಕಾಗಿ ಸ್ವಾಮಿ ವಿವೇಕಾನಂದರ ತಯಾರಿಯಾಯಿತು.

ಕೃತಿಶ್ರೇಣಿಯಲ್ಲಿ ಸ್ವಾಮೀಜಿಯವರ ಉಪನ್ಯಾಸಗಳನ್ನು ಓದಿದ ಯಾರಿಗೇ ಆಗಲಿ ಅವರ ನುಡಿಗಳು ಆಧ್ಯಾತ್ಮಿಕವಾಗಿ ವ್ಯಕ್ತಿಯನ್ನು ಮೇಲೆತ್ತಿದಂತೆ ಅನುಭವವಾಗದೇ ಇರದು. ಇನ್ನು ಅವರ ನುಡಿಗಳನ್ನು ನೇರವಾಗಿ ಅವರಿಂದ ಆಲಿಸಿದವರಿಗೆ ಆಗುವ ಅನುಭವ ಎಂತಹ ಮಟ್ಟದ್ದಾಗಿರಬಹುದು! ನ್ಯೂಯಾರ್ಕ್‌ನಲ್ಲಿ ಅವರೊಮ್ಮೆ ಉಪನ್ಯಾಸವನ್ನು ನೀಡುವಾಗ ಒಬ್ಬ ಶ್ರೋತೃಗಳು ಹೇಳುತ್ತಾರೆ ''ಧ್ಯಾನದ ಸಮಯದಲ್ಲಿ ಹೇಗೆ ಕುಂಡಲಿನಿಯು ಮೇಲಿನೆಡೆಗೆ ಆಕರ್ಷಿತವಾಗಿ ಹರಿಯುವುದೊ, ಆ ರೀತಿಯಲ್ಲಿ ಸ್ವಾಮಿಗಳ ಮಾತುಗಳನ್ನು ಕೇಳುತ್ತಿದ್ದಾಗ ಅನುಭವವಾಗುತ್ತಿತ್ತು'' ಎಂದು. ಒಂದು ಗಂಟೆಯ ಉಪನ್ಯಾಸದ ನಂತರ ಆ ಶ್ರೋತೃವು ''ಇನ್ನು ಮೇಲೆ ಪ್ರಶ್ನೋತ್ತರ ಕಾರ್ಯಕ್ರಮವಿರುವುದು'' ಎಂದು ಘೋಷಿಸಿದರು. ಆದರೆ, ಸ್ವಾಮೀಜಿಯವರ ಉಪನ್ಯಾಸದ ನಂತರ ಎಷ್ಟೋ ಜನರು ಎದ್ದು ಹೋಗಿಬಿಟ್ಟಿದ್ದರು. ಸ್ವಾಮೀಜಿ ಸ್ವಲ್ಪ ಕೋಪ ಗೊಂಡವರಂತೆ ಆ ಶ್ರೋತೃವಿಗೆ ನುಡಿದರು ''ಇದಾದ ನಂತರ ಇನ್ನು ಯಾವ ಪ್ರಶ್ನೋತ್ತರ ಕಾರ್ಯಕ್ರಮ ಬೇಕು? ಉಪನ್ಯಾಸ ಕೇಳಿ ಶ್ರೋತೃಗಳ ಮನಸ್ಸು ಅದೆಷ್ಟು ಮೇಲ್ಮಟ್ಟದಲ್ಲಿದೆಯೆಂದರೆ, ಇನ್ನು ಆ ಭಾವ ನಷ್ಟವಾದೀತು!'' ಎಂದು. ಇನ್ನೊಮ್ಮೆ ಸ್ವಾಮೀಜಿ ತಮ್ಮ ಗುರುಭಾಯಿಗಳಿಗೆ ಹೇಳುತ್ತಾರೆ, ನಾನೇನು ಕೇವಲ ಉಪನ್ಯಾಸ ನೀಡುತ್ತಿದ್ದೇನೆ ಎಂಬುದಾಗಿ ತಿಳಿದಿದ್ದೀರಾ? ನನಗೆ ತಿಳಿದಿದೆ, ನಾನು ಅವರಿಗೆ ಏನೋ ಒಂದು ಘನವಾದುದನ್ನು ನೀಡಿದ್ದೇನೆ. ಅವರಿಗೂ ಅನುಭವಕ್ಕೆ ಬಂದಿದೆ ಅವರೂ ಸಹ ನನ್ನಿಂದ ಏನನ್ನೋ ಘನವಾದುದನ್ನು ಪಡೆಯುತ್ತಿದ್ದಾರೆ ಎಂಬು ದಾಗಿ. *(ಸ್ಮೃತಿರ್ ಆಲೋಯ್ ಸ್ವಾಮೀಜಿ, ಪುಟ. ೪)*




ಕೃತಿಶ್ರೇಣಿಯಲ್ಲಿ ಸ್ವಾಮಿ ವಿವೇಕಾನಂದರ ಉಪನ್ಯಾಸಗಳು, ಸಂಭಾಷಣೆಗಳು, ಪದ್ಯಗಳು, ಪ್ರಬಂಧಗಳು, ದಿನಪತ್ರಿಕೆಗೆ ಕೊಟ್ಟ ಸಂದರ್ಶನಗಳು ಸಿಗುತ್ತವೆ. ಅವುಗಳಲ್ಲಿ ಅವರ ಉಪನ್ಯಾಸಗಳೇ ಅವರ ಕೃತಿಯ ಸಿಂಹಪಾಲನ್ನು ಆಕ್ರಮಿಸುತ್ತವೆ. ಸ್ವಾಮೀಜಿಯವರು ಪರಿವ್ರಾಜಕರಾಗಿದ್ದಾಗ ಅಲ್ಲಲ್ಲಿ ನೀಡಿದ ಉಪನ್ಯಾಸಗಳು ಹಾಗೂ ಸರ್ವಧರ್ಮಸಮ್ಮೇಳನಕ್ಕಿಂತಲೂ ಮೊದಲು ನೀಡಿದ ಉಪನ್ಯಾಸಗಳ ವಿವರ ನಮಗೆ ಸಿಗುವುದಿಲ್ಲ. ಆಗಿನ್ನೂ ಅವರ ಉಪನ್ಯಾಸಗಳನ್ನು ದಾಖಲಿಸಬಲ್ಲ ಸಮರ್ಥ ಶೀಘ್ರಲಿಪಿಕಾರರು ಸಿಕ್ಕಿರಲಿಲ್ಲ. ಸರ್ವಧರ್ಮಸಮ್ಮೇಳನದ ನಂತರವೂ ಕೆಲವು ಜನರನ್ನು ಈ ಕೆಲಸಕ್ಕೆ ನೇಮಿಸಿಕೊಂಡರೂ ಸ್ವಾಮೀಜಿಯವರ ವೇಗಕ್ಕೆ ಅವರು ಸರಿಗಟ್ಟಲಿಲ್ಲವಾದ್ದರಿಂದ ಅವರನ್ನು ತ್ಯಜಿಸಿ ಕೊನೆಯಲ್ಲಿ ಜೆ.ಜೆ. ಗುಡ್‌ವಿನ್ ಎಂಬುವವನ ಸೇವೆಯನ್ನು ಬಳಸಿಕೊಳ್ಳಲಾಯಿತು. ಮೊದಲು ಈತ ತನ್ನ ಸೇವೆಗೆ ಶುಲ್ಕವನ್ನು ತೆಗೆದುಕೊಂಡರೂ ಸ್ವಾಮಿ ವಿವೇಕಾನಂದರ ವ್ಯಕ್ತಿತ್ವಕ್ಕೆ ಮಾರು ಹೋದ ಈತ ತನ್ನ ಜೀವನದುದ್ದಕ್ಕೂ ಉಚಿತ ಸೇವೆಯನ್ನು ಸಲ್ಲಿಸಿದ್ದಲ್ಲದೆ, ಅವರ ಶಿಷ್ಯನೂ ಆದನು. ಬಹುಶಃ ಗುಡ್‌ವಿನ್ ಸ್ವಾಮೀಜಿಯವರ ಜೀವನದಲ್ಲಿ ಬರದಿದ್ದರೆ ಈ ಜಗತ್ತು ಅದೆಷ್ಟು ಅಮೂಲ್ಯವಾಗಿರುವ ಆಧ್ಯಾತ್ಮಿಕ ಸಂಪತ್ತನ್ನು ನಷ್ಟ ಮಾಡಿಕೊಳ್ಳುತ್ತಿತ್ತೊ ಅದರ ಲೆಕ್ಕ ಸಿಗದು! ಸ್ವಾಮೀಜಿಯವರ ಅನುಯಾಯಿಗಳು ಈತನಿಗೆ ಅದೆಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಸಾಲದು.

ಕನ್ನಡದಲ್ಲಿ ಜನಪ್ರಿಯವಾಗಿರುವ, ಕುವೆಂಪುರವರು ಭಾವಾಂತರಿಸಿರುವ 'ಸಂನ್ಯಾಸಿ ಗೀತೆ'ಯ *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೮, ಪು.೪೧೮)* ಮೂಲ 'The Song of the Sannyasin.' ಸ್ವಾಮಿ ವಿವೇಕಾನಂದರು ನ್ಯೂಯಾರ್ಕಿನ ಥೌಸೆಂಡ್ ಐಲೆಂಡ್ ಪಾರ್ಕ್ ಎಂಬಲ್ಲಿ ೧೮೯೫ರಲ್ಲಿ ಏಳು ವಾರಗಳ ಕಾಲ ವಾಸವಾಗಿದ್ದು ಕೆಲವು ಪಾಶ್ಚಾತ್ಯ ಶಿಷ್ಯರಿಗೆ ವಿಶೇಷ ತರಬೇತಿ ಯನ್ನು ನೀಡುತ್ತಿದ್ದರು. ಒಂದು ದಿನ ಅವರು ತಮ್ಮ ಶಿಷ್ಯರ ಮುಂದೆ ತ್ಯಾಗಜೀವನದ ವೈಭವವನ್ನು ಬಣ್ಣಿಸುತ್ತಿದ್ದರು. ಇದ್ದಕ್ಕಿದ್ದಂತೆ ಎದ್ದು ಹೊರಟು ಹೋದರು. ಸ್ವಲ್ಪ ಸಮಯದಲ್ಲಿಯೇ ಹಿಂತಿರುಗಿ ಎಲ್ಲರೆದುರು ಈ ಮೇಲಿನ ಕವನವನ್ನು ರಚಿಸಿ ಪಠಿಸಿದರು. ಅವರ ಇನ್ನೊಂದು ಕವನ 'Kali The Mother'– **'ತಾಯಿ ಕಾಳಿ'** *(ಕೃತಿಶ್ರೇಣಿ, ಸಂ. ೮, ಪು.೪೪೪).* ಅವರು ೧೮೯೮ರಲ್ಲಿ ಅಮರನಾಥದ ಯಾತ್ರೆಗೆ ಹೋಗಿ ಶ್ರೀನಗರಕ್ಕೆ ಬಂದಿದ್ದಾಗ, ಆ ದಿನಗಳಲ್ಲಿ ಸ್ವಾಮೀಜಿ ಯಾವಾಗಲೂ ಜಗನ್ಮಾತೆಯ ಭಾವದಲ್ಲೇ ಮುಳುಗಿರುತ್ತಿದ್ದರು. ಹೀಗಿರುವಾಗ ಒಂದು ಸಂಜೆ ಅವರಿಗೆ ಒಂದು ದಿವ್ಯಾನುಭವವಾಯಿತು. ಅದನ್ನೇ ಈ ಕವನದ ರೂಪದಲ್ಲಿ ಸ್ವಾಮೀಜಿ ಬರೆದರು. ಈ ಕವನದ ಕೊನೆಯ ಪದವನ್ನು ಬರೆಯುವಷ್ಟರಲ್ಲಿ ಅವರ ಕೈಯಲ್ಲಿರುವ ಲೇಖನಿ ಜಾರಿ ಬಿದ್ದು ಅವರೂ ನೆಲಕ್ಕುರುಳಿದರು. ಈ ಕವನದಲ್ಲಿ ತಾಯಿ ಕಾಳಿಯ ಸೌಮ್ಯರೂಪವನ್ನಷ್ಟೆ ಪೂಜಿಸದೆ ಆಕೆಯ ಕರಾಳ ರೂಪದಲ್ಲಿಯೂ ಪೂಜಿಸಬೇಕೆನ್ನುತ್ತಾರೆ, 'ಅಳಲುಗಳನು ಪ್ರೀತಿಸಿ ಮೃತ್ಯುವನಾಲಂಗಿಸಿ ಪ್ರಳಯ ನಾಟ್ಯಗೈವ ಧೀರನೆಡೆಗೆ ತಾಯಿ ಬರುವಳು'. 'ಗಾಯಿ ಗೀತ ಶುನಾತೆ ತೊಮಾಯ್' ಎಂಬುದು ಸ್ವಾಮೀಜಿಯವರ ಬಂಗಾಳಿ ಕವನ. ಅದರ ಕನ್ನಡ ಅನುವಾದ 'ಹಾಡೊಂದ ಹಾಡುವೆ ನಾ ನಿನಗೆ'. ಪರಿವ್ರಜನದ ಸಮಯದಲ್ಲಿ ಸ್ವಾಮೀಜಿಯವರು ಉತ್ತರ ಪ್ರದೇಶದ ಘಾಜೀಪುರ ಎಂಬಲ್ಲಿಗೆ ಭೇಟಿ ನೀಡಿದಾಗ ಅಲ್ಲಿದ್ದ ಸಂತ ಪವಾಹಾರಿ ಬಾಬಾರವರಿಂದ ರಾಜಯೋಗದ ದೀಕ್ಷೆಯನ್ನು ಪಡೆಯಲು ಬಯಸುತ್ತಾರೆ. ಆದರೆ ಈ ಸಂದರ್ಭದಲ್ಲಿ ಅವರಿಗೆ ಕೆಲವು ದಿನಗಳವರೆಗೆ ಮತ್ತೆ ಮತ್ತೆ ಶ್ರೀರಾಮಕೃಷ್ಣರು ದರ್ಶನದಲ್ಲಿ ಕಾಣಿಸಿಕೊಳ್ಳುತ್ತಾರೆ. ಅವರ ಮುಖದಲ್ಲೊಂದು ನೋವಿನ ಛಾಯೆಯನ್ನೂ ಸ್ವಾಮೀಜಿ ಗುರುತಿಸುತ್ತಾರೆ. ಹೀಗಾಗಿ ತಮ್ಮ ನಿರ್ಧಾರವನ್ನು ಕೈಬಿಡುತ್ತಾರೆ. Requiescat in Pace ಎಂಬ ಇಂಗ್ಲೀಷ್ ಕವನವನ್ನು (ಶಾಂತಿರಸ್ತು ಎಂಬುದಾಗಿ ಕನ್ನಡದಲ್ಲಿ ಅನುವಾದಗೊಂಡಿದೆ) ಸ್ವಾಮೀಜಿ ತಮ್ಮ ನೆಚ್ಚಿನ ಶೀಘ್ರಲಿಪಿಕಾರನೂ, ಶಿಷ್ಯನೂ ಆದ ಜೆ.ಜೆ.ಗುಡ್‌ವಿನ್ ತೀರಿಕೊಂಡಾಗ ಅವನ ನೆನಪಿಗಾಗಿ ಬರೆದರು.

ಇಂಗ್ಲೀಷ್‌ನಲ್ಲಿರುವ The Complete Works of Swami Vivekananda ಸಮಗ್ರವಾಗಿ ೯ ಸಂಪುಟಗಳಲ್ಲಿದ್ದು ೪೭೩೪ ಪುಟಗಳಲ್ಲಿ ಅಚ್ಚಾಗಿದೆ. ಕನ್ನಡದಲ್ಲಿಯೂ ಒಟ್ಟು ಒಂಭತ್ತು ಅಧ್ಯಾಯಗಳಿದ್ದು ೪೪೩೭ ಪುಟಗಳಿವೆ (ಪದಸೂಚಿಗಳನ್ನು ಬಿಟ್ಟು). ಕನ್ನಡದಲ್ಲಿ ಇಂಗ್ಲೀಷ್ ಆವೃತ್ತಿಯಿಂದ ಇನ್ನೂ ಕೆಲವು ತರ್ಜುಮೆಗೊಳ್ಳಬೇಕಾದದ್ದಿದೆ.

## ಸಾಧನೆಗೆ ಬುನಾದಿ

ಸ್ವಾಮೀಜಿ ಹೇಳುತ್ತಾರೆ, ಪ್ರತಿಯೊಂದು ದೇಶದ ಮತ್ತು ಧರ್ಮದ ಮೂಢನಂಬಿಕೆಯ ರಾಶಿಯಿಂದ ಎದ್ದ ಅತಿ ಸ್ಪಷ್ಟವಾದ ಮತ್ತು ಉಜ್ಜ್ವಲವಾದ ಒಂದು ಚಿಂತನೆ ನನಗೆ ಕಾಣುವುದು. ಮಾನವನು ಪವಿತ್ರಾತ್ಮನು. ಪವಿತ್ರತೆಯೇ ನಮ್ಮ ಸ್ವಭಾವ ಎಂಬುದೇ ಆ ಚಿಂತನೆ. *(ಕೃತಿಶ್ರೇಣಿ, ಸಂ. ೨, ಪು.೧೨೪).* ಇನ್ನೊಂದೆಡೆ ಹೇಳುತ್ತಾರೆ, ''ಪ್ರತಿಯೊಂದು ಆತ್ಮನಲ್ಲಿಯೂ ದಿವ್ಯತೆ ಹುದುಗಿರುವುದು. ಈ ಸುಪ್ತವಾದ ದಿವ್ಯತೆಯನ್ನು ಬಾಹ್ಯ ಮತ್ತು ಆಂತರಿಕ ಪ್ರಕೃತಿಯ ನಿಗ್ರಹದಿಂದ ವ್ಯಕ್ತಪಡಿಸುವುದೇ ಜೀವನದ ಗುರಿ.'' *(ಕೃತಿಶ್ರೇಣಿ, ಸಂ. ೨, ಪು.೩೧೦).* ಇದನ್ನು ಕರ್ಮಯೋಗದಿಂದಾಗಲಿ, ಭಕ್ತಿಯೋಗದಿಂದಾಗಲಿ, ರಾಜಯೋಗದಿಂದಾಗಲಿ, ಜ್ಞಾನಯೋಗದಿಂದಾಗಲಿ, ಯಾವುದಾದರೂ ಒಂದು ಮಾರ್ಗದಿಂದ ಅಥವಾ ಎಲ್ಲ ಮಾರ್ಗಗಳ ಸಂಯೋಗದಿಂದ ಆಗಲಿ ಸಾಧಿಸಿ ಮುಕ್ತರಾಗಿ. ಇದೇ ಧರ್ಮದ ಸರ್ವಸ್ವ. ಸಿದ್ಧಾಂತ, ನಂಬಿಕೆ, ಬಾಹ್ಯಾಚಾರ, ಪವಿತ್ರಗ್ರಂಥ, ದೇವಸ್ಥಾನ, ವಿಗ್ರಹ– ಇವೆಲ್ಲ ಗೌಣ.'' *(ಅಲ್ಲೇ.)*

## ಯೋಗಗಳು

''ಕರ್ಮಯೋಗವೆಂಬುದು ನಿಃಸ್ವಾರ್ಥ, ಸತ್ಕರ್ಮ ಇವುಗಳ ಮೂಲಕ ಮುಕ್ತಿಯನ್ನು ಪಡೆಯುವ ಮಾರ್ಗವನ್ನು ಉಪದೇಶಿಸುವ ನೀತಿ ಧರ್ಮಗಳ ಸಂಹಿತೆ. ಕರ್ಮಯೋಗಿಯು ಯಾವುದೇ ನಂಬಿಕೆಯನ್ನಿಡಬೇಕಾದ ಆವಶ್ಯಕತೆಯಿಲ್ಲ. ಆತನು ನಾಸ್ತಿಕನಾಗಿರಬಹುದು.'' *(ಕೃತಿಶ್ರೇಣಿ, ಸಂ. ೧, ಪು.೧೧೬).* ''ಕರ್ಮಯೋಗ ಎಂದರೇನು? ಅದು ಕರ್ಮರಹಸ್ಯದ ಜ್ಞಾನ. ಇಡೀ ವಿಶ್ವವೇ ಕರ್ಮ ಮಾಡುವುದನ್ನು ನಾವು ನೋಡುತ್ತೇವೆ. ಅದು ಹಾಗೆ ಮಾಡುವುದು ಏತಕ್ಕಾಗಿ? ಮುಕ್ತಿಪ್ರಾಪ್ತಿಗಾಗಿ. ಸ್ವಾತಂತ್ರ್ಯಪ್ರಾಪ್ತಿಗಾಗಿ...ನಮ್ಮಲ್ಲಿ ಪ್ರತಿಯೊಬ್ಬರೂ ಕರ್ಮವನ್ನು ಮಾಡಬೇಕಾದುದು ಅಪರಿಹಾರ್ಯವಾಗಿರುವಾಗ, ನಾವು ಅತ್ಯಂತ ಉಚ್ಚವಾದ ಉದ್ದೇಶಗಳ ಪ್ರಾಪ್ತಿಗಾಗಿ ಕರ್ಮ ಮಾಡಬಹುದು. *(ಅಲ್ಲೇ, ಪು.೧೦೪)*....ಅದು ಹೇಳುವುದೇನು? ಕರ್ಮಾಸಕ್ತಿಯನ್ನು ಬಿಟ್ಟುಬಿಟ್ಟು ಅವಿರತವಾಗಿ ಕರ್ಮ ಮಾಡು. ಯಾವುದರೊಡನೆಯೂ ಕಲೆತು ಒಂದಾಗಬೇಡ. ನಿಮ್ಮ ಮನಸ್ಸನ್ನು ಮುಕ್ತವಾಗಿಟ್ಟುಕೊಂಡಿರು. ದುಃಖಪ್ರಾಪ್ತಿಯು ಆಸಕ್ತಿಯ ಮೂಲಕ ಎಂದೂ, ಕರ್ಮದ ಮೂಲಕ ಅಲ್ಲವೆಂದೂ, ನಾವು ಮಾಡುವ ಕರ್ಮದೊಡನೆ ನಾವು ಒಂದಾದೊಡನೆಯೆ ನಮಗೆ ದುಃಖ ಅನುಭವವಾಗುವುದೆಂದೂ ಬೋಧಿಸುತ್ತದೆ. ನಾವು ಕರ್ಮದೊಡನೆ ಎಂದಿನವರೆಗೆ ಒಂದಾಗುವುದಿಲ್ಲವೊ ಅಂದಿನವರೆಗೆ ನಮಗೆ ದುಃಖಾನುಭವವಾಗದು. *(ಅಲ್ಲೇ ಪು.೧೦೫)* ಕರ್ಮಕ್ಕೋಸ್ಕರವೇ ಕರ್ಮ ಮಾಡುವುದು ಉನ್ನತವಾದ ಆದರ್ಶ'' ವೆನ್ನುತ್ತಾರೆ ಸ್ವಾಮೀಜಿ. ಕರ್ಮಯೋಗದ ಪ್ರಕಾರ ಒಬ್ಬ ಆದರ್ಶ ವ್ಯಕ್ತಿಯೆಂದರೆ, ಅತ್ಯಂತ ನಿರ್ಜನವೂ ನೀರವವೂ ಆದ ಪ್ರದೇಶದಲ್ಲಿ ಕೂಡ ತೀವ್ರ ಚಟುವಟಿಕೆಯನ್ನು ಯಾವಾತನು ಕಾಣುವನೊ ಮತ್ತು ತೀವ್ರ ಚಟುವಟಿಕೆಯ ಮಧ್ಯದಲ್ಲಿಯೂ ಅರಣ್ಯದ ನೀರವ ನಿರ್ಜನತೆಗಳ ಅನುಭೂತಿ ಯಾವಾತನಿಗುಂಟೊ ಅವನು. *(ಅಲ್ಲೇ. ಪು.೩೬)*

ಭಕ್ತಿಯೋಗ ಕುರಿತು ಹೇಳುತ್ತ ಸ್ವಾಮೀಜಿ ಹೇಳುತ್ತಾರೆ, ''ಭಕ್ತಿಮಾರ್ಗವೆಂದರೆ ನಿಜವಾಗಿ, ಹೃತ್ಪೂರ್ವಕವಾಗಿ ಭಗವಂತನನ್ನು ಅರಸುವುದು. ಈ ಅನ್ವೇಷಣೆಯು ಪ್ರೇಮದಲ್ಲಿ ಪ್ರಾರಂಭವಾಗಿ, ಪ್ರೇಮದ ಮೂಲಕ ಸಾಗಿ, ಪ್ರೇಮದಲ್ಲಿ ಪರ್ಯವಸಾನವಾಗುವುದು. ಭಗವಂತನ ಮೇಲಿರುವ ಆತ್ಯಂತಿಕ ಪ್ರೇಮೋನ್ಮಾದವು ಕ್ಷಣವಾದರೂ ಸಾಕು, ನಿತ್ಯಮುಕ್ತಿಯನ್ನು ನೀಡುವುದು.'' *(ಅಲ್ಲೇ. ಪು.೧೮೬)* ಇದರಲ್ಲಿ ಗೌಣೀ ಭಕ್ತಿ ಮತ್ತು ಪರಾಭಕ್ತಿಯೆಂದು ಎರಡು ವಿಧಗಳಿವೆ. ಗೌಣಿ ಭಕ್ತಿಯೇ ಪಕ್ವವಾಗಿ ಪರಾ ಭಕ್ತಿಯಾಗುವುದು. ''ಪ್ರಾರಂಭದಲ್ಲಿ ಸಾಮಾನ್ಯ ಉಪಾಸನಾ ರೂಪದಲ್ಲಿ ಮೊದಲಾಗಿ ಅಂತ್ಯದಲ್ಲಿ ಈಶ್ವರನ ಮೇಲಿರುವ ನಿರಂತರ ಪ್ರೇಮಪ್ರವಾಹವಾಗಿ ಪರಿಣಮಿಸುವ ಮಾನಸಿಕ ಪ್ರಯತ್ನಧಾರೆಯೇ ಭಕ್ತಿ'' ಎನ್ನುತ್ತಾರೆ ಸ್ವಾಮೀಜಿ *(ಅಲ್ಲೇ, ಪು.೧೯೦).* ಭಕ್ತಿಯನ್ನು ಬೆಳಸಿಕೊಳ್ಳುವಲ್ಲಿ ಇಷ್ಟನಿಷ್ಠೆ ಬಹಳ ಮುಖ್ಯ. ಧ್ಯೇಯಗಳನ್ನು ಪುನಃ ಪುನಃ ಬದಲಾಯಿಸುತ್ತಿದ್ದರೆ ಆಧ್ಯಾತ್ಮಿಕ ಸಸಿ ಒಣಗಿಹೋಗುವುದು. ಭಕ್ತಿಯಲ್ಲಿ ವೈರಾಗ್ಯವು ಸಹಜವಾಗಿ ಉತ್ಪತ್ತಿಯಾಗುತ್ತದೆ. ಇಲ್ಲಿ ಸ್ವಾಮೀಜಿ ರಾಮಾನುಜರ ಶ್ರೀಭಾಷ್ಯದಲ್ಲಿ ಇರುವ ವಿವೇಕ, ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾದ ಮತ್ತು ಅನುದ್ಧರ್ಷ ಎಂಬ ಭಕ್ತಿಯೋಗದ ಸಾಧನೆಗಳನ್ನೂ ವಿವರಿಸುವರು. ಭಕ್ತಿಯೋಗದಿಂದ ವಿಶ್ವಪ್ರೇಮವು ಸಿದ್ಧಿಸುತ್ತದೆಂದು ಸ್ವಾಮೀಜಿ ಹೇಳುತ್ತಾರೆ, ''ಭಗವತ್ಪ್ರೇಮದ ಪರಿಣಾಮವಾಗಿ ವಿಶ್ವಪ್ರೇಮ ಸಿದ್ಧಿಸಿಯೇ ಸಿದ್ಧಿಸುವುದು. ದೇವರ ಸಮೀಪಕ್ಕೆ ಹೋದಷ್ಟು ಎಲ್ಲ ವಸ್ತುಗಳು ಅವನಲ್ಲಿಯೇ ಇರುವುವು ಎಂಬುದನ್ನು ಹೆಚ್ಚು ಹೆಚ್ಚು ಕಾಣುವೆವು.'' *(ಅಲ್ಲೇ. ಪು ೨೩೪).*

ಆಂತರಿಕ ಜಗತ್ತಿನಿಂದ ಹೊರಟು, ಅಲ್ಲಿರುವ ಪ್ರಕೃತಿಯನ್ನು ಪರೀಕ್ಷೆ ಮಾಡಿ ಅದರ ಮೂಲಕ ಬಾಹ್ಯ ಮತ್ತು ಅಂತರಂಗ ಎರಡನ್ನೂ ನಿಗ್ರಹಿಸಬೇಕೆಂದು ರಾಜಯೋಗವು ಹೇಳುತ್ತದೆ *(ಕೃತಿಶ್ರೇಣಿ, ಸಂ. ೨, ಪು.೩೧೯).* ಇದರಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಹಾಗೂ ಸಮಾಧಿಯೆಂಬ ಅಷ್ಟಾಂಗಗಳನ್ನು ವಿಸ್ತಾರವಾಗಿ ವಿವರಿಸಿ ದ್ದಾರೆ. ಯುಕ್ತಿ ಮತ್ತು ಸಮಾಧಿಯುಂಟಾಗುವ ಪ್ರಜ್ಞಾತೀತಾವಸ್ಥೆಯು ಒಂದನ್ನೊಂದು ವಿರೋಧಿಸಬಾರದು, ಆದರೆ ಅತೀಂದ್ರಿಯ ಜ್ಞಾನ ಯುಕ್ತಿಯನ್ನು ಪೂರ್ತಿಗೊಳಿಸಬೇಕು, ಎನ್ನುತ್ತಾರೆ ಸ್ವಾಮೀಜಿ. ಇಲ್ಲದಿದ್ದಲ್ಲಿ ಅಂತಹ ಪ್ರಜ್ಞಾತೀತಾವಸ್ಥೆಯಿಂದ ಸಮಾಜಕ್ಕೆ ಅಪಾಯವೇ ಹೆಚ್ಚು ಎಂದು ಎಚ್ಚರಿಕೆ ನೀಡುತ್ತಾರೆ. **'ಮೈತ್ರೀಕರುಣಾಮುದಿತೋಪೇಕ್ಷಾಣಾಂ ಸುಖದುಃಖಪುಣ್ಯಾಪುಣ್ಯ**

**ವಿಷಯಾಣಾಂ ಭಾವನಾತಶ್ಚಿತ್ತಪ್ರಸಾದನಮ್**' ಎಂಬ ಪಾತಂಜಲ ಸೂತ್ರವನ್ನು ವಿವರಿಸುವ ಸಂದರ್ಭದಲ್ಲಿ, ''ದ್ವೇಷ ಮತ್ತು ಕೆಟ್ಟ ಭಾವನಗಳಿಂದ ಕೂಡಿದ ಪ್ರತಿಯೊಂದು ಕ್ರಿಯೆಯೂ ಕೂಡ ಮನಸ್ಸಿಗೆ ಅಷ್ಟು ನಷ್ಟವನ್ನುಂಟು ಮಾಡುವುದು. ಪ್ರತಿಯೊಂದು ದ್ವೇಷದ ಆಲೋಚನೆ, ಕ್ರಿಯೆ ಅಥವಾ ಪ್ರತಿಕ್ರಿಯೆಯೇ ಆಗಲಿ ಇವನ್ನು ತಡೆದಷ್ಟೂ ನಮಗೆ ಒಳ್ಳೆಯದು. ಹೀಗೆ ನಿಗ್ರಹಿಸುವುದ ರಿಂದ ನಮಗೇನೂ ಕೇಡಾಗುವುದಿಲ್ಲ. ಪ್ರತಿಯೊಂದು ಸಲವೂ ಬರುವ ಕೋಪ ಮತ್ತು ದ್ವೇಷದ ಭಾವನೆಯನ್ನು ತಡೆದಷ್ಟೂ, ಒಳ್ಳೆಯ ಶಕ್ತಿಯನ್ನು ತಮ್ಮ ಹಿತಕ್ಕೆ ಕೂಡಿಟ್ಟಂತೆ. ಇದೇ ಶಕ್ತಿ ಮುಂದೆ ಉತ್ತಮತರದ ತಪಶ್ಶಕ್ತಿಯಾಗಿ ಪರಿಣಮಿಸುವುದು'' *(ಅಲ್ಲೇ. ಪು.೧೦೧)* ಎಂದು ಸಲಹೆ ನೀಡುತ್ತಾರೆ. ಸಾಧನೆಯ ಹಂತದಲ್ಲಿ ಅತೀಂದ್ರಿಯ ಅನುಭವಗಳು ಯೋಗ ಜೀವನದ ಸಂಶಯುವನ್ನು ನಿವಾರಿಸುವುದರೊಂದಿಗೆ ಮನಸ್ಸನ್ನು ಪುಷ್ಟೀಕರಿಸಿ ಸಾಧನೆಯಲ್ಲಿ ಮುಂದುವರೆಯುವಂತೆ ಪ್ರೇರಿಸುವುದು'' ಎನ್ನುತ್ತಾರೆ ಸ್ವಾಮೀಜಿ. *(ಅಲ್ಲೇ, ಪು. ೧೦೦)*

ಜ್ಞಾನಯೋಗವೆಂದರೆ ಜಗತ್ತಿನ ಮೂಲಸ್ವರೂಪವಾದ ಭಗವಂತನನ್ನು ನೋಡುವುದು. ಇದನ್ನು ಈ ರೀತಿಯ ಚಿಂತನೆಗಳಿಂದಲೇ ಸಾಧಿಸಬೇಕು. ಚಿಂತನೆ ನಮ್ಮನ್ನು ಪ್ರಚೋದಿಸುವ ಶಕ್ತಿ. ಶ್ರೇಷ್ಠ ಚಿಂತನೆಗಳಿಂದ ಮನಸ್ಸನ್ನು ತುಂಬಿ, ದಿನಂಪ್ರತಿ ಅದನ್ನು ಕೇಳಿ, ತಿಂಗಳು ತಿಂಗಳು ಅವನ್ನು ಆಲೋಚಿಸಿ. ಪ್ರಲೋಭನೆಗಳು ಬರಬಹುದು, ಕಷ್ಟಗಳು ನಮ್ಮನ್ನು ಆಕ್ರಮಿಸಬಹುದು. ಆದರೆ, ಬಿಡದೆ ಮುಂದುವರಿದರೆ ಕೊನೆಗೆ ಜಯಿಸುತ್ತೇವೆ. ಜೀವನದ ಏಕತೆಯನ್ನು, ಸರ್ವವಸ್ತುಗಳ ಏಕತೆಯನ್ನು ಕಂಡು ಹುಡುಕುವುದೇ ಜ್ಞಾನಯೋಗದ ಗುರಿ.

ಅನುಷ್ಠಾನ ವೇದಾಂತದ ಕುರಿತು ಮಾತನಾಡುತ್ತ,''ನಮ್ಮ ಜೀವನದ ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿಯೂ, ಅದನ್ನು ಅನುಷ್ಠಾನಕ್ಕೆ ತರಲು ಸಾಧ್ಯವಾಗಬೇಕು. ಇಂದೊಂದೇ ಅಲ್ಲ. ಆಧ್ಯಾತ್ಮಿಕ ಜೀವನ ಮತ್ತು ವ್ಯಾವಹಾರಿಕ ಜೀವನಕ್ಕೆ ಇರುವ ಕಾಲ್ಪನಿಕ ಭೇದಭಾವ ಮಾಯವಾಗಬೇಕು. ಏಕೆಂದರೆ, ವೇದಾಂತವು ಏಕತ್ವವನ್ನು, ಎಲ್ಲೆಡೆಯಲ್ಲಿಯೂ ಇರುವ ಏಕ ಜೀವನವನ್ನು ಉಪದೇಶಿಸುತ್ತದೆ. ಇದರಲ್ಲಿ ನಮಗೆ ಕಾಣುವ ಒಂದು ವಿಶೇಷ ಸಂಗತಿ ಏನೆಂದರೆ, ಇಲ್ಲಿಯ ಅನೇಕ ಮಹದಾಲೋಚನೆಗಳು ಕಾನನಾಂತರಗಳಲ್ಲಿ ವಿರಾಮದಿಂದ ಬಾಳುತ್ತಿದ್ದ ಮುನಿವರರಿಂದ ಬಂದವುಗಳಲ್ಲ. ನಾವು ಯಾರನ್ನು ಸ್ವಲ್ಪವೂ ವಿರಾಮವಿಲ್ಲದೆ ಅವಿಶ್ರಾಂತವಾಗಿ ದುಡಿಯುತ್ತಿದ್ದರು ಎಂದು ಹೇಳುತ್ತೇವೆಯೋ ಅಂತಹ, ರಾಜ್ಯಭಾರ ಮಾಡುತ್ತಿದ್ದ, ಆಳರಸರಿಂದ ಬಂದಿವೆ'' *(ಅಲ್ಲೇ, ಪು.೨೩೯)*. ಆತ್ಮಶ್ರದ್ಧೆಯ ಕುರಿತು ಮಾತನಾಡುತ್ತ ಹೇಳುತ್ತಾರೆ, ''ಆತ್ಮಶ್ರದ್ಧೆಯ ಆದರ್ಶ ನಮಗೆ ಬಹಳ ಸಹಕಾರಿ. ನಮ್ಮಲ್ಲಿ ನಮಗೆ ನಂಬಿಕೆಯನು ಹೆಚ್ಚು ಬೋಧಿಸಿದರೆ, ಅದನ್ನು ಅನುಷ್ಠಾನಕ್ಕೆ ತಂದಿದ್ದರೆ, ನಮ್ಮಲ್ಲಿರುವ ಅನೇಕ ದೋಷಗಳು ಮತ್ತು ದುಃಖದ ಬಹುಭಾಗ ಮಾಯವಾಗುತ್ತಿದ್ದವು ಎಂಬುದರಲ್ಲಿ ಸಂದೇಹವಿಲ್ಲ. ...ಹಳೆಯ ಧರ್ಮಗಳು ಯಾರಿಗೆ ದೇವರಲ್ಲಿ ಭಕ್ತಿ ಇಲ್ಲವೋ ಅವರನ್ನು ನಾಸ್ತಿಕನೆನ್ನುತ್ತಿದ್ದವು. ನವೀನ ಧರ್ಮವು ಯಾರು ಆತ್ಮವಿಶ್ವಾಸಹೀನರೋ, ಅವರನ್ನು ನಾಸ್ತಿಕರೆಂದು ಸಾರುತ್ತದೆ' *(ಅಲ್ಲೇ, ಪು.೨೪೯)*.

## ಸಾಧನೆಗೆ ಬೇಕಾದ ಸೂಕ್ಷ್ಮಗಳು

ತಮ್ಮ 'ಧರ್ಮಾನುಷ್ಠಾನ'ವೆಂಬ ಉಪನ್ಯಾಸದಲ್ಲಿ *(ಕೃತಿಶ್ರೇಣಿ, ಸಂ.೭, ಪು.೩೧೨)*. ಸ್ವಾಮೀಜಿ ಹೇಳುತ್ತಾರೆ, ''ನೀವು ಮಾಡುವ ದೈಹಿಕಶ್ರಮಕ್ಕೆ ಅತ್ಯಗತ್ಯವಾದುದಕ್ಕಿಂತ ಕಿಂಚಿತ್ ಹೆಚ್ಚು ಮಾಂಸಖಂಡಗಳನ್ನು ಬೆಳೆಸಿಕೊಳ್ಳುವಿರಾದರೆ ಅಷ್ಟರ ಮಟ್ಟಿಗೆ ನಿಮ್ಮ ಮಿದುಳಿನ ಶಕ್ತಿಯನ್ನು ಕುಗ್ಗಿಸಿಕೊಳ್ಳುವಿರಿ. ಹೆಚ್ಚು ಅಂಗ ಸಾಧನೆಯನ್ನು ಮಾಡಬೇಡಿ. ಅದು ಹಾನಿಕಾರಿ. ಯಾರು ಮಿತಿ ಮೀರಿ ಶ್ರಮ ಮಾಡುವುದಿಲ್ಲವೊ ಅವರು ದೀರ್ಘಕಾಲ ಬಾಳುವರು. ಕಡಿಮೆ ಊಟ ಮಾಡಿ, ಕಡಿಮೆ ಕೆಲಸ ಮಾಡಿ, ಮಿದುಳಿನ ಶಕ್ತಿಯನ್ನು ಕೂಡಿಟ್ಟುಕೊಳ್ಳಿ. ಗೃಹಿಣಿಗೆ ಮನೆಗೆಲಸವೇ ಸಾಕು. ಸುಮ್ಮನೆ ಶಕ್ತಿಯನ್ನು ಅತಿಯಾಗಿ ಖರ್ಚುಮಾಡಬೇಡಿ. ಅದನ್ನು ನಿಧಾನವಾಗಿ ಖರ್ಚು ಮಾಡಿ. ಸರಿಯಾದ ಆಹಾರವೆಂದರೆ ಸರಳವಾದ ಆಹಾರ. ಹೆಚ್ಚು ಮಸಾಲೆಗಳನ್ನು ಬೆರೆಸಿದುದಲ್ಲ.''

''ಭಕ್ತಿಯನ್ನು ಪಡೆಯಬೇಕಾದರೆ ಭಗವಂತನ ನಾಮಜಪವನ್ನು ಮಾಡಬೇಕು. ಬರಿ ಮಂತ್ರೋಚ್ಚಾರಣೆಯಿಂದಲೇ ಎಷ್ಟೋ ಪ್ರಯೋಜನವಿದೆ. ಶಕ್ತಿಗೆಲ್ಲ ಕಾರಣ ಮಂತ್ರೋಚ್ಚಾರಣೆ. ಹಿಂದಿನ ಕಾಲದ ಅಸ್ತ್ರಶಕ್ತಿಯ ಹಿಂದೆಲ್ಲ ಮಂತ್ರಶಕ್ತಿಯಿತ್ತು. ನಮ್ಮ ಶಾಸ್ತ್ರದಲ್ಲೆಲ್ಲ ಅದನ್ನು ನಂಬುವರು. ಈ ಶಾಸ್ತ್ರವೆಲ್ಲ ಬರಿಯ ಕಲ್ಪನೆ ಎಂದು ಹೇಳುವುದು ಮೂಢನಂಬಿಕೆ.'' *(ಕೃತಿಶ್ರೇಣಿ, ಸಂ. ೮, ಪು.೧೦೪)*.

ಕೃತಿಶ್ರೇಣಿಯ ಮೊದಲ ಭಾಗದಲ್ಲಿ ಆಧ್ಯಾತ್ಮಿಕ ಸಾಧನೆಗೆ ಸಂಬಂಧಿಸಿದ ಪ್ರಶ್ನೋತ್ತರಗಳು *(ಕೃತಿ ಶ್ರೇಣಿ, ಸಂ. ೧, ಪು.೧೪೯–೧೫೦)* ಹೀಗಿವೆ:

**ಪ್ರಶ್ನೆ:** ಮನಸ್ಸು ಚಂಚಲವಾಗಿದ್ದರೂ ಜಪವನ್ನು ದೀರ್ಘಕಾಲ ಮಾಡಬೇಕೆ?

**ಉತ್ತರ:** ಹೌದು ಮಾಡಬೇಕು. ತುಂಟ ಕುದುರೆಯನ್ನು ಸವಾರಿ ಮಾಡಿಯೇ ಪಳಗಿಸುವಂತೆ ಇದು.

**ಪ್ರಶ್ನೆ:** ಕೆಲವು ವೇಳೆ ಜಪ ಮಾಡುವಾಗ ಆನಂದವಾಗುವುದು. ಆ ಆನಂದದ ಪರಿಣಾಮವಾಗಿ ಜಪವನ್ನು ಮುಂದುವರಿಸಲು ಸಾಧ್ಯವಾಗುವುದಿಲ್ಲ. ಆಗ ಜಪವನ್ನು ಮಾಡಬೇಕೆ?

**ಉತ್ತರ:** ಹೌದು. ಈ ಆನಂದ ಸಾಧನೆಗೆ ಒಂದು ಆತಂಕ. ಇದನ್ನು ರಸಾಸ್ವಾದನ ಎನ್ನುತ್ತಾರೆ. ಅದನ್ನು ಅತಿಕ್ರಮಿಸಿ ಹೋಗಬೇಕು.

**ಪ್ರಶ್ನೆ:** ಕೆಲವು ವೇಳೆ ಜಪದಿಂದ ಬೇಜಾರಾಗುವುದು. ಆಗ ಅವನು ಜಪವನ್ನು ಮಾಡಲೇಬೇಕೆ ಅಥವಾ ಯಾವುದಾದರೂ ಒಳ್ಳೆಯ ಗ್ರಂಥವನ್ನು ಓದಬಹುದೊ?

**ಉತ್ತರ:** ಎರಡು ಕಾರಣಗಳಿಂದ ಜಪ ಬೇಜಾರಾಗುವುದು. ಕೆಲವು ವೇಳೆ ಮಿದುಳಿಗೆ ಸಾಕಾಗಿರುವುದರಿಂದ, ಮತ್ತೆ ಕೆಲವು ವೇಳೆ ಸೋಮಾರಿತನದಿಂದ ಜಪವು ಬೇಜಾರಾಗುವುದು. ಸಾಕಾಗಿರುವುದರಿಂದ ಬೇಜಾರಾಗಿದ್ದರೆ ಆಗ ವಿರಾಮವನ್ನು ಕೊಡುವುದು ಮೇಲು. ಆಗ ಬಲಾತ್ಕಾರದಿಂದ ಮಾಡಿದರೆ ಹುಚ್ಚರಾಗಬೇಕಾಗಬಹುದು, ಇಲ್ಲವೆ ಜಾಗೃದವಸ್ಥೆಯಲ್ಲಿ ಕನಸು ಕಾಣಬೇಕಾಗುವುದು. ಆದರೆ ಶುದ್ಧ ಸೋಮಾರಿತನದಿಂದ ಆಗಿದ್ದರೆ ಮನಸ್ಸನ್ನು ಬಲಾತ್ಕರಿಸಿ ಜಪಮಾಡಬೇಕು.

**ಪ್ರಶ್ನೆ:** ಕರ್ಮ ಮಾಡುವಾಗ ನಮ್ಮ ಮನೋಭಾವ ಹೇಗಿರಬೇಕು? ದಯೆ ಅಥವಾ ಇನ್ನೂ ಯಾವುದಾದರೂ ಭಾವವಿರಬೇಕೆ?

**ಉತ್ತರ:** ಇತರರಿಗೆ ದಯೆಯಿಂದ ಕರ್ಮ ಮಾಡುವುದೇನೋ ಒಳ್ಳೆಯದು. ಆದರೆ ಭಗವಂತನೇ ಎಲ್ಲರಲ್ಲಿಯೂ ಇರುವನೆಂದು ಸೇವೆ ಮಾಡುವುದು ಪರಮ ಶ್ರೇಷ್ಠ.

**ಪ್ರಶ್ನೆ:** ಪ್ರಾರ್ಥನೆಯಿಂದ ಪ್ರಯೋಜನವೇನು?

**ಉತ್ತರ:** ಪ್ರಾರ್ಥನೆಯಿಂದ ಒಬ್ಬನಲ್ಲಿರುವ ಸೂಕ್ಷ್ಮ ಶಕ್ತಿಗಳು ಸುಲಭವಾಗಿ ಜಾಗೃತವಾಗುತ್ತವೆ. ಒಬ್ಬ ಶ್ರದ್ಧೆಯಿಂದ ಮಾಡಿದರೆ ಹತ್ತರಲ್ಲಿ ಒಂದು ಈಡೇರಬಹುದು. ಆದರೆ ಇದು ಸ್ವಾರ್ಥತೆಯಿಂದ ಕೂಡಿದ ಪ್ರಾರ್ಥನೆ. ಇದನ್ನು ತ್ಯಜಿಸಬೇಕು.

ನಿಷ್ಠೆಯ ಬಗ್ಗೆ ಹೇಳುತ್ತ ಸ್ವಾಮೀಜಿ ನುಡಿಯುತ್ತಾರೆ, ‘‘ನಿಷ್ಠೆಯೇ ಸಾಕ್ಷಾತ್ಕಾರದ ಪ್ರಾರಂಭ. ಎಲ್ಲಾ ಪುಷ್ಪಗಳಿಂದಲೂ ಮಧುವನ್ನು ಹೀರಿ. ಎಲ್ಲರೊಡನೆಯೂ ಸಹಕರಿಸಿ ಸ್ನೇಹದಿಂದಿರಿ. ಎಲ್ಲರಿಗೂ ಗೌರವ ತೋರಿ. ಎಲ್ಲರಿಗೂ ಹೌದು ಸಹೋದರನೆ, ಹೌದು ಎನ್ನಿ. ಆದರೆ ನಿಮ್ಮ ಆದರ್ಶದ ಮೇಲೆ ಇರುವ ನಿಷ್ಠೆಯನ್ನು ಮಾತ್ರ ಬಿಡಬೇಡಿ.’’ *(ಕೃತಿ ಶ್ರೇಣಿ, ಸಂ. ೧, ಪು.೩೩೬).*

ಇವಿಷ್ಟನ್ನು ಇಲ್ಲಿ ಸೂಚ್ಯವಾಗಿ ಉದಾಹರಿಸಿದ್ದೇವಷ್ಟೆ. ಆಧ್ಯಾತ್ಮಿಕ ಸಾಧನೆಗೆ ಬೆಳಕನ್ನು ಚೆಲ್ಲಿ, ಉತ್ತೇಜನವನ್ನು ನೀಡುವ, ಸ್ವಾಮೀಜಿಯವರ ಸಮಗ್ರ ಕೃತಿಶ್ರೇಣಿಯನ್ನು ಅಧ್ಯಯನ ಮಾಡಿದಷ್ಟೂ ಖಂಡಿತವಾಗಿಯೂ ನಮಗೆ ಹೊಸ ಹೊಸ ಬೆಳಕು ಸಿಗುತ್ತದೆ.

***ಕೃತಿ ಪರಿಚಯ:***

ಆಂಗ್ಲಮೂಲ: **The Complete Works of Swami Vivekananda,** (9 Volumes), Advaita Ashrama, 5 Dehi Entally Road, Kolkata 700 014. Rs. 1350

ಕನ್ನಡ ಆವೃತ್ತಿ: **ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ**, (೯ ಸಂಪುಟಗಳು), ಶ್ರೀರಾಮಕೃಷ್ಣ ಆಶ್ರಮ, ಯಾದವಗಿರಿ, ಮೈಸೂರು ೫೭೦ ೦೨೦. ಬೆಲೆ: ೧೦೦೦/- 

# ಬ್ರಹ್ಮಾನಂದ ವಚನಸುಧೆ

ಡಾ. ಕೆ ಅನಂತರಾಮು

ಶ್ರೀರಾಮಕೃಷ್ಣರ ಮಾನಸಪುತ್ರರೆಂದೇ ಪ್ರಸಿದ್ಧರಾಗಿರುವ ಸ್ವಾಮಿ ಬ್ರಹ್ಮಾನಂದರ ಉಪದೇಶಗಳ ಸಂಕಲನವೇ 'ಬ್ರಹ್ಮಾನಂದ ವಚನಸುಧೆ.' ಆಧ್ಯಾತ್ಮಿಕ ಸಾಧನೆಗೆ ಅತ್ಯಮೂಲ್ಯವಾದ ಅನೇಕ ಅಂಶಗಳು ಇಲ್ಲಿ ಸಂಗ್ರಹಿಸಲ್ಪಟ್ಟಿವೆ. ಈ ಕೃತಿಯನ್ನು ಕುರಿತು ಬರೆದಿರುವ ಲೇಖಕರು ನಿವೃತ್ತ ಕನ್ನಡ ಪ್ರಾಧ್ಯಾಪಕರು. ಪ್ರಸಿದ್ಧ ವಾಗ್ಮಿಗಳೂ, ಉತ್ತಮ ಬರಹಗಾರರೂ ಆಗಿರುವ ಇವರು ಅನೇಕ ಸಾಹಿತ್ಯಿಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಅವರ ಅನೇಕ ಬರಹಗಳು, ಸರಣಿಲೇಖನಗಳು 'ವಿವೇಕಪ್ರಭ'ದಲ್ಲಿ ಪ್ರಕಟವಾಗಿವೆ. ಶ್ರೀಯುತರು ಹಲವು ಯುವಶಿಬಿರ ಹಾಗೂ ವಿದ್ಯಾರ್ಥಿ ಶಿಬಿರಗಳಲ್ಲಿ ಪಾಲ್ಗೊಂಡು, ತಮ್ಮ ಆಧ್ಯಾತ್ಮಿಕ, ಮೌಲಿಕ ವಿಚಾರಗಳಿಂದ ಹೊಸ ತಲೆಮಾರಿಗೆ ಪ್ರೇರಣೆ ನೀಡುವ ಕಾರ್ಯದಲ್ಲಿ ನಿರತರಾಗಿದ್ದಾರೆ.



ಶ್ರೀರಾಮಕೃಷ್ಣ ಪರಮಹಂಸರ ನೇರ ಶಿಷ್ಯರಲ್ಲಿ ಸ್ವಾಮಿ ಬ್ರಹ್ಮಾನಂದರಿಗೆ (೧೮೬೩-೧೯೨೨) ಪ್ರಮುಖವಾದೊಂದು ಸ್ಥಾನ ಸಲ್ಲುತ್ತದೆ. ಪರಮಹಂಸರೇ ಬ್ರಹ್ಮಾನಂದರನ್ನು ತಮ್ಮ ಮಾನಸಪುತ್ರನೆಂದು ಭಾವಿಸಿದ್ದರು. ಸ್ವಾಮಿ ವಿವೇಕಾನಂದರಾದರೋ ಬ್ರಹ್ಮಾನಂದರನ್ನು ಆಧ್ಯಾತ್ಮಿಕ ಅನುಭವಗಳ ಮೇರು ಪರ್ವತ ಎಂದು ಕೊಂಡಾಡುತ್ತಿದ್ದರು. ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣ ಮಹಾಸಂಘವನ್ನು ಸ್ಥಾಪಿಸಿದ ಬಳಿಕ, ಕೊಲ್ಕತ್ತೆಯ ಕೇಂದ್ರಕ್ಕೆ ಬ್ರಹ್ಮಾನಂದರನ್ನೇ ಅಧ್ಯಕ್ಷರನ್ನಾಗಿ ಮಾಡಿದರು. ಆ ಹೊಣೆಗಾರಿಕೆಯನ್ನವರು, ತಾವು ಮಹಾಸಮಾಧಿಯನ್ನು ಪಡೆದುಕೊಳ್ಳುವವರೆಗೂ ನಿರ್ವಹಿಸಿದರು. ಯುವಕ ಸಂನ್ಯಾಸಿಗಳಿಗೆ ತರಬೇತಿ ನೀಡುವ ಗುರುತರವಾದ ಕಾರ್ಯವೂ ಅವರ ಪಾಲಿಗೆ ಬಂದಿತ್ತು. ಅದನ್ನವರು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿ, ರಾಮಕೃಷ್ಣ ಮಠ ಪರಂಪರೆಗೆ ಭದ್ರ ಬುನಾದಿಯೊಂದನ್ನು ಹಾಕಿದರೆಂಬುದಕ್ಕೆ ಈ **'ಬ್ರಹ್ಮಾನಂದ ವಚನಸುಧೆ'** ಎಂಬ ಗ್ರಂಥವು ಸಾಕ್ಷಿ ನುಡಿಯುತ್ತದೆ. ಗ್ರಂಥದ ಶೀರ್ಷಿಕೆಯೂ ಮನೋಹಾರಿಯಾಗಿದೆ.

ಗ್ರಂಥವು ಸಂಪೂರ್ಣವಾಗಿ ಗುರುಶಿಷ್ಯರ ಸಂವಾದರೂಪದಲ್ಲಿಯೇ ಇದೆ. ಇದೊಂದು 'ಪ್ರಶ್ನೋಪನಿಷತ್ತು' ಎಂದು ಹೇಳಿದರೂ ಒಪ್ಪುತ್ತದೆ. ರಾಮಕೃಷ್ಣ ಸಂಘವನ್ನು ಪ್ರವೇಶಿಸುವ ಯುವಕರು, ಸಂನ್ಯಾಸದೀಕ್ಷೆಯನ್ನು ಸ್ವೀಕರಿಸುವುದಕ್ಕೆ ಪೂರ್ವಭಾವಿಯಾಗಿ, ಹಲವು ವರ್ಷಗಳ ಕಾಲ ಬ್ರಹ್ಮಚರ್ಯಾಶ್ರಮದಲ್ಲಿರುತ್ತ, ಸಾಧನೆ ಮಾಡುತ್ತಾರೆ. ಧ್ಯಾನ, ಪೂಜೆ, ಅಧ್ಯಯನ, ಸ್ವಾಧ್ಯಾಯ, ಗುರುಸೇವೆ, ಅತಿಥಿಸೇವೆ, ಲೋಕಸೇವೆ, ಲೋಕಸಂಚಾರ ಎಂಬಂತೆ ಆ ಅವಧಿಯ ಕಾರ್ಯಚಟುವಟಿಕೆಗಳು ಅತ್ಯಂತ ನಿಬಿಡವಾಗಿರುತ್ತವೆ. ಗುರಿಯನ್ನು ಸಾಧಿಸಲು ಬೇಕಾದಷ್ಟು ಆಂತರಿಕ ಹೋರಾಟವನ್ನು ಅವರು ನಡೆಸಬೇಕಾಗುತ್ತದೆ. ಅಂತಹ ಹೊತ್ತಿನಲ್ಲಿ, ಹಿರಿಯ ಸಂನ್ಯಾಸಿಗಳಿಂದ, ಸೂಕ್ತವಾದ ಮಾರ್ಗದರ್ಶನ ಅಗತ್ಯವಾಗಿ ಬೇಕಾಗುತ್ತದೆ. **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಎಂಬ ವಿವೇಕಾನಂದರ ಸೂತ್ರದಂತೆ, ರಾಮಕೃಷ್ಣ ಮಠದ ಸಂನ್ಯಾಸಿಗಳು, ಆತ್ಮಸಾಕ್ಷಾತ್ಕಾರದ ಜೊತೆಗೆ ಲೋಕಹಿತಕಾರಿಯಾದ ಸೇವಾ ಕಾರ್ಯಗಳನ್ನೂ ಮಾಡುತ್ತಾರೆ. ಅವರ ಬದುಕು ಈ ಎರಡು ಗುರಿಗಳಿಗೆಂದೇ ಸಮರ್ಪಿತವಾಗಿ ಬಿಡುತ್ತದೆ. ಹಾಗೆ ಸಮರ್ಪಿಸಿಕೊಂಡ ಜೀವನ ತೊಳಲಾಟಗಳೇನು, ಅದನ್ನು ನಿವಾರಿಸಿಕೊಂಡು ಬಹ್ಮಾನುಭವಿಯಾಗಿ ಮೇಲೆದ್ದು ಬರುವ ಪರಿಯೆಂತು ಎಂಬುದರ ಸಾರಸರ್ವಸ್ವವೂ ಈ ಗ್ರಂಥದಲ್ಲಿದೆ. ಈ ಗ್ರಂಥವು ರಾಮಕೃಷ್ಣಾಶ್ರಮದ ಸಂನ್ಯಾಸಿಗಳಿಗೆ ದಾರಿ ತೋರಿಸುವಂತಿದೆ. ಇಲ್ಲಿ ಶಿಷ್ಯರು ಕೇಳಿದ ಪ್ರಶ್ನೆಗಳಿಗೆ, ಸಂದೇಹಗಳಿಗೆ ಬ್ರಹ್ಮಾನಂದ ಗುರುಗಳು ಕೊಟ್ಟ ಮನೋಜ್ಞ ವಾದ ಉತ್ತರಗಳಿವೆ. ಕೆಲವಡೆ ಬ್ರಹ್ಮಾನಂದರೇ ನೇರವಾಗಿ ಉಪದೇಶದ ಮಾತುಗಳನ್ನು ಹೇಳಿದ್ದಾರೆ. ಸಂನ್ಯಾಸಿಗಳಾಗದಿದ್ದರೇನಂತೆ, ಗೃಹಸ್ಥರಾಗಿಯೇ ಮಾಡೋಣ ಎಂದು ಆಶಿಸುವವರಿಗೂ ಈ ಗ್ರಂಥವೊಂದು ತವನಿಧಿಯಾಗಿದೆ.

## ಕೃತಿಯ ವಸ್ತುವೈವಿಧ್ಯ

ಸ್ವಾಮಿ ಬ್ರಹ್ಮಾನಂದರು ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡವರಾಗಿದ್ದರು. ತಾವು ಪಡೆದ ದಿವ್ಯಾನುಭವವನ್ನು ಇತರರೂ ಪಡೆದುಕೊಳ್ಳಲು ಸಹಾಯಕವಾಗಲಿ ಎಂದು, ಅದನ್ನೆಲ್ಲ ಶಿಷ್ಯರಿಗೆ ತಿಳಿಸಿಕೊಟ್ಟು ಮಾರ್ಗದರ್ಶನ ಮಾಡಿದರು. ಆತ್ಮಸಾಕ್ಷಾತ್ಕಾರದ ಅನುಭವ ಶಿಖರದೆಡೆಗೆ ಏರಿಹೋಗುವುದಕ್ಕೆ ಇಲ್ಲಿನ ಉಪದೇಶಶ್ರೇಣಿ ಸಹಾಯಕವಾಗುತ್ತದೆ ಎಂದು ಸ್ವಾಮಿ ಯತೀಶ್ವರಾನಂದರು ಬರೆದಿದ್ದಾರೆ. ಸಾಧನೆಯ ಆರಂಭದ ಹಂತಗಳಲ್ಲಿರುವ ಸಾಧಕರಿಗೆ ಇಲ್ಲಿನ ಸಲಹೆಗಳು, ಉತ್ತರಗಳು, ಉಪದೇಶಗಳು, ಹೆಚ್ಚಾಗಿ ಅನ್ವಯಿಸುವಂತಿದೆ. ಬ್ರಹ್ಮಚಾರಿಗಳನ್ನು ತಿದ್ದುವ, ಅವರಿಗೆ ಸೂಕ್ತ ಮಾರ್ಗದರ್ಶನ ನೀಡುವ ಅವರಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸುವ, ಆತ್ಮಸಾಕ್ಷಾತ್ಕಾರಕ್ಕೆ ಅವರನ್ನು ಅಣಿಗೊಳಿಸುವ ರಾಮಕೃಷ್ಣ ಮಿಷನ್ನಿನ ಬೇರೆ ಬೇರೆ ಕೇಂದ್ರಗಳಲ್ಲಿ ನಡೆದ ಸಂವಾದಗಳು ಇಲ್ಲಿರುವುದರಿಂದ, ಸಾಕಷ್ಟು ಪುನರುಕ್ತಿಗಳಿವೆ. ಆ ಪುನರುಕ್ತಿಗಳಿಗೂ ಸನ್ನಿವೇಶದ ಬಲದಿಂದ ಹೊಸ ತೇಜಸ್ಸು ಕೂಡಿ ಕೊಂಡಿದೆ. ಬ್ರಹ್ಮಾನಂದರ ನೇರಶಿಷ್ಯರಾದ ಯತೀಶ್ವರಾನಂದ ಮೊದಲಾದ ಕೆಲವರು ಆ ಸಂವಾದಗಳನ್ನೆಲ್ಲ ಬರೆದಿಟ್ಟುಕೊಂಡಿದ್ದರು. ಅವುಗಳನ್ನೆಲ್ಲ ಯತೀಶ್ವರಾನಂದರು ಪರಿಷ್ಕರಿಸಿ, ರಾಮಕೃಷ್ಣ ಸಂಘದ ಚೆನ್ನೈ ನಿಂದ ಹೊರಡುವ 'ವೇದಾಂತಕೇಸರಿ' ಮಾಸಪತ್ರಿಕೆಯಲ್ಲಿ ಆಂಗ್ಲ ಭಾಷೆಯಲ್ಲಿ ಪ್ರಕಟಿಸಿದ್ದರು. ಅದೆಲ್ಲ ಬಂಗಾಳಿ ಭಾಷೆಯಿಂದ ಆದ ಆಂಗ್ಲ ತರ್ಜುಮೆ. ಬಂಗಾಳಿ ಮೂಲದ ಕನ್ನಡಾನುವಾದವೇ ಪ್ರಸ್ತುತ **'ಬ್ರಹ್ಮಾನಂದ ವಚನಸುಧೆ'**. ಕನ್ನಡಕ್ಕೆ ಅನುವಾದಿಸಿದವರು ಯಾರು ಎಂಬುದು ಸೂಚಿತವಾಗಿಲ್ಲದಿದ್ದರೂ, ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದು, ಅದರ ಅಧ್ಯಕ್ಷರೂ ಆಗಿದ್ದು ನಿವೃತ್ತರಾದ ಸ್ವಾಮಿ ಸೋಮನಾಥಾನಂದರೇ ಅದನ್ನು ಅನುವಾದಿಸಿದ್ದಾಗಿ ಆಶ್ರಮದ ಮೂಲಗಳಿಂದ ತಿಳಿದುಬರುತ್ತದೆ. ಆದರೆ ಅನುವಾದವು ಮಾತ್ರ ಅತ್ಯಂತ ಸಹಜವಾಗಿದೆ, ಯಶಸ್ವಿಯಾಗಿದೆ.

೧೨೪ ಪುಟಗಳಲ್ಲಿ ಅಡಕವಾಗಿರುವ ಗ್ರಂಥವಿದು. ಧ್ಯಾನ ಮತ್ತು ಸಾಕ್ಷಾತ್ಕಾರ, ಪ್ರಾಪಂಚಿಕರು ಮತ್ತು ಆಧ್ಯಾತ್ಮಿಕ ಜೀವನ, ಶರಣಾಗತಿಯ ಮೂಲಕ ಸಾಕ್ಷಾತ್ಕಾರ, ಪ್ರಪಂಚ ಮತ್ತು ದೇವರು, ಕರ್ಮ ಮತ್ತು ಪೂಜೆ, ಧ್ಯಾನ, ಬ್ರಹ್ಮಚರ್ಯ, ಸಾಧುಸಂಗ, ಕೆಲವು ಸಲಹೆ, ತಪಸ್ಸು, ಶಿಷ್ಯನಿಗೆ ಬರೆದ ಒಂದು ಪತ್ರ, ಪತ್ರದ ಕೆಲವು ಅಂಶಗಳು ಎಂಬಂತೆ ಈ ಗ್ರಂಥದಲ್ಲಿ ಚಿಕ್ಕಚಿಕ್ಕ ೩೫ ಅಧ್ಯಾಯಗಳಿವೆ. 'ಆಧ್ಯಾತ್ಮಿಕ ಜೀವನದಲ್ಲಿ ನಡೆಯಬೇಕೆಂದು ಬಯಸುವವರಿಗೆ ಈ ಗ್ರಂಥ ಒಂದು ಪಠ್ಯಪುಸ್ತಕದಂತೆ ಇದೆ. ಸಾಧಕರ ಜೀವನದಲ್ಲಿ ಬರುವ ಹಲವಾರು ಸಂಶಯ, ಆತಂಕಗಳು, ಅದನ್ನು ಹೇಗೆ ಎದುರಿಸಿ ಪಾರಾಗಬೇಕೆಂಬುದನ್ನು ಇಲ್ಲಿ ವಿವರಿಸಿರುವರು. ಕೇವಲ ಪಾಂಡಿತ್ಯದ ದೃಷ್ಟಿಯಿಂದ ಇದನ್ನು ಬರೆದುದಲ್ಲ. ಇದರಲ್ಲಿ ಇರುವುದೆಲ್ಲ ಅನುಭವದ ಮಾತು. ಆತ್ಮಸಾಕ್ಷಾತ್ಕಾರವನ್ನೂ ಪಡೆದ ಪೂಜ್ಯತಮ ವ್ಯಕ್ತಿಯ, ಹೃದಯಾಂತರಾಳದಿಂದ ಜಿನುಗಿ ಬಂದ ವಚನಸುಧೆ ಇದು'' ಎಂದು ಪರಿಚಯದಲ್ಲಿ ಬರೆದಿರುವ ಪ್ರಕಾಶಕರ ಮಾತು, ಅತ್ಯಂತ ಮನನ ಯೋಗ್ಯವಾಗಿದೆ. ಗ್ರಂಥದ ಮುಖ್ಯಾಂಶಗಳನ್ನು ಇಲ್ಲಿ ಸಂಗ್ರಹಿಸಿ ಬರೆಯುತ್ತೇನೆ:

## ಬ್ರಹ್ಮಚಾರಿಗಳು ಮತ್ತು ಬ್ರಹ್ಮಚರ್ಯ

ಪರಮಹಂಸರ, ವಿವೇಕಾನಂದರ ಕೃಪಾಶ್ರಯಕ್ಕೆ ಬಂದವರು ಭಗವಂತನ ಸಾಕ್ಷಾತ್ಕಾರವೇ ಮಾನವ ಜನ್ಮದ ಪರಮಗುರಿ ... ಎಂಬುದನ್ನು ದೃಢಪಡಿಸಿಕೊಳ್ಳಬೇಕು. ಆ ಪ್ರಯತ್ನದಲ್ಲಿ ಸಾವು ಎದುರಾದರೂ ವಿಮುಖರಾಗಬಾರದು. ಲೋಕದಲ್ಲಿ ಯಾವ ಯಾವ ಬಗೆಯ ಸುಖಗಳು ಇವೆಯೋ, ಅವುಗಳನ್ನೆಲ್ಲವೂ ದುಃಖದಲ್ಲಿಯೇ ಕೊನೆಗಾಣುತ್ತವೆ. ಭಗವಂತನ ಸಾಕ್ಷಾತ್ಕಾರದಿಂದ ಮಾತ್ರವೇ ಶಾಶ್ವತವಾದ ಆನಂದ ಲಭಿಸುವುದು ಸಾಧ್ಯ.

ಹದಿನಾರನೆಯ ವಯಸ್ಸಿನಿಂದ ಮೂವತ್ತನೆಯ ವಯಸ್ಸಿನವರೆಗೆ ಪರಮಾತ್ಮನ ಸಾಕ್ಷಾತ್ಕಾರ ಪಡೆಯಲು ಅತ್ಯಂತ ಪ್ರಶಸ್ತವಾದ ಕಾಲ. ಆಗ ಮನಸ್ಸು ಜೇಡಿಮಣ್ಣಿನಂತೆ ಇರುತ್ತದೆ. ನಮಗೆ ಬೇಕಾದ ಆಕಾರವನ್ನು ಅದಕ್ಕೆ ಕೊಡಬಹುದು. ಪ್ರಾಪಂಚಿಕವಾದ ಯಾವ ಮುದ್ರೆಯೂ ಅದರ ಮೇಲೆ ಬಿದ್ದಿರುವುದಿಲ್ಲ.

ನೈಷ್ಠಿಕ ಬ್ರಹ್ಮಚರ್ಯವಿಲ್ಲದೆ ಯಾವುದೇ ದೊಡ್ಡ ಸಾಧನೆಯನ್ನೂ ಮಾಡುವುದು ಸಾಧ್ಯವಿಲ್ಲ. ಬ್ರಹ್ಮಚರ್ಯದಿಂದ ದೇಹ, ಬುದ್ಧಿ ಮತ್ತು ಮನಸ್ಸು ದೃಢವಾಗಿ ಬೆಳೆಯುತ್ತವೆ. ಬ್ರಹ್ಮಚರ್ಯದಿಂದ ಶರೀರದಲ್ಲಿ ಒಂದು ಪ್ರತ್ಯೇಕ ನಾಡಿಯೇ ವಿಕಾಸಗೊಂಡು, ಅದರ ಬಲದಿಂದ ಅಪೂರ್ವ ಜ್ಞಾಪಕಶಕ್ತಿಯೇ ಮುಂತಾದ ವಿಶಿಷ್ಟ ಶಕ್ತಿಗಳು ಉದ್ಭವಿಸುತ್ತವೆ. ನಿಜವಾದ ಬ್ರಹ್ಮಚಾರಿ ತಾನೊಬ್ಬನೇ ಇಪ್ಪತ್ತೈದು ಜನರ ಕೆಲಸ ಮಾಡಬಲ್ಲವನಾಗುತ್ತಾನೆ.

ಪರಮಹಂಸರ ಪದತಲದಲ್ಲಿರುವ ಬ್ರಹ್ಮಚಾರಿಗಳು ಮದುವೆಯಾಗುವವರಲ್ಲ. ಅವರು ಭಗವಂತನಿಗಾಗಿ ತಮ್ಮ ಸುಖಭೋಗಗಳನ್ನೆಲ್ಲ ಅರ್ಪಿಸಿಬಿಟ್ಟಿದ್ದಾರೆ. ಕಳಂಕರಹಿತವಾದ ಜೀವನ ನಡೆಸುವುದು ಕಡುಕಷ್ಟವೆಂಬುದನ್ನು ಅವರು ಮನವರಿಕೆ ಮಾಡಿಕೊಂಡಿದ್ದಾರೆ. ಹರಿತವಾದ ಕತ್ತಿಯ ಅಲಗಿನ ಮೇಲೆ ನಡೆದಷ್ಟು ಕ್ಲೇಶಮಯವಾದ ಮಾರ್ಗ ಅದಾಗಿದೆ.

ನಮ್ಮ ಹಿಂದಿನ ಕರ್ಮಗಳ ಫಲವಾಗಿ ಸಾಧನೆಯ ಕಾಲದಲ್ಲಿ ನಿರಾಸೆಯ ಮೋಡ ಕವಿಯುತ್ತದೆ. ನಮ್ಮ ಹಿಂದಿನ ಸಂಸ್ಕಾರಗಳು ಮುತ್ತಿಕೊಂಡು, ಅವು ನಮ್ಮನ್ನು ತಮ್ಮ ಸ್ವಾಧೀನಕ್ಕೆ ಸೆಳೆಯಲು ಯತ್ನಿಸುತ್ತವೆ. ನಾವು ಅಂಜದೆ ಅವುಗಳೊಡನೆ ಹೋರಾಡಿ ಗೆಲ್ಲಬೇಕು. ಪ್ರಾಪಂಚಿಕ ಸುಖಭೋಗಗಳ ಆಸೆಯನ್ನು ಬ್ರಹ್ಮಚಾರಿಗಳು ತೊಡೆದುಹಾಕಬಲ್ಲರು. ಯಶೋಧೆ ಮತ್ತು ಗೋಪಿಯರು ಗೋಪಾಲಕೃಷ್ಣನನ್ನು ಕಟ್ಟಿಹಾಕಿದಂತೆ ಅವರು ಭಗವಂತನನ್ನು ತಮ್ಮ ಸಾಧನೆಯ ಬಲದಿಂದ ಕಟ್ಟಿಹಾಕಬಲ್ಲರು.

ಬ್ರಹ್ಮಚಾರಿಗಳು ಶಕ್ತಿವರ್ಧಕವಾದ, ಸುಲಭವಾಗಿ ಜೀರ್ಣವಾಗುವ ಆಹಾರವನ್ನು ಹಿತಮಿತವಾಗಿ ಸೇವಿಸಬೇಕು. ಈರುಳ್ಳಿ, ಬೆಳ್ಳುಳ್ಳಿ, ಮೆಣಸಿನಕಾಯಿ ಹೆಚ್ಚಾಗಿ ತಿಂದರೆ ಮನೋನಿಗ್ರಹ ಕಷ್ಟವಾಗುತ್ತದೆ. ಎಲ್ಲ ಸಾಧನೆಗೂ ಶರೀರವೇ ಆಧಾರವಾಗಿದುದರಿಂದ, ಅದನ್ನು ಆರೋಗ್ಯಕರವಾಗಿಯೂ ಕಾಪಾಡಿಕೊಳ್ಳಬೇಕು. ತೋರಿಕೆಗಾಗಿ ಅಥವಾ ಎಲ್ಲರೂ ನೋಡಲಿ ಎಂದು ಯಾವುದೇ ಸಾಧನೆ ಮಾಡಬಾರದು. ಅವರು ಯಾವಾಗಲೂ ಉನ್ನತ ವಿಚಾರಗಳ ಆಲೋಚನೆ, ಶ್ರೇಷ್ಠ ವಿಷಯಗಳ ಚರ್ಚೆ, ಪವಿತ್ರಗ್ರಂಥಗಳ ಅಧ್ಯಯನಗಳಿಗೆ ತಮ್ಮನ್ನು ಮೀಸಲಿಡಬೇಕು. ಧ್ಯಾನ, ಜಪ ಸಾಧುಸಹವಾಸ, ಸಾಧುಸೇವೆಗಳಲ್ಲಿ ಹೆಚ್ಚಿನ ಕಾಲ ಕಳೆಯಬೇಕು.

ಬ್ರಹ್ಮಚಾರಿಗಳು ಈ ಹಿಂದೆ ತಮ್ಮಿಂದಾದ ತಪ್ಪುಗಳ ವಿಚಾರವನ್ನಾಗಲಿ, ಸಾಧನೆಯಲ್ಲಿ ತಮಗುಂಟಾದ ಸೋಲುಗಳ ವಿಚಾರವನ್ನಾಗಲಿ, ಮನಸ್ಸಿಗೆ ತುಂಬಿಕೊಂಡು ಕೊರಗಬಾರದು. ಕರುಣಾಮಯನಾದ ಭಗವಂತನನ್ನು ಬೇಡಿಕೊಂಡರೆ ಸಾಕು, ಎಲ್ಲವನ್ನೂ ಸರಿಪಡಿಸಿಕೊಟ್ಟು ಉದ್ಧಾರ ಮಾಡುತ್ತಾನೆ.

### ಸದ್ಗುರುವಿನ ಅನುಗ್ರಹ

ಆಧ್ಯಾತ್ಮಿಕ ಜೀವನವು ಕಡುಕಷ್ಟದ ಪಯಣ. ದಾರಿಯೂ ಅಷ್ಟೇ ಅಪಾಯಕರ. ಒಬ್ಬ ಸದ್ಗುರುವಿನ ಮಾರ್ಗದರ್ಶನ ಇಲ್ಲದಿದ್ದರೆ, ಶಿಷ್ಯನು ಎಷ್ಟೇ ಬುದ್ಧಿವಂತನಾದರೂ ಎಡಹುವುದರಲ್ಲಿ ಸಂಶಯವಿಲ್ಲ. ಸದ್ಗುರುವು ನಮ್ಮನ್ನು ಎಲ್ಲ ಅಪಾಯಗಳಿಂದ ಪಾರುಮಾಡಿ, ಜನನಮರಣಗಳಾಚೆಗೆ ಒಯ್ಯುತ್ತಾನೆ. ಮನಸ್ಸಿನ ಏಕಾಗ್ರತೆಗೆ ಸದ್ಗುರುವಿನ ಉಪದೇಶ ಸಹಾಯಕವಾಗುತ್ತದೆ. ಈ ಪ್ರಪಂಚದಲ್ಲಿ ಕದಿಯುವ ವಿದ್ಯೆಗೂ ಒಬ್ಬ ಗುರು ಬೇಕಾಗುತ್ತಾನೆ ಎಂದ ಬಳಿಕ, ಆತ್ಮವಿದ್ಯೆಗೊಬ್ಬ ಗುರು ಇರಬೇಡವೇ! ಬ್ರಹ್ಮನಿಷ್ಠವಾದ ಗುರು ಮಂತ್ರೋಪದೇಶದ ಮೂಲಕ, ಇಷ್ಟದೈವಕ್ಕೆ ದಾರಿ ತೋರಿಸುತ್ತಾನೆ. ಶಿಷ್ಯನನ್ನು ಮೆಟ್ಟಿಲುಮೆಟ್ಟಿಲಾಗಿ ಭಗವಂತನ ಕಡೆಗೆ ಕರೆದುಕೊಂಡು ಹೋಗುತ್ತಾನೆ.

ಗುರುವು ಸಾಧಾರಣ ಮನುಷ್ಯನಲ್ಲ. ಗುರುವಿನ ದೇಹವೆಂದರೆ ಅದು ಭಗವಂತನು ನೆಲೆಸಿರುವ ಒಂದು ದೇವಾಲಯ. ಗುರುಕೃಪೆಯಿಂದ ಬ್ರಹ್ಮಜ್ಞಾನ ದೊರೆತು, ಕುಂಡಲಿನೀ ಶಕ್ತಿ ಜಾಗೃತಗೊಳ್ಳುತ್ತದೆ. ಗುರು ಇಲ್ಲವೆಂದು ನಾವು ಸುಮ್ಮನೆ ಕೂರಬಾರದು. ಸಾಧನೆ ಪ್ರಾರಂಭಿಸಿದರೆ ಗುರುವು ಸಕಾಲದಲ್ಲಿ ದೊರಕುತ್ತಾನೆ. ಸರಿಯಾದ ಗುರು ನನಗೆ ಬೇಕು ಎಂದು ಶಿಷ್ಯನು ಹಂಬಲಿಸುವಂತೆ ಸರಿಯಾದ ಶಿಷ್ಯನು ನನಗೆ ಬೇಕು ಎಂದು ಗುರುವೂ ಎದುರು ನೋಡುತ್ತಿರುತ್ತಾನೆ. ಸದ್ಗುರುವು ಭಗವದ್ದರ್ಶನ ಪಡೆದವನಾಗಿರಬೇಕು, ಭಗವಂತನ ಶಕ್ತಿಯಿಂದ ಪೋಷಿತನಾಗಿರಬೇಕು. ಅಂತಹ ಗುರುವನ್ನು ಶಿಷ್ಯನು ಆದರದಿಂದ ಕಾಣಬೇಕು. ಅವನ ಸೇವೆ ಮಾಡಬೇಕು, ಅವನ ವಚನಗಳನ್ನು ಪರಿಪಾಲಿಸಬೇಕು. ಗುರುರಕ್ಷಾಹಸ್ತದ ನೆರಳಿನಲ್ಲಿದ್ದರೆ, ಯಾವ ನಿಷ್ಠಾವಂತ ಶಿಷ್ಯನೂ ಅಪಾಯಕ್ಕೆ ಬೀಳುವುದಿಲ್ಲ. ಅವನಲ್ಲಿ ಶರಣಾದರೆ ತಪ್ಪುಮಾಡುವ ಸಂಭವ ಕಡಿಮೆಯಾಗಿಬಿಡುತ್ತದೆ.

### ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ

ಭಗವಂತನ ಸಾಕ್ಷಾತ್ಕಾರಕ್ಕೆ ಸಾಧುಸತ್ಪುರುಷರ ಸಹವಾಸ ಮಾಡಬೇಕು. ಒಬ್ಬ ದೊಡ್ಡ ಮನುಷ್ಯನನ್ನು ನೋಡಬೇಕೆಂದರೆ, ಮೊದಲು ಅವನ ಸೇವಕರನ್ನು ಕಂಡು ಮಾತನಾಡಿ, ಅವರನ್ನು ಸಂತೋಷಪಡಿಸಬೇಕು. ಅಂತೆಯೇ ಭಗವಂತನನ್ನು ಕಾಣಬೇಕಾದರೆ ಮೊದಲು ಭಗವಂತನ ಸೇವಕರಾದ ಸಾಧುಸಂನ್ಯಾಸಿಗಳ ಸಂಗಮಾಡಬೇಕು. ಕಾಶಿಯಲ್ಲಿ ತ್ರೈಲಂಗ ಸ್ವಾಮಿಗಳೆಂಬ ಸಾಧುವೊಬ್ಬರಿದ್ದರು. ಸಾಧಕರೊಬ್ಬರು ಎರಡು ಬಾರಿ ದರ್ಶನಕ್ಕೆಂದು ಹೋದರು. ಮೊದಲ ಬಾರಿ ಮೌನವಾಗಿದ್ದರು. ಎರಡನೆಯ ಬಾರಿ ಅವರು ತುಂಬಾ ಅತ್ತು ಗೋಳಾಡಿದರು; ಅದಾದ ಮೇಲೆ ಹೊಟ್ಟೆಹುಣ್ಣಾಗುವಂತೆ ನಕ್ಕರು; ಅಮೇಲೆ ಉನ್ಮತ್ತ ಭಕ್ತರಂತೆ ವರ್ತಿಸಿದರು. ಅದನ್ನು ಕಂಡ ಸಾಧಕರು ನಾನು ಇಂದು ಸಾವಿರ ಪುಸ್ತಕಗಳನ್ನೋದಿದರೂ ಕಲಿಯರಾದಷ್ಟು ಪಾಠ ಕಲಿತೆ. ನಾನೂ ಅವರ ಹಾಗೆಯೇ ಕಣ್ಣೀರ್ಗರೆದರೆ ಮಾತ್ರ ದೇವರು ದೊರಕುತ್ತಾನೆ; ದೇವರ ಕೃಪೆ ದೊರೆತ ಮೇಲೆ ಅಂತಹ ಆನಂದಾನುಭವ ದೊರಕುತ್ತದೆ ಎಂದು ಅರ್ಥೈಸಿಕೊಂಡರು. ಸಾಧುಸಂಗದಿಂದ ನಮಗೆ ಹಿತವಾಗುವುದು, ಅಹಿತಕಾರಿಯಾವುದು ಎಂಬುದು ತಿಳಿದುಹೋಗುತ್ತದೆ.

ನಾವೊಂದು ಹೊಸ ಊರಿಗೆ ಹೋದಾಗ. ಅಲ್ಲಿ ಒಳ್ಳೆಯ ಮಾರ್ಗದರ್ಶಿಯೊಬ್ಬನು ದೊರೆತರೆ, ನೋಡಬೇಕಾದ್ದನ್ನೆಲ್ಲ ಅತ್ಯಲ್ಪ ಕಾಲದಲ್ಲಿ ನೋಡಿಬಿಡಬಹುದು. ಅಪರಿಚಿತರಿಗೆ ಬರ ಬಹುದಾದ ಕಷ್ಟನಷ್ಟಗಳು ತಪ್ಪುತ್ತವೆ. ಹಾಗೆಯೇ ಸಾಧುಸಂಗದಿಂದ ನಾವು ಸಾಧನೆಯ ಪಥದಲ್ಲಿ ಅಡೆತಡೆಗಳಿಲ್ಲದೆ ಬೇಗನೆ ಮುಂದುವರಿಯಬಹುದು. ಗಡಿಯಾರ ಕೆಟ್ಟುಹೋದರೆ, ಅದು ಸರಿಯಾದ ಸಮಯ ತೋರಿಸುವುದಿಲ್ಲವಾದ್ದರಿಂದ, ರಿಪೇರಿ ಮಾಡಿಸಬೇಕು. ಮನವೆಂಬ ಗಡಿಯಾರ ಕೆಟ್ಟರೆ, ಸಾಧುಗಳೆಂಬ ಮಹಾತ್ಮರು ರಿಪೇರಿ ಮಾಡಿಕೊಡುತ್ತಾರೆ.

### ತೀರ್ಥಕ್ಷೇತ್ರಗಳ ಮಹಿಮೆ

ಕಾಶೀಪಟ್ಟಣ: ಸಾಧುಜೀವನಕ್ಕೆ ತೀರ್ಥಯಾತ್ರೆ ಅಗತ್ಯವಾಗಿ ಬೇಕು. ಪ್ರತಿಯೊಂದು ತೀರ್ಥಕ್ಷೇತ್ರದಲ್ಲಿಯೂ ಆಧ್ಯಾತ್ಮಿಕ ತರಂಗವೊಂದು ಹರಿಯುವ ಒಂದು ಕಾಲವಿರುತ್ತದೆ. ಅಂತಹ ಕಾಲ ಯಾವುದು ಎಂಬುದನ್ನು ಕೆಲವು ಕಾಲ ಅಲ್ಲಿ ಸಾಧನೆ ಮಾಡಿ ಸುಲಭವಾಗಿ ತಿಳಿಯಬಹುದು. ಕಾಶೀಪಟ್ಟಣವು ಪ್ರಪಂಚದಲ್ಲಿರುವ ಎಲ್ಲ ತೀರ್ಥಗಳಿಗಿಂತಲೂ ಪವಿತ್ರತಮವಾದುದು. ಅಲ್ಲಿ ಏನೇ ಸಾಧನೆ ಮಾಡಿದರೂ ಅದು ಒಂದಕ್ಕೆ ಹತ್ತಾಗಿ ಫಲಿಸುತ್ತದೆ. ಜಪತಪಧ್ಯಾನಗಳಿಂದ ಅಲ್ಲಿ ಮನಸ್ಸು ಬೇಗನೆ ಶಾಂತಸ್ಥಿತಿಗೆ ಬರುತ್ತದೆ. ಮಂತ್ರಗಳಲ್ಲಿ ಸುಪ್ತವಾಗಿರುವ ಮಹಾಶಕ್ತಿ ಅಲ್ಲಿ ಬೇಗನೆ




ಜಾಗೃತವಾಗುತ್ತದೆ. ಅಲ್ಲಿ ಸಾಧುಸತ್ಸಂಗ ಲಭಿಸುತ್ತದೆ. ಪ್ರಾಪಂಚಿಕ ಆಲೋಚನೆ ಕಡಿಮೆಯಾಗಿ ಭಗವಂತನ ಆಲೋಚನೆ ಹೆಚ್ಚುತ್ತದೆ. ಅಲ್ಲಿ ಮರಣ ಹೊಂದುವ ಸರ್ವರಿಗೂ ವಿಶ್ವನಾಥನು ಮುಕ್ತಿಯನ್ನು ಕರುಣಿಸುತ್ತಾನೆಂದು ಆಸ್ತಿಕರು ನಂಬುತ್ತಾರೆ. ಅದನ್ನು ಅಲ್ಲಗಳೆಯಲಾಗದು. ಏಕೆಂದರೆ ವಿಶ್ವನಾಥನ ರೀತಿ ವಿಚಿತ್ರವಾದುದು, ಅದು ನಮಗೆ ಗೊತ್ತಾಗುವುದಿಲ್ಲ. ಈಗಲೂ ಅನೇಕರು ಕಾಶಿಯಲ್ಲಿ ತಮ್ಮ ಜೀವಿತದ ಕೊನೆಯ ದಿನಗಳನ್ನು ಕಳೆಯಲು ಕಾತರರಾಗಿರುತ್ತಾರೆ.

**ಹರಿದ್ವಾರ:** ಹರಿದ್ವಾರದ ವಾತಾವರಣ ಬಹಳ ಪವಿತ್ರವಾಗಿದೆ. ಅಲ್ಲಿ ಏಕಾಗ್ರತೆಗೆ ಕಷ್ಟಪಡಬೇಕಾಗಿಲ್ಲ. ಪಾವನ ಗಂಗಾನದಿಯಾಗಲಿ, ಭವ್ಯ ಹಿಮಾಲಯವಾಗಲಿ, ಅಲ್ಲಿ ನಮ್ಮನ್ನು ಧ್ಯಾನಮಗ್ನರಾಗುವಂತೆ ಮಾಡುತ್ತವೆ. ಓಂಕಾರದ ಅನಾಹತನಾದವನ್ನು ಅಲ್ಲಿ ಆಲಿಸಬಹುದು. ಅಂತಹ ಪವಿತ್ರ ಸ್ಥಳಗಳನ್ನು ಹೊಕ್ಕಾಗ ನಿದ್ರೆಯಲ್ಲಾಗಲಿ, ಸೋಮಾರಿತನದಲ್ಲಾಗಲಿ ಕಾಲಕಳೆದು ಬಿಟ್ಟರೆ ಅದಕ್ಕಿಂತ ದೊಡ್ಡ ದೌರ್ಭಾಗ್ಯ ಬೇರಾವುದೂ ಇಲ್ಲ.

**ಬೃಂದಾವನ:** ಪುಣ್ಯಕ್ಷೇತ್ರಗಳ ಸಾಲಿನಲ್ಲಿ ಶ್ರೀಕೃಷ್ಣನ ಲೀಲಾಭೂಮಿಯಾದ ಬೃಂದಾವನವೂ ಸೇರುತ್ತದೆ. ಹಗಲೆನ್ನದೆ ಇರುಳೆನ್ನದೆ ದೇವರ ಚಿಂತನೆಯಲ್ಲಿ ಮುಳುಗಿರುವ ಅನೇಕ ಸಾಧುಗಳು ಅಲ್ಲಿದ್ದಾರೆ. ಎಷ್ಟೇ ಕೆಲಸಕಾರ್ಯಗಳಿದ್ದರೂ ಬೃಂದಾವನವನ್ನು ಒಮ್ಮೆ ದರ್ಶನ ಮಾಡುವುದಕ್ಕೆ ಅವಕಾಶ ಕಲ್ಪಿಸಿಕೊಳ್ಳಲೇಬೇಕು.

### ಧ್ಯಾನ ಮತ್ತು ಆತ್ಮಸಾಕ್ಷಾತ್ಕಾರ

ಭಗವಂತನ ಸಾಕ್ಷಾತ್ಕಾರಕ್ಕೆ ಮಾನವ ಜನ್ಮ, ಮುಮುಕ್ಷುತ್ವ ಮತ್ತು ಸದ್ಗುರುವಿನ ಆಶ್ರಯ – ಈ ಮೂರೂ ಆವಶ್ಯಕ. ಅವು ಲಭಿಸಿರುವ ಬ್ರಹ್ಮಚಾರಿಗಳು ಮಾನವಜನ್ಮದ ಆ ಪರಮಗುರಿಯನ್ನು ಮುಟ್ಟಲೇ ಬೇಕು. ಧ್ಯಾನವೇ ಸಾಕ್ಷಾತ್ಕಾರಕ್ಕಿರುವ ಏಕೈಕ ಮಾರ್ಗ. ತೀವ್ರವಾದ ನಿಷ್ಠೆಯಿಂದ, ಹೃದಯದಲ್ಲಿ, ದೇವರನ್ನು ಸತತವಾಗಿ ಮನನಮಾಡುವುದೇ ಧ್ಯಾನ. ದೇಹವನ್ನು ದೇವಾಲಯವೆಂದೂ, ಅಲ್ಲಿ ಇಷ್ಟದೇವತೆ ಇದ್ದಾನೆಂದೂ ಭಾವಿಸಿ, ಮನಸ್ಸನ್ನು ಅವನ ಮೇಲೆ, ಸ್ಥಿರವಾಗಿ ಇಡಬೇಕು. ಇಷ್ಟದೇವರ ಆಕಾರ ನಿರಾಕಾರ, ಎರಡೂ ಅದರಲ್ಲಿ ಸೇರಿವೆ.

ನೇರವಾಗಿ ಪದ್ಮಾಸನದಲ್ಲಿ ಕೂರಬೇಕು. ಹೃದಯದ ಹತ್ತಿರದಲ್ಲೋ ಅದಕ್ಕಿಂತ ಸ್ವಲ್ಪ ಕೆಳಗೋ ಕೈಯಲ್ಲಿ ಹಿಡಿದುಕೊಳ್ಳಬೇಕು. ಮನಸ್ಸಿನ ಏಕಾಗ್ರತೆ ಬಹಳ ಕಷ್ಟ. ಅದು ಬಾಲಕನಂತೆ ಚಂಚಲ. ಎಳೆದೆಳೆದು ತಂದು ದೇವರ ಮೇಲೆ ಕೂರಿಸಬೇಕು. ಮಾವುತನು ಮದ್ದಾನೆಯನ್ನು ಪಳಗಿಸುವಂತೆ ಮನಸ್ಸನ್ನು ಪಳಗಿಸಿ ಮೆಟ್ಟಿಲು ಮೆಟ್ಟಿಲಾಗಿ ಮೇಲೆತ್ತಬೇಕು. ಮಾಯೆಯು ಸೃಷ್ಟಿಸುವ ಪ್ರಲೋಭನೆಯ ಬಲೆಗೆ ಬೀಳದಿರಬೇಕು. ಅದು ಉರಿಯುವ ಬೆಂಕಿಯ ಮಧ್ಯೆ ಕುಳಿತುಕೊಳ್ಳುವುದಕ್ಕಿಂತಲೂ ಕಠಿಣ. ಭೋಗ ಮತ್ತು ದೈವ ಸಾಕ್ಷಾತ್ಕಾರ ಒಟ್ಟಿಗೆ ಸಾಗಲಾರವು. ಧ್ಯಾನಕ್ಕೆ ಮುಂಚೆ ಯಾವುದಾದರೂ ಪವಿತ್ರ ಗ್ರಂಥವನ್ನು ಸ್ವಲ್ಪ ಹೊತ್ತು ಓದಿದರೆ ಏಕಾಗ್ರತೆಗೆ ಸಹಾಯವಾಗುತ್ತದೆ.

ಬೇಗ ದರ್ಶನವಾಗಲಿಲ್ಲವಲ್ಲಾ ಎಂದು ಆತುರ, ಕಳವಳ, ನಿರಾಸೆಗಳಿಗೆ ಬಲಿಯಾಗಬಾರದು. ಸಾಗರಗರ್ಭದಲ್ಲಿರುವ ಮುತ್ತು ರತ್ನಗಳು ಮೊದಲ ಮುಳುಗುವಿಕೆಗೆ ಸಿಕ್ಕದೆ ಹೋಗಬಹುದು. ಆದರೆ ತಾಳ್ಮೆಯಿಂದ ಮರಮರಳಿ ಮುಳಗಿ ಅದನ್ನು ಪಡೆಯಲೇ ಬೇಕು. ಪ್ರಾತಃಸಂಧ್ಯಾ ಮತ್ತು ಸಾಯಂಕಾಲಗಳು ಧ್ಯಾನಕ್ಕೆ ಪ್ರಶಸ್ತಕಾಲಗಳು. ಆಗ ಸುಷುಮ್ನನಾಡಿ ಜಾಗೃತವಾಗಿರುತ್ತದೆ. ಧ್ಯಾನದಲ್ಲಿ ಮೊದಲು ಸ್ಥೂಲದಿಂದ ಪ್ರಾರಂಭಿಸಿ ಸೂಕ್ಷ್ಮದೆಡೆಗೆ ಸಾಗಬೇಕು, ಸೂಕ್ಷ್ಮದಿಂದ ಕಾರಣ, ಅಲ್ಲಿಂದ ಮಹಾಕಾರಣ, ಕೊನೆಗೆ ಸಮಾಧಿ. ಇದೆಲ್ಲ ಬ್ರಹ್ಮಮಯ ಎಂಬ ಅರಿವೇ ಸಮಾಧಿ. ಧ್ಯಾನಕಾಲದಲ್ಲಿ ಆನಂದಮಯರಾಗಿರುತ್ತ, ನನ್ನ ಇಷ್ಟದೇವರೂ ಆನಂದಮಯವೆಂದು ಭಾವಿಸುತ್ತಿರಬೇಕು. ಧ್ಯಾನದಲ್ಲಿ ಮುಂದುವರಿದಂತೆ ದಿವ್ಯಜ್ಯೋತಿಯ ದರ್ಶನ, ದಿವ್ಯನಾದಗಳ ಆಕರ್ಣನ – ಆಗಬಹುದು. ಆದರೆ ಅದೇ ಸರ್ವಸ್ವವಲ್ಲ.

ರೋಗಕ್ಕೆ ಔಷಧಿ ಸೇವಿಸುವವವರಂತೆ ಎಡೆಬಿಡದೆ ಏಳೆಂಟು ವರ್ಷ ಧ್ಯಾನಮಾಡಬೇಕು. ಸಾಕ್ಷಾತ್ಕಾರಕ್ಕೆ ಭಗವಂತನ ಕೃಪೆಯೆಂಬ ಕಾಲ ಕೂಡಿಬರಬೇಕು. ಮೊಟ್ಟೆಯನ್ನು ಯಾವಾಗ ಒಡೆಯಬೇಕೆಂಬುದು ತಾಯಿ ಹಕ್ಕಿಗೆ ಗೊತ್ತು. ಹಾಗೆಯೇ ಭಗವಂತ ಸಕಾಲದಲ್ಲಿ ದರ್ಶನ ನೀಡುತ್ತಾನೆ.

## ಸಾಧಕರಿಗೆ ಉಪದೇಶದ ಖಜಾನೆ

**ಸಮಯದ ಸದುಪಯೋಗ:** ಜೀವನವು ನದಿಯಂತೆ ವೇಗವಾಗಿ ಹರಿದುಹೋಗುತ್ತದೆ. ಕಳೆದ ದಿನಗಳು ಪುನಃ ಬರುವುದಿಲ್ಲ. ಆದ್ದರಿಂದಲೇ ಈಗಿರುವ ಕಾಲವನ್ನು ಚೆನ್ನಾಗಿ ಉಪಯೋಗಿಸಿ ಕೊಳ್ಳಬೇಕು. ಕೊನೆಗಾಲದಲ್ಲಿ ಅಯ್ಯೋ ವ್ಯರ್ಥವಾಯಿತು ಎಂದು ಹಲುಬಿದರೆ ಏನು ಪ್ರಯೋಜನ? ಸುಳ್ಳು ಹೇಳಬಾರದು: ಸುಳ್ಳು ಹೇಳುವುದೆಂದರೆ ಅದು ಪ್ರಪಂಚದ ಪಾತಕಗಳಲ್ಲಿಯೇ ಅತಿ ದೊಡ್ಡ ಪಾತಕ. ಕುಡುಕನನ್ನಾದರೂ ನಂಬಬಹುದು, ಪರಸ್ತ್ರೀವ್ಯಾಮೋಹಿಯನ್ನಾದರೂ ನಂಬಬಹುದು. ಆದರೆ ಸುಳ್ಳು ಗಾರನನ್ನು ನಂಬಬಾರದು.

**ಮೌನದ ಪರಿಮಿತಿ:** ಸಾಧನೆಯ ಕಾಲದಲ್ಲಿ ಸಂಪೂರ್ಣ ಮೌನ ವನ್ನೇನೂ ಆಚರಿಸಬೇಕಾಗಿಲ್ಲ. ಕಾಡುಹರಟೆಯಿಂದ ಹೇಗೆ ಕೇಡು ಉಂಟಾಗುತ್ತದೆಯೋ ಹಾಗೆಯೇ ಬಲವಂತದ ಮೌನದಿಂದಲೂ ಕೇಡುಂಟಾಗುತ್ತದೆ. ಆದ್ದರಿಂದ ಅಗತ್ಯವಿರುವಷ್ಟು ಮಾತ್ರ ಮಾತ ನಾಡಿದರೆ, ಅದು ಮೌನದಷ್ಟೇ ಫಲವನ್ನು ನೀಡುತ್ತದೆ.

**ಸಾಧನೆ ಮತ್ತು ಸುಷುಪ್ತಿ:** ಆರೋಗ್ಯವಂತನಾಗಿರುವ ಸಾಧಕ, ದಿನಕ್ಕೆ ನಾಲ್ಕುಗಂಟೆ ನಿದ್ರೆ ಮಾಡಿದರೆ ಸಾಕು. ಐದು ಗಂಟೆ ಬೇಕಾದರೂ ಮಾಡಲಿ. ಅದಕ್ಕಿಂತ ಹೆಚ್ಚು ನಿದ್ರೆ ಮಾಡಿದರೆ ಅದೊಂದು ರೋಗವೇ ಸರಿ.

**ಭಗವಂತನನ್ನು ನಂಬಬೇಕು:** ದೇವರು ಖಂಡಿತವಾಗಿಯೂ ಇದ್ದಾನೆ. ಅವನನ್ನು ನಂಬಬೇಕು. ಅವನಿಲ್ಲದೆ ನಾವು ಮುಂದುವರಿ ಯುವುದಕ್ಕೆ ಆಗುವುದಿಲ್ಲ. ಅವನ ದಯೆಯನ್ನು ಸಂಪಾದಿಸುವುದಕ್ಕೆ ಪ್ರಾರ್ಥನೆಯ ಮೂಲಕ ಹೃತ್ಪೂರ್ವಕವಾಗಿ ಪ್ರಯತ್ನಿಸಬೇಕು.

**ಮಾತುಕೊಡುವುದು:** ಇತರರಿಗೆ ಮಾತುಕೊಡುವಾಗ ಖಂಡಿತ ವಾಗಿ ಮಾಡುತ್ತೇನೆ ಎನ್ನುವ ಬದಲು ನಾನು ಪ್ರಯತ್ನ ಪಡುತ್ತೇನೆ ಎಂದು ಹೇಳಬೇಕು. ಏಕೆಂದರೆ, ನಾವು ಮಾತು ಕೊಟ್ಟಂತೆ ಮಾಡಲು ಸಾಧ್ಯವಾಗದೆ ಹೋಗಬಹುದು.

**ಪರದೋಷಾನ್ವೇಷಣೆ:** ಮತ್ತೊಬ್ಬರಲ್ಲಿ ಎಂದೂ ತಪ್ಪು ಕಂಡು ಹಿಡಿಯಬಾರದು. ಅದು ಸಾಧಕನ ಶ್ರೇಯಸ್ಸಿಗೆ ವಿನಾಶ ಕಾರಿ. ಮತ್ತೊಬ್ಬರ ಕೆಟ್ಟಗುಣಗಳನ್ನೇ ಆಲೋಚನೆ ಮಾಡುತ್ತಿದ್ದರೆ, ನಮ್ಮಲ್ಲಿರುವ ಒಳ್ಳೆಯ ಗುಣಗಳೆಲ್ಲ ಮಾಯವಾಗಿ ಬಿಡುತ್ತವೆ. ಮತ್ತೊಬ್ಬರಲ್ಲಿ ಅತಿ ಸ್ವಲ್ಪ ಒಳ್ಳೆಯ ಗುಣವಿದ್ದರೂ ಅದನ್ನು ನೋಡಿ, ದೊಡ್ಡದು ಮಾಡಿ ಹೊಗಳಬೇಕು. ಹಾಗೆ ಮಾಡಿದರೆ ನಮ್ಮ ಮನಸ್ಸು ವಿಕಾಸಗೊಳ್ಳುತ್ತದೆ.

**ಏಕಾಂತದಲ್ಲಿ ಸಾಧನೆ:** ಆಧ್ಯಾತ್ಮಿಕ ಜೀವನದಲ್ಲಿ ಸ್ವಲ್ಪ ಮುಂದು ವರಿದ ಮೇಲೆ ಮಾತ್ರವೇ ನಿರ್ಜನ ಏಕಾಂತಕ್ಕೆ ಹೋಗಬೇಕು. ಮೊದ ಮೊದಲೇ ಹೋಗುವುದು ಅಪಾಯಕಾರಿ. ಮನುಷ್ಯ ಸಂಪರ್ಕ ದಿಂದ ಪಾರಾಗಲು ಯತ್ನಿಸಿ ಕೆಲವರು ಹುಚ್ಚರಾಗಿಬಿಟ್ಟಿದ್ದಾರೆ. ನಿರ್ಜನ ಪ್ರದೇಶದಲ್ಲಿ ಸಾಧನೆ ಮಾಡುವಾಗ ಒಂದೇ ಸ್ವಭಾವದ ಇಬ್ಬರು ಇರುವುದು ಮೇಲು. ಯಾರಿಗಾದರೂ ಸ್ವಲ್ಪ ತೊಂದರೆಯಾ ದರೆ ಮತ್ತೊಬ್ಬರು ಅವರಿಗೆ ಸಹಾಯ ಮಾಡಬಹುದು. ಎಲ್ಲಕ್ಕಿಂತ ಮಿಗಿಲಾಗಿ, ನಿಜವಾದ ಏಕಾಂತವೆಂಬುದು ಮನಸ್ಸಿನ ಆಚೆ, ಬುದ್ಧಿಯ ಆಚೆ ಇದೆ ಎಂಬುದನ್ನು ಮರೆಯಬಾರದು.

**ಮಧುಕರಿ ಶ್ರೇಯಸ್ಕರ:** ಸಾಧನೆಯ ಕಾಲದಲ್ಲಿ ಒಂದೇ ಅನ್ನಛತ್ರ ದಿಂದ ಆಹಾರ ಪಡೆದು ಕೊಳ್ಳುವುದು ಒಳ್ಳೆಯದಲ್ಲ. ವಿವಿಧ ಆಶಾಪಾಶಗಳಿಗೆ ಒಳಗಾಗಿ, ಜನರು ಅಂತಹ ಛತ್ರಗಳಿಗೆ ಧನ ಸಹಾಯ ಮಾಡಿರುತ್ತಾರೆ. ಆದ್ದರಿಂದ ನಾಲ್ಕಾರು ಮನೆಗಳಿಂದ ಮಿತವಾಗಿ ಬೇಡಿತರುವುದು ಶ್ರೇಯಸ್ಕರ. ಯಾವುದೇ ಆಸೆಯ ಸೋಂಕು ಅದಕ್ಕಿರುವುದಿಲ್ಲ.

**ಶೀಲಸಂವರ್ಧನೆ:** ಒಬ್ಬನು ತನ್ನ ಶೀಲವನ್ನು ಪರಿಶುದ್ಧಗೊಳಿಸಿ ಕೊಂಡ ಹೊರತು, ಇತರರ ಸೇವೆಯನ್ನಾಗಲಿ, ದೇಶದ ಸೇವೆಯ ನ್ನಾಗಲಿ ಮಾಡಲಾರನು. ಯಾರು ತಮ್ಮ ಸಮಸ್ಯೆಯನ್ನು ಬಗೆಹರಿಸ ಲಾರರೋ ಅವರಿಂದ ಇತರರಿಗೆ ಹೆಚ್ಚೇನೂ ಸಹಾಯವಾಗದು.

**ಪುಣ್ಯಸಂಪಾದನೆ:** ಸಾಧುಸಂನ್ಯಾಸಿಗಳು ಗೃಹಸ್ಥರಿಂದ ಏನನ್ನಾ ದರೂ ಸ್ವೀಕರಿಸಿದರೆ, ಅವರಿಗೆ ತಮ್ಮ ಪುಣ್ಯದಲ್ಲಿ ಕೊಂಚಭಾಗ ಹರಿದುಹೋಗುತ್ತದೆ. ಆದ್ದರಿಂದ ಅವರು ತಮ್ಮ ಭಕ್ತರಿಗೆ ಕೊಟ್ಟ ಮೇಲೂ ತಮಗೊಂದಿಷ್ಟು ಉಳಿಯುವಷ್ಟು ಪುಣ್ಯವನ್ನೂ ಸಂಪಾ ದನೆ ಮಾಡಬೇಕು. ಸಾಧನೆಗೆ ಸಮಯವೇ ಸಿಗುವುದಿಲ್ಲ ಎಂದು ಹೇಳುತ್ತಾರೆ. ಆದರೆ ಸಾಧಕ ಬ್ರಹ್ಮಚಾರಿಗಳು ಮಾತ್ರ ಹಾಗೆ ಹೇಳ ಬಾರದು. ಅವರು ಲೌಕಿಕ ಮತ್ತು ಆಧ್ಯಾತ್ಮಿಕ ಕೆಲಸಗಳೆರಡನ್ನೂ ಒಟ್ಟಿಗೆ ಮಾಡಬೇಕು. ಸಾಧನೆಯ ಮೇಲೆ ಮನಸ್ಸಿರುವವರು ಅದನ್ನು ಎಲ್ಲ ಸ್ಥಿತಿಯಲ್ಲಿಯೂ ಮಾಡಿಯೇ ತೀರುತ್ತಾರೆ.

**ಹೀನ ಆಲೋಚನೆಗಳ ಉಚ್ಚಾಟನೆ:** ಕಾಮಾದಿಗಳನ್ನು ಗೆಲ್ಲು ವುದೇ ಮಹಾ ತಪಸ್ಸು. ಪ್ರಾಪಂಚಿಕರು ಯಾವಾಗಲೂ ಅಸಾಧು ಕರ್ಮಗಳಲ್ಲಿ ನಿರತರಾಗಿರುವುದನ್ನು ನೋಡುವಾಗ ಸಾಧಕ ಬ್ರಹ್ಮಚಾರಿಗಳ ಮನಸ್ಸಿನಲ್ಲಿ ಯಾವಾಗಲಾದರೊಮ್ಮೆ ಹೀನ ಆಲೋಚನೆಗಳು ಎದ್ದುಕೊಂಡರೆ, ಅದೇನೂ ಮಹಾಪಾಪವಲ್ಲ. ಅದನ್ನು ಆಗಿಂದಾಗಲೇ ಹೊರದೂಡಿಬಿಟ್ಟರೆ ಸಾಕು, ಎಲ್ಲವೂ ಸರಿಯಾಗುತ್ತದೆ.

**ಇಟ್ಟಾಂಗೆ ಇರುವೆನೋ:** ಸಾಧಕರು ಗಾಳಿಗೆ ತಾರಾಡುವ ತರಗೆಲೆ ಯಂತಿರಬೇಕು. ದೇವರು ಎಲ್ಲಿ ಇಟ್ಟರೂ ಸಮಾಧಾನದಿಂದಿರ ಬೇಕು. ತಮ್ಮ ಸ್ವಂತ ಇಚ್ಛೆಯೆಂಬುದೇನೂ ಇಲ್ಲದಿರಬೇಕು.

**ಲೌಕಿಕ ಗ್ರಂಥಗಳ ಅಪಾಯ:** ಕೇವಲ ಲೌಕಿಕ ಗ್ರಂಥಗಳನ್ನು ಓದಿ ದರೆ ಅಹಂಕಾರ ಹೆಚ್ಚುತ್ತದೆ. ಅವರಲ್ಲಿ ಹೀನಗುಣಗಳನ್ನು ಪ್ರಚೋ ದಿಸುತ್ತದೆ. ಅವರನ್ನು ದೇವರಿಂದ ವಿಮುಖರನ್ನಾಗಿ ಮಾಡುತ್ತವೆ. ಒಂದು ಗ್ರಂಥವು ಎಷ್ಟೇ ಮನೋರಂಜಕವಾಗಿದ್ದರೂ ದೇವರ ಮೇಲೆ ಶ್ರದ್ಧಾಭಕ್ತಿಗಳನ್ನು ಹುಟ್ಟಿಸದಿದ್ದರೆ, ಅದರಿಂದ ಕೊನೆಗೆ

ದುಃಖವೇ ಪ್ರಾಪ್ತವಾಗುತ್ತದೆ. ಐಶ್ವರ್ಯವೂ ಇಂತಹ ಅಪಾಯಕ್ಕೆ ದಾರಿ. ಹಣದಿಂದ ಒಳ್ಳೆಯದಕ್ಕಿಂತ ಹಾನಿಯೇ ಹೆಚ್ಚು.

**ಅತಿಬುದ್ಧಿ ಅಪಾಯಕಾರಿ:** ಮನುಷ್ಯರಲ್ಲಿ ಕೆಲವರು ತಾವೇ ತುಂಬಾ ಬುದ್ಧಿವಂತರೆಂದು ಭಾವಿಸುತ್ತಾರೆ. ಅಂತಹವರು ಕೊನೆಗೆ ಮೋಸಹೋಗುತ್ತಾರೆ. ಅವರು ಕಾಗೆಯ ಹಾಗೆ. ಕಾಗೆಯು ತನ್ನನ್ನು ನಾನು ತುಂಬಾ ಬುದ್ಧಿವಂತ ಎಂದು ತಿಳಿದುಕೊಳ್ಳುತ್ತದೆ ಯಂತೆ. ಆದರೇನು, ಅದು ಸುಖವೆಂದರೆ ಅವು ಎಲಚಿಹಣ್ಣಿಗೆ ಸಮ. ಬರೀ ಸಿಪ್ಪೆ ಮತ್ತು ಬೀಜ ತಿಂದರೆ ಹೊಟ್ಟೆನೋವು, ಹುಳಿ ತೇಗು ಕಟ್ಟಿಟ್ಟ ಬುತ್ತಿ. ಆದ್ದರಿಂದ ಕ್ಷಣಿಕವಾದ ಪ್ರಾಪಂಚಿಕ ಸುಖ ಗಳಿಗಾಗಿ ಭಗವಂತನ ಸಾಕ್ಷಾತ್ಕಾರದಿಂದ ಲಭ್ಯವಾಗುವ ಶಾಶ್ವತ ಸುಖವನ್ನು ಬಲಿಕೊಡಬಾರದು.

**ಸೋಮಾರಿತನವೆಂಬ ಮಾರಿ:** ಸೋಮಾರಿತನದಿಂದ ಯಾವ ಸಾಧನೆಯೂ ಆಗುವುದಿಲ್ಲ. ಯಾರಾದರೂ ನಮಗೆ ರುಚಿಕರ ವಾದ ಆಹಾರವನ್ನು ತಂದುಕೊಟ್ಟರೆ, ಅದನ್ನು ಅವರೇ ನಮ್ಮ ಬಾಯಿಗೂ ಇಡಲಿ ಎಂದು ನಾವು ಬಯಸುತ್ತೇವೆ.

**ಪ್ರಜ್ವಲಿಸುವ ವೈರಾಗ್ಯ:** ಭಗವಂತನನ್ನು ಕುರಿತ ಚಿಂತನೆ ಹೃದಯ ದಲ್ಲಿ ನೆಲೆಯೂರಬೇಕಾದರೆ, ವೈರಾಗ್ಯವೆಂಬ ಅಗ್ನಿ ಸದಾ ಪ್ರಜ್ವಲಿಸುತ್ತಿರಬೇಕು. ಈ ಜಗತ್ತು ನಮ್ಮ ಶಾಶ್ವತ ನಿವಾಸ ವಲ್ಲ, ಇದು ಕೆಲವು ದಿನಗಳ ಮಟ್ಟಿಗೆ, ತಾತ್ಕಲಿಕವಾಗಿ ತಂಗಿ ಹೋಗುವ ಸ್ಥಳ ಎಂಬ ಭಾವನೆ ಹೃದಯಾಂತರಾಳದಲ್ಲಿರಬೇಕು.

**ಮನುಷ್ಯರಾಗುವ ಬಗೆ:** ಭಗವಂತನ ದರ್ಶನಕ್ಕೆ ತ್ಯಾಗವಲ್ಲದೆ ಬೇರೆ ಮಾರ್ಗವೇ ಇಲ್ಲ. ತ್ಯಾಗವೆಂದರೆ ಎಲ್ಲ ಇಂದ್ರಿಯಸುಖ ಗಳನ್ನೂ ಈ ಜೀವನದಲ್ಲಿ ತ್ಯಜಿಸುವುದು ಎಂದೇ ಅರ್ಥ. ಹೇ, ದೇವ, ನನಗೆ ಯಾವುದೂ ಒಳ್ಳೆಯದು, ಯಾವುದು ಕೆಟ್ಟದು ಎಂಬುದು ತಿಳಿಯದು. ನಾನು ನಿನ್ನ ಸೇವಕ, ನಿನ್ನ ಇಚ್ಛೆ ಯಿದ್ದಂತಾಗಲಿ ಎಂದು ಭಗವಂತನ ಪಾದಕಮಲಗಳಲ್ಲಿ ಶರಣು ಹೊಂದಿ, ಪ್ರೇಮದಿಂದ ಉನ್ನತ್ತರಾಗಬೇಕು. ಆಗಲೇ ನಾವು ಯೋಗ್ಯರೀತಿಯಲ್ಲಿ ಮನುಷ್ಯರಾಗುವುದು ಸಾಧ್ಯವಾಗುತ್ತದೆ.

**ಮನವನಿಲ್ಲಿಸುವುದು ಬಹು ಕಷ್ಟ:** ಮನಸ್ಸು ಸಾಸುವೆ ಕಾಳಿನ ಪೊಟ್ಟಣವಿದ್ದಂತೆ. ಚೆಲ್ಲಿಹೋದರೆ ಆ ಕಾಳುಗಳನ್ನೆಲ್ಲ ಆರಿಸಿಕೊಳ್ಳು ವುದು ಹೇಗೆ ಕಷ್ಟವೋ, ಹಾಗೆಯೇ ವಯಸ್ಸಾದ ಮೇಲೆ ಮನಸ್ಸು ಹೆಚ್ಚುಹೆಚ್ಚು ಚಂಚಲವಾಗುತ್ತದೆ. ಅದನ್ನು ಏಕಾಗ್ರಗೊಳಿಸಿಕೊಳ್ಳು ವುದು ಆಗ ದುಸ್ತರವಾಗುತ್ತದೆ.

**ಮನವೆಂಬ ಕಾವಲುಗಾರ:** ಶ್ರೀಮಂತರ ಮನೆಬಾಗಿಲಿನಲ್ಲಿ ಒಬ್ಬ ಕಾವಲುಗಾರನಿರುತ್ತಾನೆ. ಕಳ್ಳರು, ದನಕುರಿಗಳು ನುಗ್ಗದಂತೆ ಅವನು ನೋಡಿಕೊಳ್ಳುತ್ತಾನೆ. ಶರೀರವೆಂಬ ಮನೆಗೆ ಮನವೇ ಕಾವಲುಗಾರ. ಕೆಟ್ಟ ಆಲೋಚನೆಗಳು ನುಸುಳದಂತೆ ಕಾವಲಿದ್ದರೆ ಸಾಕು.

**ಕನಸಿನಲ್ಲಿ ಸ್ತ್ರೀದರ್ಶನ :** ಸಂನ್ಯಾಸಿಯು ಸ್ತ್ರೀಯರನ್ನು ಕಣ್ಣಿಟ್ಟು ನೋಡಲಾಗದು. ನೋಡಿದರೆ, ಅವರ ಚಿತ್ರ, ಮನಸ್ಸಿನಲ್ಲಿ ನಿಂತು ಬಿಡುತ್ತದೆ. ಆಗ ನಾವು ಮನಸ್ಸಿನಲ್ಲಿಯೇ, ಅದರ ಅರಿವಿಲ್ಲ ದೆಯೇ, ಅದನ್ನು ಭೋಗಿಸುತ್ತೇವೆ. ಸಾಧುವು ಕನಸಿನಲ್ಲಿ ಸ್ತ್ರೀಯ ರನ್ನು ನೋಡಿದರಾಗಲಿ, ಸ್ವಪ್ನ ಸ್ಖಲನವಾದರಾಗಲಿ, ಪಾಯಶ್ಚಿತ್ತ ವಾಗಿ ಮರುದಿನ ಅಲ್ಪಾಹಾರ ಅಥವಾ ಉಪವಾಸ ಮಾಡಬೇಕು. ತುಂಬಾ ಜಪ ಮಾಡಬೆಕು.

**ವಿದ್ಯೆಯನ್ನು ರೂಢಿಸಬೇಕು:** ದೇವರು ಮನುಷ್ಯನಿಗೆ ವಿದ್ಯೆ ಯನ್ನೂ ಕೊಟ್ಟಿದ್ದಾನೆ, ಅವಿದ್ಯೆಯನ್ನೂ ಕೊಟ್ಟಿದ್ದಾನೆ. ವಿದ್ಯೆ ಎಂದರೆ ನಿತ್ಯಾನಿತ್ಯವಸ್ತುವಿವೇಕ ಮತ್ತು ತ್ಯಾಗ. ಅವಿದ್ಯೆ ಎಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ. ಇವು ಮಾನವನನ್ನು ದಾನವನ್ನಾಗಿಸುತ್ತವೆ. ಆದ್ದರಿಂದ ವಿದ್ಯೆಯನ್ನು ರೂಢಿಸಿ, ಅವಿದ್ಯೆಯನ್ನು ನಾಶಗೊಳಿಸಬೇಕು.

**ಪರಮಹಂಸರು ಮತ್ತು ವಿವೇಕಾನಂದರು:** ಸಾಧಕರು ತಮ್ಮ ಕಾಲವನ್ನೆಲ್ಲ ಶ್ರೀರಾಮಕೃಷ್ಣ ಪರಮಹಂಸರ, ಸ್ವಾಮಿ ವಿವೇಕಾ ನಂದರ ಜೀವನ ಸಂದೇಶ ಮತ್ತು ಅವರು ನಮಗೆ ಕೊಟ್ಟಿರುವ ಸಲಹೆ – ಇವನ್ನು ಸ್ಮರಿಸುವುದರಲ್ಲಿಯೇ ಕಳೆಯಬೇಕು. ತಾವು ಮಾಡುವ ಕೆಲಸಗಳೆಲ್ಲ ಅವರಿಗಾಗಿ ಎಂಬ ಭಾವನೆ ಅಂತರಾಳದಲ್ಲಿ ನೆಲೆಯೂರಬೇಕು. ನೀವು ಮಾಡುತ್ತಿರುವ ಕೆಲಸಕ್ಕೂ ಶ್ರೀರಾಮ ಕೃಷ್ಣ–ವಿವೇಕಾನಂದರಿಗೂ ಏನೇನೂ ಸಂಬಂಧವಿಲ್ಲ ಎಂದು ಕೆಲ ವರು ಶ್ರದ್ಧೆ ಕೆಡಿಸಲು ಹೇಳುತ್ತಾರೆ. ಆದರೆ ಅದಕ್ಕೆ ಕಿವಿಗೊಡ ಬಾರದು.

**ಸುಧೆಯಂದರೆ ಅಮೃತ:** ಹೀಗೆ **'ಬ್ರಹ್ಮಾನಂದ ವಚನಸುಧೆ'** ಬ್ರಹ್ಮಾನಂದಕ್ಕೆ ದಾರಿ ತೋರುವ ಅಪೂರ್ವ ಕೈದೀವಿಗೆ. ಇದು ನೂರು ಪುಸ್ತಕಗಳನ್ನೋದಿ, ಅವುಗಳ ಸಾರದಿಂದ ನಿರ್ಮಿಸಿದ ನೂರೊಂದನೆಯ ಪುಸ್ತಕವಲ್ಲ. ಭಗವದ್ದರ್ಶನದಿಂದ ಉಂಟಾದ ಅನುಭವಗಳನ್ನು ಕರತಲಾಮಲಕವಾಗಿಸಿಕೊಂಡ ಲೋಕ ಗುರು ವೊಬ್ಬರ ಬೋಧನೆಯ ಸಾರಸರ್ವಸ್ವವಿದು. ಅಮೃತದ ರುಚಿ ಎಂದಿಗೂ ಕುಂದುವುದಿಲ್ಲ. ಈ ಗ್ರಂಥದ ಮಹಿಮೆಯಾದರೂ ಅಷ್ಟೆ: ಅಜರಾಮರ, ದಿಗಂತವಿಶ್ರಾಂತ. 

**''ತೀವ್ರ ವೈರಾಗ್ಯ ಉಂಟಾದರೆ ಆತನನ್ನು ಪಡೆಯ ಬಹುದು. ಯಾರನ್ನೇ ಆಗಲಿ ನೀರಿನೊಳಕ್ಕೆ ಅದುಮಿ ಇಟ್ಟಾಗ ಹೇಗೆ ಆತನ ಪ್ರಾಣ ಒಂದು ಗುಟುಕು ಉಸಿರಿ ಗಾಗಿ ಒದ್ದಾಡುವುದೊ, ಅದೇ ರೀತಿಯಾಗಿ ಪ್ರಾಣ ಭಗವಂತನಿಗಾಗಿ ಕಾತರಿಸುತ್ತಿದ್ದರೆ ಆಗ ಆತನ ಸಾಕ್ಷಾತ್ಕಾರ ಪಡೆಯಬಹುದು.''**

*– ಶ್ರೀರಾಮಕೃಷ್ಣ*



# ಸಾಧನೆಯ ಮಾರ್ಗದರ್ಶಿ: ಗುರುವಿನೊಡನೆ ದೇವರಡಿಗೆ

ಮಾತಾ ತ್ಯಾಗಮಯೀ

ಸ್ವಾಮಿ ವಿವೇಕಾನಂದರಿಂದ 'ಮಹಾಪುರುಷ'ರೆಂದೇ ಕರೆಯಲ್ಪಟ್ಟ ಸ್ವಾಮಿ ಶಿವಾನಂದರು ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲೊಬ್ಬರು. ರಾಮಕೃಷ್ಣ ಮಹಾಸಂಘದ ಎರಡನೇ ಅಧ್ಯಕ್ಷರಾಗಿದ್ದ ಅವರು ನಡೆಸಿದ ಸಂಭಾಷಣೆಗಳ ಸಂಕಲನವೇ 'ಗುರುವಿನೊಡನೆ ದೇವರೊಡನೆ.' ಕುವೆಂಪು ಅವರ ಅನುವಾದದೊಂದಿಗೆ ಅಸಾಧಾರಣ ಆಧ್ಯಾತ್ಮಿಕತೆಯಿಂದ ತುಂಬಿ ತುಳುಕಾಡುತ್ತಿದೆ, ಈ ಗ್ರಂಥ. ಇದನ್ನು ಪರಿಚಯಿಸಿರುವ ಮಾತಾಜಿಯವರು ಚಳ್ಳಕೆರೆಯಲ್ಲಿರುವ 'ಶ್ರೀಶಾರದಾಶ್ರಮ'ದ ಮುಖ್ಯಸ್ಥರಾಗಿದ್ದಾರೆ. ಇವರು ಉತ್ತಮ ವಾಗ್ಮಿಗಳು ಮತ್ತು ಬರಹಗಾರರು.

ಶ್ರೀ ರಾಮಕೃಷ್ಣರ ಅಪೂರ್ವ ತಪೋಮಯ ಜೀವನವೃಕ್ಷವು ನೀಡಿದ ಅತ್ಯುತ್ತಮ ಫಲಪುಷ್ಪಗಳಲ್ಲಿ ಶ್ರೀಸ್ವಾಮಿ ಶಿವಾನಂದಜಿಯವರು ಒಬ್ಬರು. ಒಮ್ಮೆ ಅವರು ಮಠದ ಸಂನ್ಯಾಸಿಯೊಬ್ಬರನ್ನು ಕುರಿತು ಹೇಳಿದರು, ''ನೀನು ಯಾವ ಶಾಸ್ತ್ರಗಳನ್ನು ಓದುತ್ತಿದ್ದೀಯ? ನೀನು ನಮ್ಮ ಜೀವನವನ್ನು ಓದಬಲ್ಲೆಯಾ? ನಮ್ಮ ಜೀವನವೇ ಉಪನಿಷತ್ತು. ಶಾಸ್ತ್ರರಹಸ್ಯವನ್ನೆಲ್ಲ ಅಲ್ಲಿಯೇ ಕಾಣುತ್ತೀಯ.'' ಮಹಾಪುರುಷ ಮಹಾರಾಜರ ಜೀವನವೇದವನ್ನು ನಾವು ಓದಲು ಸಮರ್ಥರಾದರೆ ಶಾಸ್ತ್ರಮರ್ಮಗಳೆಲ್ಲ ತಾವಾಗಿಯೆ ಮನೋಗೋಚರವಾಗುತ್ತವೆ. ಸ್ವಾಮಿ ವಿವೇಕಾನಂದರು ಅವ ರನ್ನು ಸುಮ್ಮಸುಮ್ಮನೆ ಮಹಾಪುರುಷ ಎಂದು ಕರೆದರೇನು? ವಿವಾಹಿತರಾದರೂ, ಪತ್ನಿಯ ಜೊತೆಯಲ್ಲಿಯೇ ರಾತ್ರಿಗಳನ್ನು ಕಳೆಯಬೇಕಾಗಿ ಬಂದರೂ, ಅವರ ಸಂಯಮ, ನಿರ್ವಿಕಾರಚಿತ್ತತೆ, ಭಗವತ್ ವ್ಯಾಕುಲತೆ ಒಂದಿನಿತೂ ವಿಚಲಿತವಾಗಲಿಲ್ಲ. ಅಸಂಖ್ಯ ಅಸಂಖ್ಯ ಮುಮುಕ್ಷು ಸಾಧಕ ವೃಂದಕ್ಕೆ ಮಂತ್ರದೀಕ್ಷೆಯನ್ನು ನೀಡಿದ ಸಿದ್ಧಗುರುವಾಗಿಯೂ ಅವರು ಎಷ್ಟು ನಿರಹಂಕಾರ ಭಾವದಿಂದ ಹೇಳುತ್ತಾರೆ, ನಾನು ಯಾರಿಗಾದರೂ ದೀಕ್ಷೆ ಕೊಡುತ್ತೇನೆ ಎಂಬ ಬುದ್ಧಿ ನನ್ನ ಮನಸ್ಸಿನಲ್ಲಿ ಇರುವುದೇ ಇಲ್ಲ. ಶ್ರೀಠಾಕೂರರ ಕೃಪೆಯಿಂದ ನನ್ನಲ್ಲಿ ಗುರುಬುದ್ಧಿ ಯಾವತ್ತೂ ತಲೆಹಾಕಿಲ್ಲ. ಶ್ರೀರಾಮಕೃಷ್ಣರೇ ಜಗದ್ಗುರುವಾಗಿದ್ದಾರೆ. ಅವರೇ ಭಕ್ತರನ್ನು ಇಲ್ಲಿಗೆ ಕಳುಹಿಸುತ್ತಾರೆ, ಅವರೇ ನನ್ನೊಳಗೆ ಕುಳಿತು ಮಂತ್ರವನ್ನು ಹೇಳಿಸುತ್ತಾರೆ. ಇಂತಹ ಎರಡು ಮೂರು ಘಟನೆಗಳು ಅವರ ದೇವಜೀವನದ ಮಹಾಮಹಿಮ ವ್ಯಕ್ತಿತ್ವವನ್ನು ಸಾರಿ ಹೇಳಲು ಬೇಕಾದಷ್ಟಾದವು. ಅವರ ಸಮಗ್ರ ಜೀವನವನ್ನು ಅಧ್ಯಯನ-ಆಲೋಚನ-ಮನನಗೈದಾಗ ಈ ''ಗುರು (ಕುವೆಂಪು ಅವರ ಗುರು, ಎಲ್ಲ ಸಾಕ್ಷಾತ್ಕಾರ ಪ್ರದೀಪ್ತ ಸಂತ ಮಹಾತ್ಮರೂ ನಮಗೆ ಗುರುತುಲ್ಯರು) ನಮ್ಮನ್ನು ದೇವರಡಿಗೆ'' ನಮ್ಮನ್ನು ಸತ್-ಚಿತ್-ಆನಂದ ಧಾಮಕ್ಕೆ ಕೈ ಹಿಡಿದು ಮುನ್ನಡೆಸುತ್ತಿಹನು ಎಂದು ಅರಿವಾಗಿ ನಮ್ಮ ಹೃದಯ-ಬುದ್ಧಿಗಳು ತುಂಬಿ ಬರುತ್ತವೆ. ನಾವೂ ಆ ಮಹಾಜೀವನವನ್ನು ಮತ್ತೆ ಮತ್ತೆ ಇನ್ನಷ್ಟು ಮತ್ತಷ್ಟು ಧ್ಯಾನಗೈಯಬೇಕು. **ವೀತರಾಗ ವಿಷಯಂ ವಾ ಚಿತ್ತಮ್** (ಪತಂಜಲಿ ಯೋಗ ಸೂತ್ರ ೩೭) - ಮಹಾತ್ಮರ, ವೀತರಾಗಿಗಳಾದ ಸಂತ ಮಹಾತ್ಮರಲ್ಲಿ ನಮ್ಮ ಚಿತ್ತವನ್ನಿಡುವುದರಿಂದ ಅವರ ದಿವ್ಯಗುಣಗಳು, ದಿವ್ಯಶಾಂತಿ ನಮ್ಮ ಜೀವನದಲ್ಲೂ ಕ್ರಮಕ್ರಮೇಣ ಅವತರಿತವಾಗುತ್ತವೆ. ಶ್ರೀ ಕುವೆಂಪು ಭಾಷೆಯಲ್ಲಿ ಹೇಳುವುದಾದರೆ, ''ಓ ಅಲ್ಪವೇ, ಅನಂತದಿಂದ ಗುಣಿಸಿಕೋ; ನೀನ್ ಅನಂತನಾಗುವೆ.'' ಗುರುವೇ ಅನಂತ. ಗುರುಶಕ್ತಿಯೇ ಅನಂತ.

ಮಹಾಪುರುಷ ಮಹಾರಾಜರ ಶಿಷ್ಯರಾದ ಸ್ವಾಮಿ ಅಪೂರ್ವಾನಂದಜಿಯವರು ತಮ್ಮ ಗುರುಸೇವಾವಧಿಯಲ್ಲಿ (೧೯೨೦ ರಿಂದ ೧೯೩೨ರ ವರೆಗೆ) ಬಂಗಾಳಿಯಲ್ಲಿ ಬರೆದ ಸಂವಾದಗಳು **'ಶಿವಾನಂದ ವಾಣಿ'** ಎಂದು ಪ್ರಕಟವಾದವು. ಬಂಗಾಳಿ ಮೂಲವನ್ನು ಪ್ರಧಾನವಾಗಿ ಹಾಗೂ ಆಂಗ್ಲ ಅನುವಾದ - ''For Seekers of God'' ಆ ಗ್ರಂಥವನ್ನು ಅಲ್ಲಲ್ಲಿ ಅನುಸರಿಸಿ ಅನುವಾದಿಸಿದ ಕನ್ನಡಾನುವಾದ **'ಗುರುವಿನೊಡನೆ ದೇವರಡಿಗೆ'** ಎಂದು ಪ್ರಕಟವಾಯಿತು. ಮಹಾಪುರುಷ ಮಹಾರಾಜರಿಂದಲೇ ಮಂತ್ರದೀಕ್ಷಿತರಾದ, ರಾಮಕೃಷ್ಣ-ವಿವೇಕಾನಂದ ಪರಂಪರೆಯ ಇನ್ನು ಕೆಲವು ಹೊತ್ತಿಗೆಗಳನ್ನು ಅನುವಾದಿಸುವಲ್ಲಿ ಕಾರಣೀಕರ್ತರಾದ ರಾಷ್ಟ್ರಕವಿ ಕುವೆಂಪು ಅವರು ಎಂಬುದು ನಮ್ಮ ಭಾಗ್ಯ.

ಎಂತಹ ಸುಂದರ, ಸುಸಂಸ್ಕೃತ ಭಾಷೆ, ಹೆಚ್ಚು ವಿಚಾರ ಕಡಿಮೆ ಶಬ್ದಗಳು. ಎಷ್ಟು ತೂಕದ ಭಾಷೆ, ಎಂತಹ ಘನತರ ಚಿಂತನೆ, ಅನುಭಾವಗಳು. ಗ್ರಂಥದ ನಾಯಕರಿಗೆ ನಮ್ಮ ನಮೋ ನಮಃ ; ಗ್ರಂಥದ ಅನುವಾದಕರಿಗೂ ನಮ್ಮ ನಮೋ ನಮಃ.

ಈ ಗ್ರಂಥವು ಸಾಧಕರಿಗೆ ಮಾರ್ಗದರ್ಶಿ ಎಂದೆನ್ನುವುದರಲ್ಲಿ ಎರಡು ಮಾತಿಲ್ಲ. ಸಾಧಕನು ಮನದ ಚಂಚಲತೆ, ಸೂಕ್ಷ್ಮವಾಸನೆಗಳಿಂದ ಪಾರಾಗಿಭಗವದ್ಭಾವದಲ್ಲಿ ಸ್ಥಿರಮತಿಯಾಗುವಲ್ಲಿ ಸತ್ಸಂಗ, ಸ್ವಾಧ್ಯಾಯಗಳ ಪಾತ್ರ ಅಷ್ಟಿಷ್ಟಲ್ಲ. ''**ಸ್ವಾಧ್ಯಾಯಾನ್ಮಾ ಪ್ರಮದಃ**'' – 'ಸದ್ಗ್ರಂಥಗಳ ಅಧ್ಯಯನದಲ್ಲಿ ಪ್ರಮಾದಗೈಯದಿರು' ಎಂದೇ ಋಷಿಯ ಆಣತಿ. ಜೀವನದಲ್ಲಿ ಅಧ್ಯಯನ ಮಾಡಬೇಕಾದ ಶಾಸ್ತ್ರಗಳು, ಧರ್ಮಗ್ರಂಥಗಳು ಅಸಂಖ್ಯ, ಅಸಂಖ್ಯ. ಜೀವನ ಅಲ್ಪ, ಗ್ರಂಥರಾಶಿ ಅಗಾಧ. ಅವನ್ನು ಓದಿಯೂ ಅನುಭವಜ್ಞಾನವಿಲ್ಲದೆ '**ಅವಿಜ್ಞಾತೇ ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ**' *(ವಿವೇಕಚೂಡಾಮಣಿ, ೫೯)* ಅವುಗಳಿಂದ ಪ್ರಯೋಜನವಿಲ್ಲ. ಅದಕ್ಕಾಗಿ ಸ್ವಾಮಿ ವಿವೇಕಾನಂದರು ತಮ್ಮ 'ರಾಜಯೋಗ' ಕೃತಿಯಲ್ಲಿ ಹೇಳಿರುವಂತೆ, ''ಸಾಧಕನು ಸಾಕ್ಷಾತ್ಕಾರ ಪಡೆದ ವ್ಯಕ್ತಿಗಳು ಬರೆದ ಗ್ರಂಥಗಳನ್ನಷ್ಟೇ ಅಧ್ಯಯನ ಮಾಡಬೇಕು.''[೧] ಈ ಸಾಕ್ಷಾತ್ಕಾರದ ಸಂಸ್ಪರ್ಶದಿಂದ ಪೂತಗೊಂಡ ಗ್ರಂಥಗಳ ಸರಣಿಯಲ್ಲಿ, ಅದರಲ್ಲೂ ರಾಮಕೃಷ್ಣ ಪರಂಪರೆಗೆ ನಿಷ್ಠನಾದ ಸಾಧಕನ 'ಸ್ವಾಧ್ಯಾಯಜ್ಞಾನಯಜ್ಞದಲ್ಲಿ', ಸಾಧನಾ ಮಾರ್ಗದಲ್ಲಿ '**ಗುರುವಿನೊಡನೆ ದೇವರಡಿಗೆ**' ಗ್ರಂಥ ಪ್ರಮುಖವಾದುದು. ಸ್ವಾಮಿ ರಾಮಕೃಷ್ಣಾನಂದಜಿಯವರು ಹೇಳುತ್ತಾರೆ, ''ಶ್ರೀರಾಮಕೃಷ್ಣರನ್ನು ನೀವು ಅವತಾರ ಎಂದು ಕರೆಯುತ್ತೀರಿ. 'ಅವತರಣ' ಅರ್ಥದ ಯತ್ಕಿಂಚಿತ್ ಕಲ್ಪನೆಯಾದರೂ ನಿಮಗಿದೆಯೆ? ಸ್ವಾಮಿ ವಿವೇಕಾನಂದರ ಜೀವನ + ಅವರ ಕೃತಿ ಶ್ರೇಣಿ+ ಶ್ರೀರಾಮಕೃಷ್ಣರ ಎಲ್ಲ ಸಂನ್ಯಾಸಿ ಶಿಷ್ಯರ ಜೀವನ + ಅವರ ಬೋಧನೆ, ವಾಣಿಗಳು + ಅನಂತ = ಶ್ರೀರಾಮಕೃಷ್ಣಾವತಾರ.''[೨] ಈ ಹಿನ್ನೆಲೆಯಲ್ಲೂ ನಾವು '**ಗುರುವಿನೊಡನೆ ದೇವರಡಿಗೆ**' ಕೃತಿಯನ್ನು ನಮ್ಮದಾಗಿಸಿಕೊಳ್ಳಬೇಕಾಗಿದೆ.

ಈ ಗ್ರಂಥದಲ್ಲಿ ನಾವು ಸಿದ್ಧಾಂತ ಪ್ರತಿಪಾದನೆಗಿಂತ, ತತ್ತ್ವ ವಿಮರ್ಶೆಗಿಂತ ಸಾಧನೆಗೆ ಸಂಬಂಧಿಸಿದ, ಅನುಷ್ಠಾನ ಪ್ರಧಾನವಾದ ಮಾತುಗಳನ್ನೇ ನೋಡುತ್ತೇವೆ. ಈ ಗ್ರಂಥದಲ್ಲಿ ಮುಖ್ಯವಾಗಿ–

– ಸಾಧನೆ ಮಾಡಲು ಇಚ್ಛೆ, ಆದರೆ ಮನಸ್ಸು ನಿಲ್ಲುತ್ತಿಲ್ಲ; ಜಪ, ಧ್ಯಾನ, ಸತ್ಸಂಗಗಳನ್ನು ಮಾಡುತ್ತಲಿದ್ದರೂ ಭಗವದನುರಾಗ, ಪೂರ್ಣ ಶರಣಾಗತಿ ಬರುತ್ತಲಿಲ್ಲ ಎಂಬಿತ್ಯಾದಿಯಾಗಿ ಸಾಧಕರು ಪದೇ ಪದೇ ಕೇಳುವ ಪ್ರಶ್ನೆಗಳಿಗೆ ಉತ್ತರ.

–ಪ್ರಾರ್ಥನೆಯ ಅಗತ್ಯ, ಅದರ ಪ್ರಾಮುಖ್ಯತೆ, ಧ್ಯಾನ ಜಪದ ಮಹಿಮೆ, ವ್ಯಾಕುಲತೆಯೇ ಸಾರವಸ್ತು.

–ಶ್ರೀರಾಮಕೃಷ್ಣ, ಶ್ರೀಮಾತೆಯವರು, ಸ್ವಾಮೀಜಿಯವರ ಕುರಿತಾದ ತಮ್ಮ ಸ್ಮೃತಿಗಳು, ತಮ್ಮ ಗುರುಭಾಯಿಗಳ ಕುರಿತಾದ ಸ್ಮೃತಿಗಳು.

–ಶ್ರೀರಾಮಕೃಷ್ಣಾವತಾರದ ಅಗಾಧ ಶಕ್ತಿ, ಶ್ರೀರಾಮಕೃಷ್ಣ ಮಹಾಸಂಘದ ಪರಿಶುದ್ಧ ಮಹಿಮೆ. ಶ್ರೀರಾಮಕೃಷ್ಣರ, ಶ್ರೀಮಾತೆಯವರ, ಸ್ವಾಮೀಜಿಯವರ ಜನ್ಮದಿನ ಸಾಮಾನ್ಯ ದಿನ ಅಲ್ಲವೇ ಅಲ್ಲ, ಬೇಲೂರು ಮಠದ ಮಹತ್ತು.

–ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಮಾತುಗಳು.

–ಕೆಲವು ಸಂಸ್ಕೃತ ಸ್ತೋತ್ರಗಳು ಹಾಗೂ ಬಂಗಾಳಿ ಭಜನೆಗಳ ಹೃದಯಂಗಮ ಕನ್ನಡ ಅನುವಾದ.

–ಮಹಾಪುರುಷ ಮಹಾರಾಜರ ಅತ್ಯಪಾರ ಜೀವದಯೆ, ಜೀವಕಾರುಣ್ಯ ಹಾಗೂ ಅಭಯವಾಣಿಗಳು.

–ಅವರ ಭಾವರಾಜ್ಯದಾಳದ '**ರಾಜಗುಹ್ಯಂ ಪವಿತ್ರಂ ಇದಂ ಉತ್ತಮಮ್**' ಆದ ವಿಶೇಷ ದೃಶ್ಯಗಳು. ಅವರ ಸಮಾಧಿ ಅವಸ್ಥೆಯ ಹಲ-ಕೆಲವು ವರ್ಣನೆಗಳು.

ಹೀಗೆ ಸಾಧನೋಪಯೋಗಿಯಾದ ಹತ್ತು ಹಲವು ಚಿಂತನೆಗಳು, ಅವರ ಅಹೈತುಕ ಲೋಕಸಂಗ್ರಹ ದೃಷ್ಟಿ, ಅವರ ಆಶೀರ್ವಾದ ಭಾವಗಳು ದಾಖಲಿಸಲ್ಪಟ್ಟಿವೆ. ವಚನವೇದದ ಸಾರವನ್ನೇ ಈ ಗ್ರಂಥ ತಿಳಿಯಪಡಿಸುತ್ತದೆಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ತಂದೆ ಹೇಳಿದುದನ್ನೇ ಮಗ ಹೇಳಿರುವುದು. ಮಗ ತಂದೆಯಲ್ಲಿ ತದ್ಗತಪ್ರಾಣನಾಗಿ ಅವನ ಧ್ವನಿಯನ್ನೇ ಪ್ರತಿಧ್ವನಿಸಿದುದು.

ಈ ಗ್ರಂಥದ ಪ್ರಧಾನ ಪಲ್ಲವಿ ''ಪ್ರಾರ್ಥನೆ, ಪ್ರಾರ್ಥನೆ'', ''ಅತ್ತು ಪ್ರಾರ್ಥಿಸು'', ''ಕೃಪೆಗಾಗಿ ಗೋಗರೆ'', ''ಅವನ ಕೃಪಾವರ್ಷವಾಗದೆ ಏನನ್ನೂ ಪಡೆಯಲಾಗದು.'' ಮಹಾಪುರುಷಜಿ ಉದ್ದಕ್ಕೂ ಪ್ರಾರ್ಥನೆಯನ್ನು ಅಷ್ಟೊಂದು ಒತ್ತಿ ಹೇಳುವಾಗ ನಾವು ಒಮ್ಮೆ ನಮ್ಮ ಮನಗಳನ್ನು ಪರೀಕ್ಷಿಸಿ ನೋಡಬೇಕಾಗುತ್ತದೆ. ನಾವು ಪ್ರಾರ್ಥಿಸುತ್ತಿದ್ದೇವೇನು? ಎಷ್ಟು ಹೊತ್ತು? ಎಷ್ಟು ಆಂತರ್ಯದಿಂದ? ಎಷ್ಟು ಪ್ರಾಮಾಣಿಕತೆಯಿಂದ? ಇಲ್ಲಿಯೇ ನಾವು ಗೈಯಬೇಕಾದ ಕೃಷಿ ಬಹಳ ಇರುವಾಗ ಇನ್ನು ಸಂಸಿದ್ಧಿಯ ಮಾತೆಲ್ಲಿ?

ಪ್ರಾರ್ಥನೆಯನ್ನು ಕುರಿತಂತೆ ಮಹಾಪುರುಷಜಿಯವರು ಹೇಳುತ್ತಾರೆ:

''ಹೇ ಕರುಣಾಕರ, ನನ್ನ ಮೇಲೆ ಕೃಪೆದೋರು. ಎಂದು ದಿನ ದಿನವೂ ಅವನನ್ನು ಪ್ರಾರ್ಥಿಸು. ದೇವರಲ್ಲಿ ನೀನು ಮೊರೆಯಿಟ್ಟಷ್ಟು ನಿನ್ನ ಮನಸ್ಸು ನಿರ್ಮಲವಾಗುತ್ತದೆ. ಪರಿಶುದ್ಧ

---

೧. Complete Works of Swami Vivekananda, Vol.1, P.179

೨. God Lived With Them, Page 290

ನಿರ್ಮಲ ಮನಸ್ಸಿನಲ್ಲಿ ಅವನು ಆವಿರ್ಭಾವವಾಗಿ ದರ್ಶನ ನೀಯುತ್ತಾನೆ.'' *(ಗ್ರಂಥದಲ್ಲಿ ಪುಟ ೪)*

''ಬೇಕಾದದ್ದು ಪ್ರಾರ್ಥನೆ. ಹೃದಯ ಸರ್ವಸ್ವವಾದ ಪ್ರಾರ್ಥನೆ. ಪ್ರಾರ್ಥಿಸುವಾಗ ಅಳು. ಅಶ್ರು ನೈವೇದ್ಯವನ್ನು ಅರ್ಪಿಸಿ ಮೊರೆಯಿಡು.'' *(ಪುಟ ೨೧)*

''ಚೆನ್ನಾಗಿ ಅಳಬೇಕಯ್ಯಾ. ಅಳುತ್ತ ಪ್ರಾರ್ಥಿಸು. ಪ್ರಾರ್ಥಿಸು ಅಳು. ಅತ್ಯಂತ ಪ್ರೇಮಸಹಿತವಾಗಿ ಅಳು. ವ್ಯಾಕುಲನಾಗಿ ಅಳು.'' *(ಪುಟ ೩೭೯)*

ಜೀವನದ ಕಷ್ಟ-ದುಃಖ-ಸಮಸ್ಯೆಗಳಿಗೆ ಪರಿಹಾರ ಪ್ರಾರ್ಥನೆ, ಸಾಧನೆಗೆ ಸಂಬಂಧಿಸಿದ ಎಲ್ಲ ಸಂಶಯ ನಿವಾರಣೆಗೆ ಉಪಾಯ ಪ್ರಾರ್ಥನೆ, ಆಧ್ಯಾತ್ಮಿಕ ಉನ್ನತಿಯೊಂದಿಗೆ ಭಗವತ್ಕೃಪಾಪಾತ್ರರಾಗಲು ದಾರಿಯೂ ಪ್ರಾರ್ಥನೆ - ಎಂಬುದು ಮಹಾಪುರುಷಜಿಯವರ ದೃಢವಾಣಿ, ಅನುಭವವಾಣಿ.

ಪ್ರಾರ್ಥನೆಯಿಂದ ಪೂರ್ಣ ಶರಣಾಗತಿ. ಶರಣಾಗತಿ ಜೀವನದ ಸಾರ. ಆಗ ಜೀವನ ಸಾರ್ಥಕ್ಯ. ಶರಣಾಗತಿ ಖಂಡಿತವಾಗಿ ಸುಲಭವಸ್ತುವಲ್ಲ. ಶರಣಾಗತಿ ಖಂಡಿತವಾಗಿ ಸಾಮಾನ್ಯವಸ್ತುವಲ್ಲ. ಮಹಾಪುರುಷಜಿಯವರು ಹೇಳುತ್ತಾರೆ:

''ಶ್ರೀರಾಮಕೃಷ್ಣರಿಗೆ ಸಂಪೂರ್ಣ ಶರಣು ಹೋದವರಿಗೆ ಪುನರ್ಜನ್ಮವಿಲ್ಲ. ಆದರೆ ಆ ಪ್ರಪತ್ತಿ, ಸಮರ್ಪಣ, ಶರಣು ಪೂರ್ಣವಾಗಿರಬೇಕು. ನೈಜಮುಕ್ತಿ ದೊರೆಯಬೇಕಾದರೆ ಸಂಪೂರ್ಣ ಸಮರ್ಪಣೆ ಅತ್ಯಗತ್ಯ.'' *(ಪುಟ ೪೮)*

''ವತ್ಸರಿರ, ಸುಮ್ಮನೆ ಅಲ್ಲಿ ಇಲ್ಲಿ ಏಕೆ ಸುತ್ತುತ್ತೀರಿ? ಶರಣಾಗತರಾಗಿ ಶ್ರೀಠಾಕೂರರ ಬಾಗಿಲಲ್ಲಿಯೇ ಇರಿ. ಮತ್ತೆ ಇನ್ನೇನು ಮಾಡುವುದೂ ಆವಶ್ಯಕವಿಲ್ಲ. ಬೇಕಾದ್ದೊಂದೇ ಆಂತರಿಕ ಶರಣಾಗತಿ.'' *(ಪುಟ ೧೫೪)*

ಶ್ರೀರಾಮಕೃಷ್ಣರನ್ನು ಕುರಿತು ಅವರು ಅಲ್ಲಲ್ಲಿ ಹೇಳುವ ಮಾತುಗಳು, ಉದಾಹರಣೆಗೆ, ''ಆ ಕಿರಿಯೊಡಲ ಚೌಕಟ್ಟಿನಲ್ಲಿ ಬ್ರಹ್ಮಾಂಡರೂಪಿ ಪೂರ್ಣ ಈಶ್ವರನೇ ಲೀಲಾಮಯನಾಗಿದ್ದಾನಲ್ಲ! ಹೊರಗೆ ನರ ಆಕಾರ, ಒಳಗೆ ನಾರಾಯಣ ವಿರಾಟ್ '' *(ಪುಟ ೮೯)*, ''ಇಡೀ ಭರತಖಂಡದ ರಾಷ್ಟ್ರಕುಂಡಲಿನಿಯೇ ಅವರ ಶಕ್ತಿಸ್ಪರ್ಶದಿಂದ ಹೇಗೆ ಸುರುಳಿಬಿಚ್ಚಿ ಎಚ್ಚರಗೊಂಡಿದೆ! ಶತಶತಮಾನಗಳಿಂದಲೂ ಅಂತಹ ಭಗವದ್ವಿಭೂತಿ ಮರ್ತ್ಯಕ್ಕೆ ಅವತರಿಸಿಲ್ಲ'' *(ಪುಟ ೧೯)* , ''ಶ್ರೀರಾಮಕೃಷ್ಣರು ಎಲ್ಲಕ್ಕಿಂತ ದೊಡ್ಡ ಪವಾಡವನ್ನು-ಜೀವಿಯ ಜನ್ಮಜನ್ಮಾಂತರಗಳ ಸಂಸ್ಕಾರರಾಶಿಯನ್ನು ಒಂದು ಕ್ಷಣದಲ್ಲಿ ಕ್ಷೀಣವಾಗುವಂತೆ ಮಾಡಿ ಮನುಷ್ಯನ ಸಮಗ್ರ ಮನಸ್ಸಿನ ಗತಿಯು ಭಗವನ್ಮುಖಿಯಾಗುವಂತೆ ಪರಿವರ್ತಿಸಿದ್ದಾರೆ. ಮನುಷ್ಯನ ಮನಸ್ಸನ್ನು ತೆಗೆದುಕೊಂಡು ಎರೆಮಣ್ಣಿನೊಡನೆ ಆಟವಾಡುವಂತೆ ಆಟವಾಡುತ್ತಿದ್ದರು. ಅವರ ಸ್ಪರ್ಶಮಾತ್ರದಿಂದ ಮನಸ್ಸಿನ ಎಲ್ಲ ವ್ಯಾಧಿಯೂ ಶಮನವಾಗುತ್ತಿತ್ತು. ಎಂತಹ ವಿರಾಟ್ ಆಧ್ಯಾತ್ಮಿಕ ಶಕ್ತಿಯ ಆಗರವಾಗಿದ್ದರು ಶ್ರೀ ಠಾಕೂರ್! *(ಪುಟ ೩೩೩)* ''- ಇನ್ನೂ ಹಲವು ಮಾತುಗಳು ನಮಗೆ ರಾಮಕೃಷ್ಣರ ಸಿರಿಮಡಿಲಿಗೆ ಬಂದ ನಾವುಗಳೇ ಧನ್ಯರು, ನಾವು ಇನ್ನೂ ಅಧಿಕಾಧಿಕವಾಗಿ ರಾಮಕೃಷ್ಣ ಭಾವವನ್ನು ಬೆಂಕಿಯನ್ನು ಧರಿಸಲು ಪ್ರಯತ್ನಶೀಲರಾಗಬೇಕು ಎಂಬುದನ್ನು ಒತ್ತಿ ಹೇಳುತ್ತದೆ.

ಜಪ ಮತ್ತು ಧ್ಯಾನವನ್ನು ಕುರಿತಂತೆ ತಮ್ಮ ಸಾಧನಾಜೀವನದ ದೀರ್ಘ ಹೋರಾಟದ ಹಿನ್ನೆಲೆಯಿಂದ, ತಮ್ಮ ಅನುಭವದಾಳದ ನೆಲೆಯಿಂದ ಅವರು ಹೇಳುವ ಮಾತಗಳನ್ನು ನಾವು ಮತ್ತೆ ಮತ್ತೆ ಮೆಲುಕು ಹಾಕಿ ಪಾಲಿಸಲೇಬೇಕು. LKG ಯಿಂದ Phd ವರೆಗಿನ ಜಪಕ್ಕೆ ಸಂಬಂಧಿತ ಎಲ್ಲ ಪಾಠಗಳನ್ನು ಎಷ್ಟು ಸುಂದರವಾಗಿ, ಮೆಟ್ಟಿಲು ಮೆಟ್ಟಿಲಾಗಿ ಸೂತ್ರರೂಪದಲ್ಲಿ ಈ ಗ್ರಂಥದಲ್ಲಿ ಪಡೆಯಬಹುದಾಗಿದೆ. ಆ ವಾಕ್ಯವಾಕ್ಯಗಳನ್ನು ನಾವು ಆಲೋಚಿಸಬೇಕು:

''ನಮ್ಮ ಬಳಿ ಇರುವುದೆಲ್ಲ ಒಂದೇ ಉಪದೇಶ-ದೇವರನ್ನು ಮರೆಯಬೇಡಿರಿ. ಅದೇ ಸರ್ವ ಧರ್ಮೋಪದೇಶಗಳ ಸಾರ.'' *(ಪುಟ ೫೯)*

''ನಿಮ್ಮ ದಿನದಿನದ ಕೆಲಸಗಳನ್ನು ಮಾಡಿರಿ. ಆದರೆ ದಿನದ ಕೊನೆಯಲ್ಲಿ ಒಮ್ಮೆಯಾದರೂ ದೇವರನ್ನು ನೆನೆದು ಅವನಿಗೆ ಮೊರೆಯಿಡಿ.'' *(ಪುಟ ೫೯)*

''ನೀನು ಸರಿಯಾಗಿ ಜಪ-ಧ್ಯಾನವನ್ನು ಮಾಡುತ್ತಿದ್ದೀಯೋ? ಅದರಿಂದ ಮಾತ್ರವೇ ನಿನಗೆ ಶಾಂತಿ ಆನಂದ. ಜಪದ ಜೊತೆ ಜೊತೆಯಲ್ಲಿ ಕಾತರಭಾವದಿಂದ ಆತನನ್ನು ಪ್ರಾರ್ಥಿಸು.'' *(ಪುಟ ೯೩)*

''ಭಗವಂತನ ಪರವಾದ ಅಭೀಪ್ಸೆ(ವ್ಯಾಕುಲತೆ) ಇಲ್ಲದಿದ್ದರೆ ಆಧ್ಯಾತ್ಮಿಕ ಪ್ರಗತಿ ಸಾಧ್ಯವಿಲ್ಲ.'' *(ಪುಟ ೬೯)*

''ಪ್ರೇಮಭರದಿಂದ ಅವನ ನಾಮವನ್ನು ಒಮ್ಮೆ ಜಪಿಸಿದರೂ ಸಾಕು, ಮನಸ್ಸು, ಪ್ರಾಣ ಆನಂದಪೂರ್ಣವಾಗುತ್ತವೆ. ಪ್ರೇಮಸಹಿತವಾಗಿ ಒಂದೇ ಒಂದು ಸಾರಿ ಅವನ ಹೆಸರು ಹೇಳಿದರೂ ಸಾಕು, ಲಕ್ಷ ಲಕ್ಷ ಬಾಯಿ ಜಪಕ್ಕಿಂತಲೂ ಹೆಚ್ಚಿನ ಪರಿಣಾಮವಾಗುತ್ತದೆ.'' *(ಪುಟ ೧೨೯)*

''ನೀನು ಎಷ್ಟೆಷ್ಟು ಒಳಕ್ಕೆ ಹೋಗುತ್ತೀಯೋ, ಅಂತರದಿಂದ ಅಂತರತಮ ಪ್ರದೇಶಕ್ಕೆ ಪ್ರವೇಶಿಸುತ್ತೀಯೋ ಅಷ್ಟಷ್ಟು ಹೆಚ್ಚಾಗಿ ಬೆಳಕನ್ನು ಪಡೆಯುತ್ತೀಯ. ಬೆಳಕು ಹೊರಗಡೆ ಎಲ್ಲಿಯೂ ಇಲ್ಲ, ಎಲ್ಲ ಒಳಗಡೆಯೇ, ಎಲ್ಲ ಒಳಗಡೆಯೇ.'' *(ಪುಟ ೧೩೮)*

''ಪ್ರಾರ್ಥನೆಯನ್ನು ಮಾಡುತ್ತ ಮಾಡುತ್ತ ಮನಸ್ಸು ಜಪಧ್ಯಾನದಲ್ಲಿ ಸ್ಥಿರವಾಗಿ ನಿಲ್ಲುತ್ತದೆ. ಆಗ ಆನಂದಾನುಭವವಾಗುತ್ತದೆ. ಜಪ ಮಾಡುವಾಗ ಠಾಕೂರರು ನಿನ್ನ ಕಡೆಗೆ ಸಸ್ನೇಹ ದೃಷ್ಟಿ




ಬೀರುತ್ತಿದ್ದಾರೆ ಎಂದು ಏಕಾಗ್ರಭಾವದಿಂದ ಭಾವಿಸಿಕೋ. ಈ ಭಾವನೆ ಏಕಕಾಲದಲ್ಲಿ ದೀರ್ಘಸ್ಥಾಯಿಯಾಗುವುದೇ ಧ್ಯಾನ.'' *(ಪುಟ ೨೨೨)*

''ಯಾವಾಗಲೂ ಜಪ-ಕೆಲಸ ಮಾಡುವಾಗ ಜಪ, ಮಾತನಾಡುವಾಗ ಜಪ, ಮಲಗುವಾಗ ಜಪ, ಎಲ್ಲ ಸಮಯಗಳಲ್ಲಿಯೂ ಮನಸ್ಸಿನಲ್ಲಿಯೇ ಜಪ ಮಾಡುತ್ತಿರಬೇಕು. ಈ ರೀತಿ ಕೆಲಕಾಲ ಜಪ ಮಾಡುತ್ತಾ ನಮಗೆ ಗೊತ್ತಾಗುತ್ತದೆ, ಮನಸ್ಸಿನ ಒಂದು ಅಂಶ ಸರ್ವಕ್ಷಣವೂ ಜಪ ಮಾಡುತ್ತಲೇ ಇರುತ್ತದೆ. ಒಂದು ಅಂತಃ ಪ್ರವಾಹಿಯಾದ ಸ್ರೋತದಂತೆ ಸರ್ವಾವಸ್ಥೆಗಳಲ್ಲಿಯೂ ಜಪ ಮುಂದುವರಿಯುತ್ತಿರುತ್ತದೆ.'' *(ಪುಟ ೩೭೦)*

ಸೇವೆಯನ್ನು ಕುರಿತಂತೆ ಮಹಾಪುರುಷಜೀ ಹೇಳುತ್ತಾರೆ:

''ಈ ಜಗತ್ತು, ಎಲ್ಲ ಜೀವರಾಶಿಗಳು ಅವನದೆಂದು ಅರಿಯಿರಿ. ಅವನೇ ಕರ್ತ. ನೀವು ಅವನ ದಾಸರು. ಅವನು ಕೃಪೆಯಿಟ್ಟು ನಿಮ್ಮಿಂದ ಅವನ ಜೀವರಾಶಿಗಳಿಗೆ ಎಷ್ಟು ಸೇವೆ ಸಲ್ಲುವಂತೆ ಮಾಡಿದರೆ ಅಷ್ಟು ಮಾತ್ರ ನೀವು ಧನ್ಯರು! ಧ್ಯಾನ ಮಾಡುತ್ತ ನಿಮ್ಮ ಅಹಂಭಾವ ಸಂಪೂರ್ಣವಾಗಿ ಲಯವಾದಾಗ ಉಳಿಯು ವುದು ಕೇವಲ ಅವನೇ. ನಿಮ್ಮ ಮನಸ್ಸು ಈ ಪರಿಪಕ್ವ ಸ್ಥಿತಿಗೆ ಎಂದು ಏರುತ್ತದೆಯೋ ಅಂದು ನಿಜವಾದ ಜನಹಿತ ಕಾರ್ಯ ಪ್ರಾರಂಭವಾಗುತ್ತದೆ.'' *(ಪುಟ ೮೩)*

''ಸಂಸಾರದಲ್ಲಿ ಹೇಗಿರಬೇಕು? ಎಂದು ಅನೇಕ ಸಾರಿ ತಿಳಿಯುವುದೇ ಕಷ್ಟವಾಗುತ್ತದೆ.'' ಎಂದು ಭಕ್ತನೊಬ್ಬನು ತನ್ನ ಸಮಸ್ಯೆಯನ್ನು ಮುಂದಿಟ್ಟಾಗ, ಮಹಾಪುರುಷಜೀಯವರು, ''ಯಾವಾಗ ನಿನ್ನ ಮನದಲ್ಲಿ ನನ್ನದು ಎಂಬ ಭಾವ ಉಂಟಾಗುತ್ತದೆಯೋ ಆಗ ಎಲ್ಲವೂ ಭಗವಂತನದೇ ಎಂಬ ಭಾವವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಸಂಸಾರದಲ್ಲಿ ನಡೆಯಬೇಕು. ಹೆಂಡತಿ, ಮಗ, ಸ್ವಜನರು ಎಲ್ಲರೂ ಭಗವಂತನಿಗೆ ಸೇರಿದ ಜೀವಗಳೇ. ಅವರಿಗೆ ಏನು ಸೇವೆ ಮಾಡುತ್ತಿದ್ದರೂ ನಾರಾಯಣ ಬುದ್ಧಿ ಯಿಂದಲೇ ಮಾಡಿದರೆ ಸಂಸಾರದ ಉಸುಬಿನಲ್ಲಿ ಹೆಚ್ಚಾಗಿ ಸಿಕ್ಕಿ ಬೀಳುವುದಿಲ್ಲ'' ಎಂದು ಭರವಸೆಯನ್ನು ಸಾಂತ್ವನವನ್ನು ತುಂಬುತ್ತಾರೆ.

ಮಾನವತೆಯ ಕುರಿತಾದ ಮಹಾನ್ ದಯೆ, ಕಾರುಣ್ಯ, ಪರದುಃಖಕಾತರತೆ ಅವರ ಜೀವನದ ಹೆಜ್ಜೆ ಹೆಜ್ಜೆಯಲ್ಲಿ ಕಂಡು ಬರುತ್ತದೆ. ಮಹಾಪುರುಷಜೀ ಅದೆಷ್ಟು ಕಡೆಗಳಲ್ಲಿ ಹೇಳುತ್ತಾರೆ, ''ನಮಗಿರುವುದೊಂದೇ ಆಸೆ. ಅದು ಜಗತ್ ಕಲ್ಯಾಣ. ಜನರ ಗೋಳು, ಕಷ್ಟ, ದುಃಖ, ನಷ್ಟಗಳಿಗಾಗಿ ನಾವೆಷ್ಟು ಸಂಕಟಪಡುತ್ತಿದ್ದೇವೆ ಎಂಬುದನ್ನು ನಿನಗೆ ಹೇಗೆ ತಾನೆ ವಿವರಿಸಲಿ?'' ಇದು ಮಹಾತ್ಮರ ಹೃದಯ! ತಮ್ಮ ಬಳಿಬಂದ ಪ್ರತಿಯೊಬ್ಬರ ಹೃದಯಗಳಲ್ಲಿಯೂ ಧೈರ್ಯ-ಸಾಂತ್ವನ-ಭರವಸೆಯನ್ನು ತುಂಬಿದರು. ಎಂತಹ ಪಾಪಿತಾಪಿಗಳಿಗೂ, ನೀಚರಿಗೂ, ಪತಿತರಿಗೂ ತಮ್ಮ ದೀಕ್ಷೆಯ ದ್ವಾರವನ್ನು ತೆರೆದಿಟ್ಟರು. ಅವರೆಲ್ಲರ ಏಳಿಗೆಗಾಗಿ ದಿವಾ-ರಾತ್ರಿಯೂ ಪ್ರಾರ್ಥನೆ-ಧ್ಯಾನಗಳನ್ನು ಮಾಡಿದರು. ಅಂತಹ ಉದಾಹರಣೆಗಳು ಬಹಳ. ಒಂದು ಸಂದರ್ಭದಲ್ಲಿ ಅವರು ಬಹಳಷ್ಟು ಜನರಿಗೆ ದೀಕ್ಷೆಯನ್ನು ಅನುಗ್ರಹಿಸಿದಾಗ ಒಬ್ಬರು, ''ಬಹಳ ಹೊತ್ತು ಒಂದೇ ಸ್ಥಳದಲ್ಲಿ ಕುಳಿತು ದೀಕ್ಷೆಯನ್ನು ನೀಡುವುದರಿಂದ ನಿಮಗೆ ಶ್ರಮವಾಗುವುದಿಲ್ಲವೆ?'' ಎಂದು ಪ್ರಶ್ನಿಸಿದಾಗ ಮಹಾಪುರುಷಜಿ, ''ಅಂತಹ ಹೇಳಿಕೊಳ್ಳುವ ಪ್ರಯಾಸವೇನೂ ಆಗಲಿಲ್ಲ. ಬದಲಾಗಿ ನನಗೆ ತುಂಬ ಸಂತೋಷವಾಯಿತು. ಶ್ರೀ ಠಾಕೂರರ ನಾಮವನ್ನು ಅದೆಷ್ಟು ಕಿವಿಗಳಲ್ಲಿ ಉಚ್ಚರಿಸಿದಂತಾಯಿತು. ಎಷ್ಟು ಜನ ಅವರ ಹೆಸರಿಗಾಗಿ ಇಲ್ಲಿಗೆ ಬರುತ್ತಾರೆ. ಅವರ ಭಕ್ತಿ ವ್ಯಾಕುಲತೆಗಳನ್ನು ನೋಡಿ ನನಗೆ ಸುಮ್ಮನಿರಲಾಗುವುದಿಲ್ಲ. ಎಲ್ಲಿಯವರೆಗೆ ಈ ಶರೀರ ಇರುವುದೋ ಅಲ್ಲಿಯವರೆಗೆ ಜನರಿಗೆ ದೇವರ ಕಥೆ ಹೇಳುತ್ತೇನೆ. ದೇವರ ಹೆಸರು ಕೊಡುತ್ತೇನೆ. *(ಪುಟ ೭೨)* '' ಎಂದರು. ಇನ್ನು ಎಷ್ಟೋ ಬಾರಿ ಅವರೇ ತಮ್ಮ ಸೇವಕರಿಗೆ ಹೇಳಿ ಹೊರಗೆ ಯಾರಾದರೂ ದೀಕ್ಷಾಪ್ರಾರ್ಥಿಗಳು ಇದ್ದಾರೆಯೇ ಎಂದು ಹುಡುಕಿಸಿ ಅವರನ್ನು ಕರೆದು ದೀಕ್ಷೆಯನ್ನು ಅನುಗ್ರಹಿಸುತ್ತಿದ್ದರು. ''ಇಲ್ಲಿಗೆ ಬರುವವರಿಗೆ ಇದೇ ಕೊನೆಯ ಜನ್ಮ'', ''ಕೃಪೆಯೊಂದೇ ನಮಗೆ ಗತಿ'', ''ಚರಣವೇ ಶಾಂತಿಧಾಮ, ಶರಣನೆ ದುಃಖದೂರ!'', ''ಶ್ರೀರಾಮಕೃಷ್ಣ ನಾಮವೆ ಈ ಯುಗದ ಮಹಾಮಂತ್ರ'' ಎಂಬ ಭರವಸೆಯ

ವಾಣಿಗಳನ್ನು ದುಃಖಿತರ ಮನಗಳಲ್ಲಿ ತುಂಬಿ, ದಾರಿ ತಪ್ಪಿದವರಿಗೆ ದೀಪಧಾರಿಯಾಗಿದ್ದರು.

ಅವರು ಸರ್ವದಾ, ಸದಾಕಾಲ ಎಂತಹ ಭಾವಾಪನ್ನರಾಗಿರುತ್ತಿದ್ದರು, ಎಂಬುದೇ ನಮ್ಮ ಧ್ಯಾನಾಭ್ಯಾಸದ ವಸ್ತುವಾಗಬಲ್ಲುದು. ಅವರು ಹೇಳುತ್ತಾರೆ, ''ಶ್ರೀ ಗುರು ಕೃಪೆಯಿಟ್ಟು ನಮಗೆ ಎಷ್ಟೊಂದನ್ನು ತೋರಿಸುತ್ತಿದ್ದಾರೆ ಎಂದು ನಾನು ಯಾರಿಗೆ ಹೇಳಲಿ? ಯಾರಿಗೆ ಹೇಳಲಿ, ತಿಳಿದುಕೊಳ್ಳುವವರೂ ಯಾರಿದ್ದಾರೆ? ಅವರ ವಿಷಯವಾಗಿ(ಶ್ರೀರಾಮಕೃಷ್ಣರ) ಇಲ್ಲಿ (ತಮ್ಮೊಳಗೆ) ಏನೇನು ನಡೆಯುತ್ತಿದೆ ಎಂಬುದನ್ನು ಯಾರಿಗೆ ವಿವರಿಸಲಿ?''

ಒಮ್ಮೆ ಅವರು ಹಾಸಿಗೆಯ ಮೇಲೆ ಮಲಗಿದ್ದರು. ಕೆಲವು ದೇವದೇವಿಯರ ನಾಮಾವಳಿಯನ್ನೂ, ವೇದಾಂತದ ವಾಕ್ಯಗಳನ್ನೂ ದೇವೀಸೂಕ್ತವನ್ನೂ ಹಾಸಿಗೆಯ ಮೇಲೆ ಒರಗಿಕೊಂಡೇ ಹೇಳಿಕೊಂಡರು. ತರುವಾಯ ಎದ್ದು ಕುಳಿತರು, ''ಆಶ್ಚರ್ಯ! ಅದ್ಭುತ! ನನ್ನ ಮನಸ್ಸಿನಲ್ಲಿ ಎಂತಹ ಸೊಗಸಾದ ಚಿಂತಾಪ್ರವಾಹ ಹರಿದಿತ್ತು! ಅಲ್ಲಿ ಶಿವ ಸ್ಥಿರಸ್ಥಿತಿಯಲ್ಲಿದ್ದನು, ತಾಯಿ ಅವನ ಮೇಲೆ ಕುಣಿಯುತ್ತಿದ್ದಳು. ಶಿವನೋ ಚಿರಕಾಲವೂ ಸ್ಥಿರ; ತಾಯಿಯ ನಾಟ್ಯವೋ ಚಿರಕಾಲವೂ ಚಲಿತ. ಒಳಗೆ ಸಂಪೂರ್ಣ ಸ್ಥಿರ. ಹೊರಗೆ ಈ ಲೀಲಾಮಯಿ : ಲೀಲೆ'' – ಎಂದು ತಮ್ಮ ಭಾವದಂತರಾಳದ ಕ್ಷಣಿಕ ನೋಟವನ್ನು ಹೊರಗೆಡಹಿದರು. ಅವರು ೨೪ ಗಂಟೆಯೂ ಚೇತನಜ್ಯೋತಿಯಲ್ಲಿ ಮೀಯುತ್ತಿದ್ದರು. ಅವರು ಉದಕಮಂಡಲದಲ್ಲಿ ಕೆಲವು ದಿನಗಳಿದ್ದಾಗ, ''ಇಲ್ಲಿ ಮನಸ್ಸು ತನ್ನ ಷ್ಟಕ್ಕೆ ತಾನೆ ಅಸೀಮದ ಕಡೆಗೆ ಧಾವಿಸುತ್ತದೆ. ದಿನ ಹೋದಂತೆಲ್ಲ ಅನೇಕಾನೇಕ ಆಶ್ಚರ್ಯಾಶ್ಚರ್ಯಕರ ವ್ಯಾಪಾರಗಳನ್ನು ಕಂಡು ನಾನು ಮುಗ್ಧನಾಗಿದ್ದೇನೆ'' ಎಂದು ಹೇಳಿದರು. ಕಾಶಿಯಲ್ಲಿ ಅವರಿಗೆ ವಿಶ್ವನಾಥನ ದರ್ಶನವೂ ಆಗಿತ್ತು. ತಮ್ಮ ಕೊನೆಯ ದಿನಗಳಲ್ಲಿ ಯಾರು ಬಂದರೂ, ಅವರಿಗೆ ತಾವೇ ಮೊದಲು ಕೈಜೋಡಿಸಿ ಪ್ರಣಾಮವನ್ನು ಮಾಡುತ್ತಿದ್ದರು. ಅವರು ಪ್ರತಿಯೊಬ್ಬರಲ್ಲಿ ನಾರಾಯಣನನ್ನೇ ನೋಡುತ್ತಿದ್ದರು. ''ನಿನ್ನ ಒಳಗೆ ಯಾವ ನಾರಾಯಣ ಇದ್ದಾನೆಯೋ ಆತ ನನಗೆ ಪ್ರತ್ಯಕ್ಷವಾಗಿ ಕಾಣುವುದರಿಂದ ಆತನಿಗೆ ಪ್ರಣಾಮ ಮಾಡುತ್ತೇನೆ. ಠಾಕೂರರು ಯಾವ ಯಾವ ರೀತಿಗಳಿಂದ ಎಂಥೆಂಥ ಭಾವಗಳಿಂದ ಕೃಪೆದೋರುತ್ತಿದ್ದಾರೆ – ಅದನ್ನೆಲ್ಲ ಯಾರಿಗೆ ಹೇಳಲಿ?'' ಎಂದರು *(ಪುಟ ೪೦೭)*. ಈ ಗ್ರಂಥದ ಉದ್ದಕ್ಕೂ ಅವರು ತಮ್ಮ ಅದೆಷ್ಟು ಅತೀಂದ್ರಿಯ ಆಧ್ಯಾತ್ಮಿಕಾನುಭವಗಳನ್ನು ಹೇಳಿಕೊಂಡಿದ್ದಾರೆ, ಆದರೂ ಅವರಿಗೆ ಆದ ಅನುಭವಗಳ ಪ್ರಮಾಣದಲ್ಲಿ ನೋಡಿದರೆ ಅವರು ಹೇಳಿದುದು ಯತ್ಕಿಂಚಿತ್ ಮಾತ್ರ!

ಕೊನೆಯದಾಗಿ ವೇದ–ಉಪನಿಷತ್ತು ಮುಂತಾದ ಶಾಸ್ತ್ರಗಳು ಇರುವುದು rank students ಗಳಿಗಾಗಿ; ಆದರೆ ನಮ್ಮಂತಹ fail students ಗಳಿಗೆ ಪಾಸಾಗಲು ಶಾಸ್ತ್ರಗಳ ಮರ್ಮವನ್ನೇ ಸುಲಭ ಸಹಜವಾಗಿ ತಿಳಿಯಪಡಿಸುವ guide (ಮಾರ್ಗದರ್ಶಿ)ಅತ್ಯಂತ ಅವಶ್ಯಕ. ಈ ಗುರುವಿನೊಡನೆ ದೇವರಡಿಗೆ guideನ್ನು ನಮಗೆ ಅನುಗ್ರಹಿಸಿದವರು ಶ್ರೀರಾಮಕೃಷ್ಣ ಆಶ್ರಮ, ಮೈಸೂರು. ಗ್ರಂಥದ ಬೆಲೆ ಕೇವಲ ರೂ.೯೦. ಒಟ್ಟು ಪುಟಗಳು ೪೪೪. ಹಿಂದೆ ಈ ಗ್ರಂಥವು ಎರಡು ಭಾಗಗಳಲ್ಲಿ ಪ್ರಕಟಿತವಾಗಿತ್ತು. ಇಂದು ಅದರ ೯ನೇಯ ಆವೃತ್ತಿಯು ಸಂಯುಕ್ತ ಕೃತಿಯಾಗಿದೆ.

ಒಮ್ಮೆ ಒಬ್ಬ ಪಂಡಿತ ಸ್ವಾಮಿ ಶಿವಾನಂದಜೀಯವರನ್ನು ಭೇಟಿಯಾಗಲು ಬಂದನು. ಅವನು, ''ನಾನು ತಮ್ಮೊಂದಿಗೆ ಶಾಸ್ತ್ರ ಚರ್ಚೆಗೆಂದು ಬಂದಿರುವೆನು'' ಎಂದನು. ಆಗ ಅವರ ಬಳಿಯಿದ್ದ ಸ್ವಾಮಿ ಓಂಕಾರಾನಂದಜಿಯವರು ಆ ಪಂಡಿತನಿಗೆ ಹೇಳಿದರು, ''ನಿಮಗೆ ಬ್ರಹ್ಮಜ್ಞಾನ ಬೇಕಿದ್ದರೆ ಮಹಾಪುರುಷಜಿಯವರನ್ನು ಕೇಳಿರಿ. ನಿಮಗೆ ಕೇವಲ ಶಾಸ್ತ್ರಚರ್ಚೆ ಬೇಕಿದ್ದರೆ ಅದನ್ನು ನಾನೇ ಮಾಡಬಲ್ಲೆನು.'' [೩]

✤

೩. Life in Indian Monasteries-Swami Bhaskarananda, P. 164

ಗುರುಮಹಾರಾಜ್ ಹೇಳಿದ್ದಾರೆ, 'ಕೃಪೆಯ ಗಾಳಿಯೇನೊ ಸದಾ ಬೀಸುತ್ತಿರುತ್ತದೆ; ನೀನು ಮಾತ್ರ ನಿನ್ನ ಪಟವನ್ನು ಬಿಚ್ಚಬೇಕು.' ಪಟ ಬಿಚ್ಚುವುದೆಂದರೆ ನಿನ್ನ ಸ್ವಂತ ಪ್ರಯತ್ನ . ಏಕಾಂತಿಕ ಅಧ್ಯವಸಾಯ, ಪುರುಷಕಾರ ಬೇಕು – ವಿಶೇಷವಾಗಿ ಸತ್ ಕಾರ್ಯದಲ್ಲಿ, ಸಾಧನೆ ಭಜನೆಯಲ್ಲಿ – ಆತ್ಮಜ್ಞಾನ ಪಡೆಯುವುದಕ್ಕಾಗಿ ಸಿಂಹವಿಕ್ರಮ ಪ್ರಕಾಶಗೊಳಿಸಬೇಕು. ಉದ್ಯಮವಿಲ್ಲದೆ, ಪುರುಷಕಾರವಿಲ್ಲದೆ ಏನೂ ಆಗುವುದಿಲ್ಲ. ಒಮ್ಮೆ ಪಟ ಬಿಚ್ಚಿದೆಯೆಂದರೆ ಕೃಪೆಯ ಗಾಳಿ ತಾನಾಗಿಯೆ ಬೀಸಿಯೆ ಬೀಸುತ್ತದೆ. ಎಲ್ಲಿಯವರೆಗೆ ಮನುಷ್ಯನಿಗೆ ಅಹಂಬುದ್ಧಿ ಇರುವುದೊ, ಅಲ್ಲಿಯವರೆಗೆ ಅಧ್ಯವಸಾಯ ಇರಬೇಕಾಗುತ್ತದೆ.

ಠಾಕೂರರು (ಶ್ರೀರಾಮಕೃಷ್ಣರು) ಮಹಾ ಆಶ್ರಿತವತ್ಸಲರು; ಅವರು ಶರಣಾಗತ ಪಾಲಕರು. ಅವರು ಒಮ್ಮೆ ಯಾರ ಕೈ ಹಿಡಿಯುತ್ತಾರೊ ಅವರಿಗೆ ಈ ಭವಸಮುದ್ರದಲ್ಲಿ ಮುಳುಗಿಹೋಗುವ ಯಾವ ಭಯವೂ ಇಲ್ಲ. ಚಂಡಿಯಲ್ಲಿ ಇದೆ: 'ತ್ವಾಮಾಶ್ರಿತಾನಾಂ ನ ವಿಪನ್ನರಾಣಾಂ ತ್ವಾಮಾಶ್ರಿತಾ ಹ್ಯಾಶ್ರಯತಾಂ ಪ್ರಯಾಂತಿ', 'ನಿನಗೆ ಆಶ್ರಿತರಾದ ಮಾನವರಿಗೆ ವಿಪತ್ತು ಇಲ್ಲ; ಯಾರು ನಿನ್ನ ಆಶ್ರಯ ಪಡೆಯುತ್ತಾರೊ ಅವರು ಎಲ್ಲರಿಗೂ ಆಶ್ರಯಸ್ವರೂಪರಾಗುತ್ತಾರೆ.' ಮನೋವಾಕ್ಕಾಯಗಳಿಂದ ಠಾಕೂರರನ್ನು ಬಿಗಿಯಾಗಿ ಹಿಡಿದುಕೋ; ಅವರು ಭವಬಂಧನದಿಂದ ನಿನ್ನನ್ನು ಮುಕ್ತನನ್ನಾಗಿ ಮಾಡುತ್ತಾರೆ.

–ಸ್ವಾಮಿ ಶಿವಾನಂದ ಮಹಾರಾಜ್ *('ಗುರುವಿನೊಡನೆ ದೇವರಡಿಗೆ' ಗ್ರಂಥದಿಂದ)*



# ಪರಮಾರ್ಥ ಪ್ರಸಂಗ

**ಸ್ವಾಮಿ ರಾಘವೇಶಾನಂದ**

**ರಾಮಕೃಷ್ಣ ಮಹಾಸಂಘದ ಅಧ್ಯಕ್ಷರಾಗಿದ್ದ ಪರಮ ಪೂಜ್ಯ ಸ್ವಾಮಿ ವಿರಜಾನಂದಜಿ ಮಹಾರಾಜ್ ಅವರ ಉಪದೇಶಗಳ ಸಂಕಲನವೇ 'ಪರಮಾರ್ಥ ಪ್ರಸಂಗ.' ಪ್ರತ್ಯಕ್ಷ ಸಾಧನೆಯಿಂದ ದೊರೆತ ಅನುಭವಗಳ ಆಧಾರದಲ್ಲಿ ನೀಡಲಾದ ಈ ಉಪದೇಶಗಳು ಆಧ್ಯಾತ್ಮಿಕ ಜೀವನ ನಡೆಸಬೇಕೆನ್ನುವವರಿಗೆ ಒಂದು ಪಠ್ಯಪುಸ್ತಕದಂತೆ ಇದೆ. ಈ ಕೃತಿಯ ಸಂಕ್ಷಿಪ್ತ ಪರಿಚಯ ಮಾಡಿ ಕೊಟ್ಟಿರುವ ಪೂಜ್ಯ ಸ್ವಾಮೀಜಿಯವರು ಉದಕಮಂಡಲ ರಾಮಕೃಷ್ಣ ಮಠದ ಮುಖ್ಯಸ್ಥರು. ಉತ್ತಮ ವಾಗ್ಮಿಗಳು ಮತ್ತು ಸಂಘಟಕರಾಗಿರುವ ಸ್ವಾಮೀಜಿಯವರು ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ.**

ಈ ಗ್ರಂಥವೊಂದು ಭಗವತ್ಸಾಕ್ಷಾತ್ಕಾರಕ್ಕೆ ಸಾಧಕನಿಗೆ ಒಂದು ಕೈದೀವಿಗೆಯಂತೆ. ಕ್ರಿಸ್ಟೋಫರ್ ಈಷರ್‌ವುಡ್ ಎನ್ನುವ ಪ್ರಖ್ಯಾತ ಲೇಖಕ ಈ ಪುಸ್ತಕದ ಬಗ್ಗೆ ಹೀಗೆ ಹೇಳಿದ್ದಾರೆ, ''ಇದು ಸಾಮಾನ್ಯ ಪುಸ್ತಕಕ್ಕಿಂತ ವಿಶೇಷವಾದದ್ದು – ಅನುಭಾವದ ಬಲದಿಂದ ಉಪದೇಶ ನೀಡಿದ ಬೋಧಕನ, ಮಹಾಪುರುಷನ ನೇರಸಂಪರ್ಕ ಕಲ್ಪಿಸುವಂಥದ್ದು.''

ಇದರ ಕರ್ತೃ ಸ್ವಾಮಿ ವಿರಜಾನಂದರು. ಇವರ ಜೀವನವೇ ಭಗವತ್ಸಾಕ್ಷಾತ್ಕಾರ ಪಡೆಯಲಿಚ್ಛಿಸುವ ಸಾಧಕರಿಗೆ ಒಂದು ಸ್ಫೂರ್ತಿ. ಅವರು ಎಷ್ಟು ಅದೃಷ್ಟವಂತರಾಗಿದ್ದರೆಂದರೆ ಶ್ರೀಮಾತೆ ಶಾರದಾದೇವಿಯವರಿಂದ ಮಂತ್ರದೀಕ್ಷೆ ಪಡೆದಿದ್ದರು. ಸ್ವಾಮಿ ವಿವೇಕಾನಂದರಿಂದ ಸಂನ್ಯಾಸದೀಕ್ಷೆ ಪಡೆದಿದ್ದರು ಮತ್ತು ರಾಮಕೃಷ್ಣ ಮಹಾಸಂಘದ ೬ನೆಯ ಅಧ್ಯಕ್ಷರಾಗಿದ್ದರು. ಅವರ ಜೀವನ ಅವರ ಉಪದೇಶಗಳಷ್ಟೇ ಒಬ್ಬ ಸಾಧಕನಿಗೆ ಅವನ ಜೀವನವನ್ನು ಸರಿಯಾದ ರೀತಿಯಲ್ಲಿ ರೂಪಿಸಿಕೊಳ್ಳುವುದಕ್ಕೆ ಮಾರ್ಗದರ್ಶಕವಾಗುತ್ತದೆ. ಆದುದರಿಂದ ಮೊದಲು ಅವರ ಜೀವನವನ್ನು ಸಂಕ್ಷಿಪ್ತವಾಗಿ ಅಧ್ಯಯನ ಮಾಡಿ, ನಂತರ ಅವರ ಉಪದೇಶಗಳನ್ನು ನೋಡೋಣ.

ಸಾಧಕರು ಅವರ ಜೀವನದಿಂದ ಕಲಿಯಬೇಕಾದ ಮೊದಲ ಪಾಠವೆಂದರೆ, ಸ್ವಾಮಿ ವಿವೇಕಾನಂದರು ವಿರಜಾನಂದರಿಗೆ ಕೊಟ್ಟ ಮೊದಲ ಉಪದೇಶ. ಸ್ವಾಮೀಜಿ ಅವರಿಗೆ ಹೇಳುತ್ತಾರೆ, ''ನೋಡು, ಕೇವಲ ನಿನ್ನ ಮುಕ್ತಿಯನ್ನೇ ಹುಡುಕುವೆಯಾದರೆ ಅದು ವ್ಯರ್ಥ. ಇತರರ ಮುಕ್ತಿಗಾಗಿಯೂ ಒಂದು ವೇಳೆ ನೀನು ಕೆಲಸ ಮಾಡುವೆಯಾದರೆ ಆಗಲೇ ನಿನಗೆ ಮುಕ್ತಿ.'' ಅಂದರೆ ಸಾಧಕನ ಮನದಲ್ಲಿ ಸ್ವಾರ್ಥಕ್ಕೆ ಎಡೆ ಇರಬಾರದು. ಇದು ಸ್ವಾಮಿ ವಿವೇಕಾನಂದರ '**ಆತ್ಮನೋ ಮೋಕ್ಷಾರ್ಥಂ ಜಗದ್ ಹಿತಾಯ ಚ**' ಎಂಬ ಆದರ್ಶ. ಸ್ವಾಮಿ ವಿರಜಾನಂದರು ಅಂಥ ಆದರ್ಶಕ್ಕಾಗಿ ತಮ್ಮ ಜೀವನವನ್ನು ಸಮರ್ಪಿಸಿದ್ದರು.

ಪೂರ್ವಾಶ್ರಮದಲ್ಲಿ ವಿರಜಾನಂದರ ಹೆಸರು ಕಾಲೀಕೃಷ್ಣ ಎಂಬುದಾಗಿ. ಬಾಲ್ಯದಿಂದಲೇ ಧ್ಯಾನಧಾರಣಾದಿಗಳಿಂದ ತಮ್ಮ ನೈತಿಕ ಸಂಪತ್ತನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಶ್ರೀರಾಮಕೃಷ್ಣರ ಜೀವನ ವೃತ್ತಾಂತ ಎಂಬ ಪುಸ್ತಕ ಓದಿ ಶ್ರೀರಾಮಕೃಷ್ಣರೆಡೆಗೆ ಆಕೃಷ್ಟರಾದರು. ಸಾಧಕನು ಗಮನಿಸಬೇಕಾದ ಮುಖ್ಯ ಅಂಶವಿದು. ಮನಸ್ಸನ್ನು ಯಾವಾಗಲೂ ಊರ್ಧ್ವಮುಖವಾಗಿಡಲು ಸಾಧು–ಸಂತರ, ಮಹಾಪುರುಷರ, ಅವತಾರ ಪುರುಷರ ಜೀವನಗಳನ್ನು ಓದುತ್ತಿರಬೇಕು.

ಕಾಲೀಕೃಷ್ಣರು ನಿರ್ಜನ ಪ್ರದೇಶದಲ್ಲಿ ಧ್ಯಾನ ಜಪಗಳನ್ನು ಮಾಡುತ್ತಿದ್ದರು. ತಮ್ಮ ಕೋಣೆಯ ಬಾಗಿಲು ಹಾಕಿ ಬಹುಕಾಲ ಆರಾಧನೆ, ಪ್ರಾರ್ಥನೆಗಳನ್ನು ಮಾಡುತ್ತಿದ್ದರು. 'ಶ್ರೀರಾಮಕೃಷ್ಣ ವಚನವೇದ'ದ ಕರ್ತೃಗಳಾದ ಮಾಸ್ಟರ್ ಮಹಾಶಯರ ಸಂಪರ್ಕಕ್ಕೆ ಬಂದಮೇಲೆ, ಅವರ ಸಲಹೆಯಂತೆ ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರು ವಾಸಿಸುತ್ತಿದ್ದ ವರಾಹನಗರ ಮಠಕ್ಕೆ ಹೋದರು. ಅಲ್ಲಿ ಅವರಿಗೆ ಸ್ವಾಮಿ ರಾಮಕೃಷ್ಣಾನಂದರು, ಶಿವಾನಂದರು, ನಿರಂಜನಾನಂದರು ಮತ್ತಿತರ ಶ್ರೀರಾಮಕೃಷ್ಣರ ಪ್ರತ್ಯಕ್ಷ ಶಿಷ್ಯರ ಭೇಟಿಯಾಯಿತು. ಅಂದಿನಿಂದ ಸಾಧ್ಯವಾದಾಗ ಲೆಲ್ಲಾ ಮಠಕ್ಕೆ ಬರಲಾರಂಭಿಸಿದರು. ಉಜ್ವಲವಾದ ವೈರಾಗ್ಯಮಯ ಜೀವನ ನಡೆಸು

ತ್ತಿದ್ದ ಆ ಸಂನ್ಯಾಸಿಗಳ ಸಂಗ ಇವರ ಮೇಲೆ ತೀವ್ರ ಪರಿಣಾಮ ವನ್ನುಂಟುಮಾಡಿ, ಈ ಜನ್ಮದಲ್ಲೇ – ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಹಂಬಲ ತೀವ್ರವಾಯಿತು.

ಇವರ ಆಧ್ಯಾತ್ಮಿಕ ಸಾಧನೆಗೆ ಇವರ ತಾಯಿ ತುಂಬಾ ಪ್ರೋತ್ಸಾಹ ನೀಡುತ್ತಿದ್ದಳು. ತಾನು ಸಂನ್ಯಾಸಿಯಾಗಲು ಬಾರಾ ನಗರ ಮಠ ಸೇರುತ್ತೇನೆಂದು ತಮ್ಮ ಇಚ್ಛೆಯನ್ನು ಪ್ರಕಟಿಸಿದಾಗ ಅವಳು ಅತ್ಯಂತ ಆನಂದಪಟ್ಟು ಮನಃಪೂರ್ವಕ ಆಶೀರ್ವದಿಸಿ ಕಳುಹಿಸಿಕೊಟ್ಟು ಹೆಮ್ಮೆ ಪಟ್ಟಳು. ಧನ್ಯ ತಾಯಿ, ಧನ್ಯ ಮಗ. ನಮ್ಮ ಭಾರತೀಯ ನಾರಿಯರೆಲ್ಲಾ ಈ ಮನೋಭಾವ ತಾಳಿದಲ್ಲಿ ನಮ್ಮ ದೇಶ ಧನ್ಯವಾಗುವುದಿಲ್ಲವೆ!

೧೮೯೬ರಲ್ಲಿ ಶ್ರೀಮಾತೆಯವರು ನೀಲಾಂಬರ ಬಾಬುವಿನ ಉದ್ಯಾನವನದ ಮನೆಯಲ್ಲಿ ಕಾಲೀಕೃಷ್ಣರಿಗೆ ಮಂತ್ರದೀಕ್ಷೆ ಕೊಟ್ಟರು. ನಾಲ್ಕು ವರ್ಷಗಳ ನಂತರ ಕಾಲೀಕೃಷ್ಣರಿಗೂ ಇನ್ನೋರ್ವ ಶಿಷ್ಯರಿಗೂ ಸ್ವಾಮಿ ವಿವೇಕಾನಂದರು ಸಂನ್ಯಾಸ ದೀಕ್ಷೆ ಇತ್ತರು. ಅವರನ್ನು ಆಶೀರ್ವದಿಸುತ್ತಾ ವಿವೇಕಾನಂದರು ಹೇಳಿ ದರು, ''ಈ ಸಾಧುಗಳೆಲ್ಲಾ ಬ್ರಹ್ಮಚರ್ಯವ್ರತಧಾರಿಗಳಾಗಿ ಜ್ವಲಂತ ಅಗ್ನಿಯಂತೆ ಪ್ರಕಾಶಮಾನರಾಗುತ್ತಾರೆ.'' ೧೮೯೮ರಲ್ಲಿ ವೇದಾಂತ ಪ್ರಚಾರ ಕಾರ್ಯಕ್ಕಾಗಿ ಢಾಕಾಗೆ ತೆರಳುವಾಗ ಸ್ವಾಮಿ ವಿವೇಕಾನಂದರು ಅವರನ್ನು ಆಶೀರ್ವದಿಸಿ, ''ನಿಮ್ಮಲ್ಲಿ ಶ್ರೀರಾಮ ಕೃಷ್ಣರ ಶಕ್ತಿ ಕೆಲಸಮಾಡುತ್ತದೆ. ಈ ಸಂಘವೇ ಶ್ರೀರಾಮಕೃಷ್ಣರ ಸಮಷ್ಟಿ ಶರೀರವೆಂದು ತಿಳಿಯಿರಿ'' ಎಂದರು.

ಮುಂದೆ ಒಂದು ದಿನ ಮಾಯಾವತಿಯಲ್ಲಿರುವ ಅದ್ವೈತ ಆಶ್ರಮದಲ್ಲಿ ವಿರಜಾನಂದರು ಸ್ವಾಮಿ ವಿವೇಕಾನಂದರ ಸೇವೆ ಮಾಡುತ್ತಿದ್ದಾಗ, ''ತಮಗೆ ದೀರ್ಘ ಕಾಲ ನಿರ್ಜನವಾದ ಪ್ರದೇಶ ದಲ್ಲಿ ಏಕಾಂತವಾಗಿ ಇದ್ದು ಸಾಧನೆ ಮಾಡಬೇಕೆಂಬ ಆಸೆಯಿದೆ'' ಎಂದು ಹೇಳಿದರು. ಅದಕ್ಕೆ ವಿವೇಕಾನಂದರು, ''ಹೆಚ್ಚು ಕಠೋರ ವಾದ ತಪಸ್ಸಿನಿಂದ ಆರೋಗ್ಯ ಕೆಡುವುದು. ೫ ನಿಮಿಷ ಸರಿಯಾಗಿ ಧ್ಯಾನ ಮಾಡಿದರಾಯಿತು. ಮಿಕ್ಕ ವೇಳೆಯನ್ನು ಶಾಸ್ತ್ರಾಧ್ಯಯನ, ಪಾರಾಯಣ, ಪರಹಿತಕಾರ್ಯದಲ್ಲಿ ಕಳೆಯಬೇಕು. ನನ್ನ ಶಿಷ್ಯರು ತಪಸ್ಸಿಗಿಂತ ಕರ್ಮದಲ್ಲೇ ಹೆಚ್ಚು ನಿರತರಾಗಿರಬೇಕು'' ಎಂದಾಗ ವಿರಜಾನಂದರು, ''ನೈತಿಕ ಮತ್ತು ಆಧ್ಯಾತ್ಮಿಕ ಬಲವನ್ನು ವೃದ್ಧಿಗೊಳಿಸಲು ತಪಸ್ಸು ಅತ್ಯಾವಶ್ಯಕ'' ಎಂದು ಉತ್ತರಿಸಿದರು. ವಿರಜಾನಂದರು ಅಲ್ಲಿ ಇಲ್ಲದಿದ್ದಾಗ ಇತರರನ್ನು ಕುರಿತು ವಿವೇಕಾ ನಂದರು ಹೇಳುತ್ತಾರೆ: ''ಕಾಲೀಕೃಷ್ಣ ಹೇಳುವುದು ಸತ್ಯ. ಧ್ಯಾನ ಧಾರಣಾದಿಗಳಲ್ಲಿ ಕಾಲ ಕಳೆಯುವ ಸಂನ್ಯಾಸೀ ಜೀವನವೇ ಅತ್ಯಂತ ಶ್ರೇಷ್ಠವಾದುದು.'' ಆದರೆ ವಿರಜಾನಂದರು ವಿವೇಕಾ ನಂದರ ಆದರ್ಶದಂತೆ ಕರ್ಮ, ಧ್ಯಾನಗಳನ್ನು ಸಮನ್ವಯಗೊಳಿ ಸಿದ ಸಾಧನಾ ಮಾರ್ಗವನ್ನು ಅಕ್ಷರಶಃ ಪಾಲಿಸಿದರು.

ಕೆಲವು ವರ್ಷಗಳ ಕಾಲ ಅವರು ಸಂಘದ ಕಾರ್ಯಗಳಲ್ಲಿ ತಮ್ಮನ್ನು ನಿಷ್ಠೆಯಿಂದ ತೊಡಗಿಸಿಕೊಂಡರು. ನಂತರ ಮಾಯಾ ವತಿಗೆ ಮತ್ತೆ ಬಂದು, ಅಲ್ಲಿಯೇ ಅದ್ವೈತ ಆಶ್ರಮಕ್ಕೆ ಸಮೀಪದಲ್ಲೆ ಒಂದು ಸಾಧನಾ ಕುಟೀರವನ್ನು ಕಟ್ಟಿ ಎಲ್ಲ ಜವಾಬ್ದಾರಿಗಳಿಂದಲೂ ಬಿಡಿಸಿಕೊಂಡು ಕಠೋರ ಸಾಧನೆಯಲ್ಲಿ ತೊಡಗಿದರು. ಪ್ರತಿದಿನ ಸುಮಾರು ೧೬ ಘಂಟೆಗಳ ಕಾಲ ಆಹಾರದೆಡೆಗೆ ಸ್ವಲ್ಪವೂ ಗಮನ ಕೊಡದೆ ಧ್ಯಾನಮಾಡುತ್ತಿದ್ದರು.

ಕಠೋರ ತಪಸ್ಸಿನಲ್ಲಿ ತೊಡಗಿದ್ದ ವಿರಜಾನಂದರಿಗೆ ಶ್ರೀರಾಮ ಕೃಷ್ಣರ ನೇರ ಸಂನ್ಯಾಸಿ ಶಿಷ್ಯರಾದ ಸ್ವಾಮಿ ತುರೀಯಾನಂದರು ಒಂದು ಪತ್ರವನ್ನು ಬರೆದರು: ''ಪ್ರಿಯ ವಿರಜಾನಂದ, ಇಂದು ಸ್ವಾಮಿ ವಿವೇಕಾನಾಂದರ ಭೌತಿಕ ಶರೀರವಿಲ್ಲ ನಿಜ. ಆದರೆ ಅವರ ಮಹಾಶಕ್ತಿ ಪ್ರಪಂಚದಲ್ಲೆಲ್ಲಾ ಕೆಲಸ ಮಾಡುತ್ತಿದೆ. ಪ್ರಜ್ವಲಿಸುತ್ತಾ ವಿಸ್ತಾರಗೊಳ್ಳುತ್ತಿದೆ. ನೀನು ಅವರ ಆಶೀರ್ವಾದ ಪಡೆದಿರುವೆ. ನಿನಗೆ ಮಂಗಳವಾಗುವುದು. ಇದರಲ್ಲಿ ಸಂಶಯವಿಲ್ಲ. ವಿಶ್ವಾಸ ವಿಡು, ಭಗವತ್ ಭಜನೆ ಬಿಡಬೇಡ. ಈ ಮಹಾಶಕ್ತಿಯೇ ನಿನ್ನನ್ನು ಸರ್ವಕಾಲದಲ್ಲಿಯೂ ರಕ್ಷಿಸಿ ದಾರಿ ತೋರಿಸುತ್ತಿದೆ. ನಿನಗೆ ಸಿದ್ಧಿ ದೊರಕುತ್ತದೆ. ಸ್ವಾಮಿ ವಿವೇಕಾನಂದರ ಕಾರ್ಯದಲ್ಲಿ ತೊಡ ಗಿಸಿಕೊ. ಅದಕ್ಕಿಂತ ಹೆಚ್ಚಿನ ಕಾರ್ಯ ಈ ಜನ್ಮದಲ್ಲಿ ಇನ್ನೇನಿದೆ?''

ಕಠೋರ ತಪಸ್ಸಿನಿಂದ ಅವರ ಆರೋಗ್ಯ ಕೆಟ್ಟಿತು. ದೇಹ ದುರ್ಬಲವಾಯಿತು. ಆರೋಗ್ಯ ಕೆಟ್ಟಿರುವುದು ಮಠದಲ್ಲಿ ಹಿರಿ ಯರ ಗಮನಕ್ಕೆ ಬಂದು, ಬೇಲೂರು ಮಠಕ್ಕೆ ಹಿಂದಿರುಗುವಂತೆ ತಿಳಿಸಿದರು. ಅವರ ಆರೋಗ್ಯಸ್ಥಿತಿ ನೋಡಿ ಬ್ರಹ್ಮಾನಂದರಿಗೆ ತೀವ್ರ ಗಾಬರಿಯಾಯಿತು. ಔಷಧೋಪಚಾರಗಳಿಂದ ಏನೂ ಉತ್ತಮಗೊಳ್ಳಲಿಲ್ಲ. ತೀವ್ರವಾದ ತಲೆ ನೋವಿನಿಂದ ನರಳು ತ್ತಿದ್ದರು. ತಮ್ಮ ಗುರುವಿನ ದರ್ಶನ ಮಾಡಲು ಜಯರಾಂಬಾಟಿಗೆ ಬಂದರು. ಅವರ ದುಃಸ್ಥಿತಿಗೆ ಮರುಗಿ ಶ್ರೀಮಾತೆ ಅವರನ್ನು, ''ಧ್ಯಾನ ಮಾಡುವಾಗ ಮನಸ್ಸನ್ನು ಎಲ್ಲಿ ಕೇಂದ್ರೀಕರಿಸುತ್ತಿ?'' ಎಂದು ಪ್ರಶ್ನಿಸಿದರು. ''ಸಹಸ್ರಾರದಲ್ಲಿ'' ಎಂದು ಉತ್ತರಿಸಿದಾಗ, ಅಲ್ಲಿ ಮಾಡದೆ, ಹೃದಯ ಕೇಂದ್ರದಲ್ಲಿ ಮಾಡುವಂತೆ ಸಲಹೆ ಯಿತ್ತರು. ತಲೆ ನೋವು ತಾನಾಗಿ ಕಡಿಮೆಯಾಗಿ, ಕೆಲವು ದಿನಗ ಳಾದ ಮೇಲೆ ಅವರು ಬೇಲೂರು ಮಠಕ್ಕೆ ಹಿಂದಿರುಗಿದರು.

ಕೆಲವು ತಿಂಗಳಾದ ಮೇಲೆ ಸ್ವಾಮಿ ಸ್ವರೂಪಾನಂದರು ತೀರಿ ಹೋದುದರಿಂದ ಮಾಯಾವತಿಯ ಅಧ್ಯಕ್ಷ ಸ್ಥಾನ ವಹಿಸಬೇಕಾ ಯಿತು. ಈ ಬಾರಿ ಅವರು ತೀವ್ರಸಾಧನೆಯಲ್ಲಿ ತೊಡಗಿದು ದಲ್ಲದೇ, ಜೊತೆ ಜೊತೆಗೆ ಸ್ವಾಮಿ ವಿವೇಕಾನಂದರ ಜೀವನ ಹಾಗೂ ಕೃತಿಗಳನ್ನು ಮೊದಲ ಬಾರಿಗೆ ಸಮಗ್ರವಾಗಿ ಪ್ರಕಟಿಸಿ ದರು. ಸ್ವಾಮಿ ಅಖಂಡಾನಂದರು ಆ ಕೃತಿಗಳನ್ನು ಓದಿ ಮನಃ ಪೂರ್ವಕವಾಗಿ ಆಶೀರ್ವದಿಸಿದರು.

ತೀವ್ರ ಚಟುವಟಿಕೆಯಲ್ಲಿದ್ದರೂ ವಿರಜಾನಂದರ ಮನಸ್ಸು ಸದಾ ತಪಸ್ಸಿನಲ್ಲಿ ನಿರತವಾಗಿರಲು ಬಯಸುತ್ತಿತ್ತು. ಮಾಯಾವತಿ ಯಿಂದ ಸ್ವಲ್ಪದೂರದಲ್ಲಿ ಶ್ಯಾಮಲಾತಲ್ ಎಂಬಲ್ಲಿ ಮತ್ತೆ ತಪೋ




ನಿರತರಾದರು. ಅವರು ತಪೋನಿರತರಾಗುತ್ತಿದ್ದ ಸ್ಥಳವೇ ಆಶ್ರಮವಾಗುತ್ತಿತ್ತು. ಅಂತೆಯೇ ಶ್ಯಾಮಲಾತಲ್‌ನಲ್ಲಿ '**ವಿವೇಕಾನಂದ ಆಶ್ರಮ**' ಮೈತಾಳಿತು.

ಸಂಘದ ಕಾರ್ಯಕ್ಕೂ ಯಾವಾಗಲೂ ತಯಾರಾಗಿದ್ದರು. ೧೯೩೪ರಲ್ಲಿ ಮಹಾಸಂಘದ ಕಾರ್ಯದರ್ಶಿಯ ಭಾರವನ್ನು ವಹಿಸಿದರು. ೧೯೩೮ರಲ್ಲಿ ಸಂಘದ ೬ನೆಯ ಮಹಾಧ್ಯಕ್ಷರಾಗಿ ನೇಮಕಗೊಂಡರು. ಅವರು ಗುರುಸ್ಥಾನಕ್ಕೆ ಏರಿದ ಮೇಲೆ ನೂರಾರು ಭಕ್ತರಿಗೆ ಮಂತ್ರದೀಕ್ಷೆಯನ್ನೂ, ಸಂಘದ ಹಲವಾರು ಬ್ರಹ್ಮಚಾರಿಗಳಿಗೆ ಸಂನ್ಯಾಸ ದೀಕ್ಷೆಯನ್ನೂ ದಯಪಾಲಿಸಿದರು. ಆಧ್ಯಾತ್ಮಿಕ ಪಿಪಾಸುಗಳಿಗೆ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಲು ಹಲವಾರು ಉಪದೇಶಗಳನ್ನು ನೀಡಿದರು. ಸಾಧಕರಿಗೆ ಹಾಗೆ ಮಾಡಿದ ಮಾರ್ಗದರ್ಶನದ ಉಪದೇಶಗಳು ಇಂದು '**ಪರಮಾರ್ಥ ಪ್ರಸಂಗ**' ವೆಂಬ ಪ್ರಸಿದ್ಧ ಪುಸ್ತಕವಾಗಿದೆ. ಅವುಗಳಲ್ಲಿ ಸಾಧನೆಗೆ ಉಪಯೋಗವಾಗುವ ಕೆಲವು ಉಪದೇಶಗಳನ್ನು ನೋಡೋಣ.

**ಜೀವನದ ಗುರಿ:** ಮಾನವ ಜೀವನದ ಮುಖ್ಯ ಗುರಿ ಭಗವತ್ ಸಾಕ್ಷಾತ್ಕಾರ, ಮುಕ್ತಿಲಾಭ. ಕೇವಲ ಮಾನವನೊಬ್ಬನಿಗೆ ಮಾತ್ರ ಈ ಜೀವನದ ಗುರಿಯನ್ನು ಪಡೆಯುವ ಹಕ್ಕು, ಯೋಗ್ಯತೆ ಇದೆ. *('ಪರಮಾರ್ಥ ಪ್ರಸಂಗ', ಪು. ೧೧೮)*

ಮಾನವ ಜೀವನದ ಧ್ಯೇಯ ಮತ್ತು ಗುರಿ ಭಗವತ್‌ಸಾಕ್ಷಾತ್ಕಾರ ಎಂಬುದನ್ನು ಮರೆಯಬೇಡ. ನೀನು ಬಾಳನ್ನು ಪ್ರಾಣಿಗಳಂತೆ ಕೇವಲ ತಿನ್ನುವುದು, ಮಲಗುವುದು, ಇಂದ್ರಿಯ ಭೋಗ, ವ್ಯರ್ಥಹರಟೆ ಮತ್ತು ನಿಷ್ಪ್ರಯೋಜಕ ಕೆಲಸಗಳಲ್ಲಿ ಕಳೆದರೆ ಬಾಳು ವ್ಯರ್ಥವಾಗುವುದು. ನೀನೂ ವ್ಯಥೆಗೀಡಾಗುವೆ. ಎಲ್ಲಿಯವರೆಗೆ ನಿನ್ನ ದೇಹ ಮತ್ತು ಮನಸ್ಸುಗಳಲ್ಲಿ ಶಕ್ತಿ ಚೈತನ್ಯಗಳಿವೆಯೋ ಅಲ್ಲಿಯ ವರೆಗೂ ಅಂತಃಕರಣಪೂರ್ವಕ ನಿನ್ನ ಶಕ್ತಿಯನ್ನೆಲ್ಲಾ ಸಾಧನೆಯಲ್ಲಿ ಉಪಯೋಗಿಸು. ಏನು ಬಂದರೂ ನಿನ್ನ ಪ್ರಯತ್ನದಿಂದ ವಿಮುಖ ನಾಗಬೇಡ. ಈ ಸಾಧನೆಗಳನ್ನು ನಂತರ ಮಾಡಬಹುದು. ದೇವರು ಇಚ್ಛಿಸಿದಾಗ ಅಥವಾ ಒಲಿದಾಗ ಮಾತ್ರ ಇವುಗಳೆಲ್ಲಾ ಸಾಧ್ಯ ಎನ್ನುವುದು ಏನೂ ಕೆಲಸಕ್ಕೆ ಬಾರದ ಮೂಢರ ಮಾತು. ಅವರು ಏನನ್ನೂ ನಿಷ್ಕಾಪಟ್ಯದಿಂದ ಮಾಡಬಯಸುವುದಿಲ್ಲ. ಯಾವ ಒಳ್ಳೆಯ ಕೆಲಸವೂ ಅವರಿಂದ ಅಸಾಧ್ಯ. *(ಪು. ೭೧-೭೨)*

ಈ ಜಗತ್ತು ಒಂದು ದೊಡ್ಡ ಕನಸೆಂದು ತಿಳಿ. ಎಲ್ಲಿಯವರೆಗೆ ಅದು ಉಳಿದಿರುತ್ತದೆಯೋ ಅಲ್ಲಿಯವರೆಗೂ ವ್ಯಾವಹಾರಿಕ ದೃಷ್ಟಿಯಿಂದ ಈ ಪ್ರಪಂಚ ನಿಜವೆಂದು ಭಾವಿಸಿ ನಿನ್ನ ಕರ್ತವ್ಯವನ್ನು ಮಾಡು. ಆದರೆ ಅದೇ ಸಮಯದಲ್ಲಿ ದೇವರೊಬ್ಬನೇ ಸತ್ಯ, ಶಾಶ್ವತ, ನಿತ್ಯ, ಆತನನ್ನು ಪಡೆಯುವವರೆಗೂ ಅಂತಿಮ ಸುಖ, ಶಾಂತಿ, ಮುಕ್ತಿ, ಎಂಬುದಿಲ್ಲವೆಂಬ ಭಾವನೆ ದೃಢವಾಗಿ ಇರಲಿ. ಅತ್ಯುತ್ತಮ ಮನುಷ್ಯ ಜನ್ಮ ಧಾರಣೆ ಮಾಡಿ, ನಿಜವಾದ ಜ್ಞಾನವನ್ನು ಹೊಂದುವ ಸುಯೋಗವನ್ನು ಪಡೆದೂ, ನೀನು ದೇವರ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸದಿದ್ದಲ್ಲಿ ಈ ಜೀವನ ವ್ಯರ್ಥ.

**ಸಾಧಕನ ಗುಣಗಳು:**

ಸಾಧಕನು ಈ ಕೆಳಗಿನ ಸದ್ಗುಣಗಳನ್ನು ಮತ್ತು ನಿಯಮವನ್ನು ಅಭ್ಯಾಸ ಮಾಡುವುದು ಆವಶ್ಯಕ.

ದೇವರಲ್ಲಿ ದೃಢನಂಬಿಕೆ, ಆತನಲ್ಲಿ ಶರಣಾಗುವುದು.

ಬ್ರಹ್ಮಚರ್ಯ ಅಥವಾ ಇಂದ್ರಿಯ ನಿಗ್ರಹವನ್ನು ಆಚರಿಸುವುದು. ಕ್ಷಣಭಂಗುರಗಳಾದ ಮತ್ತು ಕೆಟ್ಟ ಪ್ರಕೃತಿಯುಳ್ಳ ವಿಷಯ ವಸ್ತುಗಳನ್ನು ವಿಮರ್ಶಿಸಿ ಅವುಗಳ ಮೇಲಿನ ವ್ಯಾಮೋಹವನ್ನು, ಹಸಿವನ್ನು ವರ್ಜಿಸಬೇಕು. ಎಲ್ಲಾ ಬಗೆಯ ವ್ಯಾಮೋಹಗಳಿಂದಲೂ ಮುಕ್ತನಾಗಬೇಕು. ಕಾಮದ ನಿಗ್ರಹವಿಲ್ಲದ ಹೊರತು ದೈಹಿಕ ಮಾನಸಿಕ ಮತ್ತು ಬುದ್ಧಿಯ ನಿಗ್ರಹ ಅಸಾಧ್ಯ. ಇದನ್ನು ಬಿಡದೆ ಹನ್ನೆರಡು ವರ್ಷ ಗಳು ಅನುಸರಿಸಿದರೆ ಜ್ಞಾಪಕಶಕ್ತಿ ಮತ್ತು ಅಂತರ್‌ಜ್ಞಾನಕ್ಕೆ ಸಹಾಯ ಮಾಡುವ 'ಮೇಧಾ' ಎಂಬ ಸೂಕ್ಷ್ಮ ನರ ಬೆಳೆಯುತ್ತದೆ. ಇದರಿಂದ ಗಹನವಾದ ಸತ್ಯಗಳನ್ನು ಗ್ರಹಿಸುವುದಕ್ಕೂ ಅವನ್ನು ಉಳಿಸಿಕೊಳ್ಳುವುದಕ್ಕೂ ಬೇಕಾದ ಸಾಮರ್ಥ್ಯ ಲಭಿಸುವುದು. ಸಂಪೂರ್ಣ ಆನಂದದ ಅನುಭವ ಆಗ ನಮಗುಂಟಾಗುತ್ತದೆ. ದೇಹ ಮತ್ತು ಮುಖದಲ್ಲಿ ತೇಜಸ್ಸು ಕೂಡಿರುತ್ತದೆ. ಕೆಲಸ ಮಾಡುವ ಶಕ್ತಿ ಸೂಕ್ಷ್ಮಬುದ್ಧಿ ಅಗಣಿತವಾಗಿ ವೃದ್ಧಿಯಾಗುತ್ತದೆ. *(ಪು. ೭೨-೭೩)*

**ಶರಣಾಗತಿ:**

ಈ ಜನ್ಮದಲ್ಲೇ ಮೋಕ್ಷ ಸಿದ್ಧಿಸಬೇಕಾದರೆ ನಮ್ಮ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ವಿನಿಯೋಗಿಸಿ ಸಾಧನೆ ಮಾಡಬೇಕು. ನಮ್ಮ ಸರ್ವಸ್ವವನ್ನೂ ಆತನಿಗೆ ಅರ್ಪಿಸಬೇಕು. ಸಾಧ್ಯವಾದರೆ ಇನ್ನೂ ಹೆಚ್ಚಾಗಿ ಆತನಿಗೆ ಅರ್ಪಿಸಬೇಕು. ಶ್ರೀರಾಮಕೃಷ್ಣರು ಹೇಳುತ್ತಿದ್ದಂತೆ, ಶ್ರದ್ಧಾ ಭಕ್ತಿಗಳನ್ನು ನಮ್ಮಲ್ಲಿರುವುದಕ್ಕಿಂತ ಹೆಚ್ಚಾಗಿ ಹೊಂದಬೇಕು. ಇದರ ಅರ್ಥವೇನೆಂದರೆ, ನಮ್ಮ ಭಕ್ತಿ ಶ್ರದ್ಧೆ ತುಂಬಿ ತುಳುಕಾಡುವ ಪಾತ್ರೆಯಂತಿರಬೇಕು. ಯಾರಿಗೆ ಇಷ್ಟೊಂದು ವಿಪುಲವಾದ ಪ್ರಮಾಣದಲ್ಲಿ ಶ್ರದ್ಧೆ ಭಕ್ತಿಗಳಿವೆ? ಆದರೂ ನಿರಾಸೆಗೆ ಕಾರಣವಿಲ್ಲ. ನಿನ್ನ ಶಕ್ತಿ ಮೀರಿ ಸಾಧನೆ ಮಾಡು, ಆದರೆ ಈ ಒಂದು ದೃಢ ವಿಶ್ವಾಸವಿರಲಿ. ನೀನೆಷ್ಟೇ ಕಷ್ಟಪಟ್ಟರೂ ಅದು ಅತ್ಯಲ್ಪ. ಆತ್ಮಸಾಕ್ಷಾತ್ಕಾರ ಧ್ಯೇಯವಾಗಿರುವಾಗ ಎಷ್ಟೇ ಕಷ್ಟಪಟ್ಟರೂ ಸಾಲುವುದಿಲ್ಲ. ಕೊಟ್ಟಕೊನೆಗೆ ನಾವು ಗುರಿಯನ್ನು ಅವನ ಕೃಪೆಯಿಂದ ಮಾತ್ರ ಸೇರಲು ಸಾಧ್ಯ. *(ಪು. ೧೩)*

**ದೇವರ ಸ್ಮರಣೆ:**

ದೇವರ ಸ್ಮರಣೆ ಮಾಡು. ಸಾಧ್ಯವಾದಷ್ಟು ಅವನನ್ನು ಮನನ ಮಾಡು. ಆತನು ನಿನ್ನವನೇ. ಅವನನ್ನು ನಿನ್ನ ಸ್ವಂತ ಆತ್ಮಕ್ಕಿಂತ ಇನ್ನೂ ಹತ್ತಿರದವನು, ಪ್ರೀತಿ ಪಾತ್ರನೆಂದು ತಿಳಿ. ಯಾರು ನಿನ್ನ ಇಹ ಮತ್ತು ಪರ ಜೀವನದ ಆಧಾರಭೂತನಾಗಿ ಆಶ್ರಯದಾತನಾಗಿರುವನೋ ಆತನನ್ನು ತ್ರಿಕರಣ ಪೂರ್ವಕ ಪ್ರೀತಿಸು. *(ಪು. ೧೪-೧೫)*

**ಜಪ ಮತ್ತು ಧ್ಯಾನ:**

ನೀನು ಜಪ ಮತ್ತು ಧ್ಯಾನಕ್ಕೆ ಮೀಸಲಾಗಿಡುವ ಕಾಲ ಎಷ್ಟೇ ಅಲ್ಪವಾಗಿರಲಿ ಕೇವಲ ಹತ್ತು ಹದಿನೈದು ನಿಮಿಷಗಳಾದರೂ ಚಿಂತೆ ಇಲ್ಲ. ಅದನ್ನು ಹೃತ್ಪೂರ್ವಕ ಮಾಡು. ದೇವರೇ ನಿನ್ನ ಹೃದಯದಲ್ಲಿ ವಾಸಿಸುತ್ತಿರುವನು. ಅವನೇ ನಿನ್ನ ಅಂತರಂಗದ ಮಾರ್ಗದರ್ಶಕ. ಅವನು ನಿನ್ನ ಹೃದಯವನ್ನು ನೋಡುತ್ತಾನೆ. ಅವನಿಗೆ ನೀನು ಎಷ್ಟು ಹೊತ್ತು ಆತನನ್ನು ಕುರಿತು ಧ್ಯಾನ ಮಾಡುತ್ತೀಯೆ ಅಥವಾ ಎಷ್ಟು ಬಾರಿ ಜಪಮಾಡಿದೆ ಎಂಬುದು ಮುಖ್ಯವಲ್ಲ. ಅವನಿಗಾಗಿ ನೀನು ಎಷ್ಟು ಕಾತರನಾಗಿರುವೆ ಎಂಬುದು ಮಾತ್ರ ಮುಖ್ಯ. *(ಪು. ೨-೩)*

ಜಪ ಮಾಡುತ್ತಿರುವಾಗ ನಿನ್ನ ಇಷ್ಟದೇವತೆಯ ಆಕಾರದ ಮೇಲೂ ಧ್ಯಾನ ಮಾಡು. ಇಲ್ಲದಿದ್ದಲ್ಲಿ ಜಪ ಅಷ್ಟು ಆನಂದದಾಯಕವಾಗಲಾರದು. ಧ್ಯಾನಿಸುತ್ತಿರುವಾಗ ಇಷ್ಟದೇವತೆಯ ಸಂಪೂರ್ಣ ರೂಪ ಕಾಣಿಸಿಕೊಳ್ಳದಿದ್ದರೂ ಚಿಂತೆಯಿಲ್ಲ. ಆ ಆಕಾರದ ಯಾವ ಭಾಗ ಮನಸ್ಸಿಗೆ ಬಂದರೆ ಅದರಿಂದಲೇ ಪ್ರಾರಂಭಿಸು. ನಿನಗಿದು ಸಾಧ್ಯವಾಗದಿದ್ದರೂ ಮರಳಿ ಮರಳಿ ಯತ್ನಿಸು. ನಿನಗೆ ಸಾಧ್ಯವಾಗಲಿಲ್ಲವೆಂದು ಅದನ್ನು ಏಕೆ ಬಿಡಬೇಕು? ದೃಢ ಚಿತ್ತದಿಂದ ನೀನು ಅದನ್ನು ಮುಂದುವರೆಸುತ್ತಿರಬೇಕು. ಕೇವಲ ಇಚ್ಛಾಮಾತ್ರದಿಂದಲೇ ಅಷ್ಟೊಂದು ಸುಲಭವಾಗಿ ಧ್ಯಾನ ಲಭಿಸುವುದೆ? ಧ್ಯಾನಿಸುವ ವಸ್ತುವಿನ ಮೇಲೆ ಅದನ್ನು ನಿಲ್ಲಿಸುವುದಕ್ಕೆ ಸತತವಾಗಿ ಪ್ರಯತ್ನಿಸಬೇಕು. *(ಪು. ೪)*

ಧ್ಯಾನವನ್ನು ಒಂದು ಏಕಾಂತಸ್ಥಳದಲ್ಲಿ ಮಬ್ಬಾದ ಬೆಳಕಿನಲ್ಲಿ ಅಥವಾ ಕತ್ತಲೆಯಲ್ಲಿ ಕುಳಿತು ಮಾಡಿ. ಸಡಿಲವಾದ ಬಟ್ಟೆಯನ್ನು ಧರಿಸಿ, ಬಾಯಿಯನ್ನು ಮುಚ್ಚಿ, ಮೂಗಿನಿಂದ ಉಸಿರಾಡಿ. ಧ್ಯಾನದ ವೇಳೆಯಲ್ಲಿ ಅಂತರ್ಮುಖರಾಗಲು ಯತ್ನಿಸಿ, ಕಣ್ಣುಗಳನ್ನು, ಮುಚ್ಚಿ ಹೃದಯದ ಕಮಲದಲ್ಲಿ ಏಕಾಗ್ರಮಾಡಿ, ನಿಮ್ಮ ಇಷ್ಟದೇವರು ಪ್ರಕಾಶಮಾನವಾಗಿ ಅಲ್ಲಿ ನೆಲೆಸಿರುವನೆಂದು ಭಾವಿಸಿ.



## ಅಧ್ಯಾತ್ಮ ಜೀವನ : ಅದರ ಮೂರು ಮಜಲುಗಳು

ಮಾನವನ ಆಧ್ಯಾತ್ಮಿಕ ಜೀವನದ ಅಭಿವ್ಯಕ್ತಿಯಲ್ಲಿ ಭಾರತವು ಮೂರು ಮಜಲುಗಳನ್ನು ಗುರುತಿಸುತ್ತದೆ. ಮನುಷ್ಯನ ಧಾರ್ಮಿಕ ಆಕಾಂಕ್ಷೆ, ಪೂಜೆ, ಆರಾಧನೆಗಳ ಬಾಹ್ಯಕರ್ಮದಲ್ಲಿ ಅದು ವ್ಯಕ್ತವಾಗುತ್ತದೆ. ಇಲ್ಲಿ ಇಂದ್ರಿಯಗೋಚರವಾದ ಮತ್ತು ಸ್ಥೂಲವಾದುದರ ಮೂಲಕವಾಗಿ ನಿತ್ಯವಾದುದನ್ನು ಸಾಧಿಸುವ ಪ್ರಯತ್ನ ನಡೆಯುತ್ತದೆ. ಈ ಮಜಲಿನ ನೇಮನಿಷ್ಠೆಗಳು ಸಾಧಕನನ್ನು ಎರಡನೆಯ ಮಜಲಾದ ಅಂತರಂಗ ಧ್ಯಾನಕ್ಕೆ ಕೊಂಡೊಯ್ಯಬೇಕು. ಈ ಮಜಲಿನಲ್ಲಿ ಆತನು ಅಂತರಂಗದಲ್ಲಿಯೇ ನಿಕಟವಾಗಿ ಭಗವಂತನಿರುವನೆಂಬುದನ್ನು ಅನುಭವಿಸಲು ಕಲಿತಿರುತ್ತಾನೆ. ನಿಜವಾದ ಧರ್ಮ ಪ್ರಾರಂಭವಾಗುವುದು ಈ ಮಜಲಿನಲ್ಲಿಯೇ. ಹೃದಯವು ಪರಿಶುದ್ಧವಾಗುತ್ತಾ ಹೋದಂತೆ ಅಂತರಂಗದ ದೈವಶಕ್ತಿಯ ಆಕರ್ಷಣೆಯನ್ನು ಅನುಭವಿಸಲು ಸಾಧ್ಯವಾಗುತ್ತದೆ; ಧ್ಯಾನ ಕಾರ್ಯವು ಆನಂದದಾಯಕವಾಗುತ್ತದೆ. ಈ ಮಜಲಿನಲ್ಲಿ ಸಾಧನೆಯನ್ನು ತುಂಬಾ ಮುಂದುವರಿಸಿದಾಗ ಅದು ದೈವ ಕೃಪೆಯನ್ನು ಕೆಳಕ್ಕೆ ಆಕರ್ಷಿಸುತ್ತದೆ. ಹೀಗಾದಾಗ ಆತ್ಮವು ಮೂರನೆಯ ಮಜಲನ್ನು ಪ್ರವೇಶಿಸಿ ಸಂಪೂರ್ಣ ಸಾಕ್ಷಾತ್ಕಾರವನ್ನು ಪಡೆಯುತ್ತದೆ. ಸಾಧಕನು ಧ್ಯಾನದಲ್ಲಿರುವಾಗ ತನ್ನ ಅಂತರಂಗದಲ್ಲಿಯೂ, ಕರ್ಮರಂಗದಲ್ಲಿರುವಾಗ ಬಹಿರಂಗದಲ್ಲಿಯೂ ಭಗವಂತನನ್ನು ಕಾಣುತ್ತಾನೆ. ಭಾರತವು ಇದನ್ನು ಅಧ್ಯಾತ್ಮ ಸಾಧನೆಯೆಲ್ಲದರ ಹೆಗ್ಗುರಿ ಎಂದು ಭಾವಿಸುತ್ತದೆ.

**-ಸ್ವಾಮಿ ರಂಗನಾಥಾನಂದ** *('ಪರಿವರ್ತನಶೀಲ ಸಮಾಜಕ್ಕೆ ಶಾಶ್ವತ ಮೌಲ್ಯಗಳು', ಭಾಗ ೧, ಪು.೧೪೪)*

# ಸಾಧಕನ ಕೈದೀವಿಗೆ

ಸ್ವಾಮಿ ರಘುವೀರಾನಂದ

ಶ್ರೀರಾಮಕೃಷ್ಣ ಪರಮಹಂಸರ ನೇರ ಶಿಷ್ಯರಲ್ಲಿ ವೇದಾಂತದ ಆದರ್ಶಕ್ಕನುಗುಣವಾಗಿ ಅತ್ಯಂತ ಕಠಿಣ ತಪಸ್ಸು, ಶಾಸ್ತ್ರ ಅಧ್ಯಯನ, ಭಕ್ತಿ ಇವೆಲ್ಲವನ್ನೂ ಮೈಗೂಡಿಸಿಕೊಂಡು ಉನ್ನತ ಸಂತಜೀವನವನ್ನು ನಡೆಸಿದ ಮಹಾತ್ಮರು ಸ್ವಾಮಿ ತುರೀಯಾನಂದರು. ಅವರ ಉಪದೇಶಗಳ ಸಂಕಲನವೇ 'ಸಾಧಕನ ಕೈದೀವಿಗೆ.' ಈ ಕೃತಿಯ ಪರಿಚಯ ಮಾಡಿಕೊಟ್ಟಿರುವ ಸ್ವಾಮೀಜಿಯವರು ಗುಜರಾತಿನ ರಾಜ್‌ಕೋಟ್‌ನಲ್ಲಿರುವ ರಾಮಕೃಷ್ಣ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಆಧ್ಯಾತ್ಮಿಕ ಸಾಧಕನಿಗೆ ತನ್ನ ಸಾಧನೆಯ ಮಾರ್ಗದಲ್ಲಿ ಬರುವ ತೊಡಕುಗಳನ್ನು ಎದುರಿಸಲು ಮತ್ತು ಸರಿಯಾದ ಮಾರ್ಗದಲ್ಲಿ ಮುಂದುವರೆಯಲು ಒಬ್ಬ ಮಾರ್ಗದರ್ಶಿಯ ಆವಶ್ಯಕತೆ ತುಂಬಾ ಮುಖ್ಯ. ಈ ಮಾರ್ಗದರ್ಶಕನನ್ನು ಈಶ್ವರ, ಗುರು, ಆತ್ಮ ಮುಂತಾದ ಹೆಸರಿನಿಂದ ಕರೆಯುತ್ತೇವೆ. ಕತ್ತಲಲ್ಲಿ ನಡೆಯುವವನಿಗೆ ಕೈದೀವಿಗೆಯು ಹೇಗೆ ಮುಂದೆ ಹೆಜ್ಜೆ ಇಡಲು ಸಹಾಯಕವಾಗುತ್ತದೆಯೋ ಹಾಗೆಯೇ ಅಧ್ಯಾತ್ಮದ ಪಥದಲ್ಲಿ ಪಯಣಿಸುವ ಸಾಧಕನಿಗೆ ಧಾರ್ಮಿಕ ಗ್ರಂಥಗಳು ಮಾರ್ಗದರ್ಶಿಯಂತೆ ಸಹಾಯ ಮಾಡುತ್ತವೆ. ಇಂತಹ ಗ್ರಂಥಗಳಲ್ಲಿ **'ಸಾಧಕನ ಕೈದೀವಿಗೆ'** ನಮ್ಮ ಅಂತರಂಗದ ಬಾಗಿಲನ್ನು ತೆರೆದು ಹೃದಯಾಂತರಾಳದಲ್ಲಿ ಬೆಳಗುತ್ತಿರುವ ಜ್ಯೋತಿಯನ್ನು ಕಾಣಲು, ಅನುಭವಿಸಲು, ಅದರಿಂದ ಹೊಮ್ಮುವ ಆನಂದವನ್ನು ಸವಿಯಲು ಸಹಕರಿಸುವ ಅತ್ಯುತ್ತಮ ಗ್ರಂಥ.

ಸ್ವಾಮಿ ತುರೀಯಾನಂದರು ಶ್ರೀರಾಮಕೃಷ್ಣರ ನೇರ ಶಿಷ್ಯರುಗಳಲ್ಲಿ ಒಬ್ಬರು. ಅವರು ಬಹಿರಂಗ ಉಪನ್ಯಾಸಗಳನ್ನು ನೀಡುತ್ತಿರಲಿಲ್ಲ, ಯಾವ ಬಹಿರಾಡಂಬರವೂ ಇಲ್ಲದೇ ಶುದ್ಧ ಸತ್ತ್ವಗುಣದ ಮೂಲಕ ಬ್ರಹ್ಮ ತೇಜಸ್ಸಿನಲ್ಲಿ ರಾರಾಜಿಸುತ್ತಿದ್ದ ವ್ಯಕ್ತಿತ್ವ ಅವರದು.

ಯಾರಿಗೆ ಭಗವಂತನನ್ನು ಪಡೆಯಬೇಕೆಂಬ ತೀವ್ರ ವ್ಯಾಕುಲತೆ ಇರುವುದೋ ಅಂತಹವರು ಮಾತ್ರ ಇವರ ಉಪದೇಶದ ಉಪಯೋಗವನ್ನು ಪಡೆಯಬಹುದು. ಆಧ್ಯಾತ್ಮಿಕ ಜೀವನದ ಸಾಧನಾ ಪಥದಲ್ಲಿ ಬರುವ ಸಂಶಯ, ದೌರ್ಬಲ್ಯ, ಪ್ರಲೋಭನೆಗಳನ್ನು ದಾಟಿ ಮುಂದೆ ಸಾಗಲು ಸ್ವಾಮಿ ತುರೀಯಾನಂದಜಿಯವರಂತಹ ಒಬ್ಬ ಸಿದ್ಧ ಪುರುಷರ ಮಾರ್ಗದರ್ಶನ ಸಿಕ್ಕರೆ ಒಬ್ಬ ಸಾಧಾರಣ ಮನುಷ್ಯನು ಕೂಡ ಆತ್ಮ ಸಾಕ್ಷಾತ್ಕಾರದ ಮಾರ್ಗದಲ್ಲಿ ಮುಂದುವರಿದು ತನ್ನ ಗುರಿಯನ್ನು ತಲುಪಬಲ್ಲ. ಸ್ವಾಮಿ ತುರೀಯಾನಂದರು ಯಾವ ಪುಸ್ತಕವನ್ನೂ ಬರೆದಿಲ್ಲ. ಆದರೆ ಭಕ್ತರು ಹಾಗೂ ಶಿಷ್ಯರು ಕೇಳಿದ ಪ್ರಶ್ನೆಗಳಿಗೆ ಹೇಳಿದ ಉತ್ತರಗಳನ್ನು ಕೇಳಿದ ನಿಕಟವರ್ತಿಗಳು ಅವುಗಳನ್ನು ಪುಸ್ತಕದ ರೂಪದಲ್ಲಿ ಪ್ರಕಟಿಸಿದರು. 'ಸಾಧಕನ ಕೈದೀವಿಗೆ' ಗ್ರಂಥವು ಈ ಉತ್ತರಗಳ ಸಂಕಲನದ ಕನ್ನಡಾನುವಾದ. ಇಲ್ಲಿ ನಾವು ಸ್ವಾಮಿ ತುರೀಯಾನಂದರು ತಮ್ಮ ಶಿಷ್ಯರೊಂದಿಗೆ ಹಾಗೂ ಭಕ್ತರೊಂದಿಗೆ ನಡೆಸಿದ ಸಂಭಾಷಣೆಯನ್ನು ದಿನಾಂಕಗಳ ಸಮೇತ ನೋಡುತ್ತೇವೆ. ಇಂತಹ ಉಪದೇಶಗಳ ಕೆಲವು ಭಾಗಗಳನ್ನು ನೋಡೋಣ.



ಸ್ವಾಮಿ ತುರೀಯಾನಂದಜಿಯವರು, ಸಾಧಕನಾದವನು ಭಗವಂತನಲ್ಲಿ ಶರಣಾಗತಿ ಹೊಂದುವಂತೆ ಹೆಚ್ಚು ಒತ್ತಿ ಹೇಳುತ್ತಾರೆ. ''ನಿರಂತರವಾಗಿ ನಿನ್ನನ್ನು ಭಗವಂತನಿಗೆ ಅರ್ಪಿಸಿಕೋ'' ಎನ್ನುತ್ತಿದ್ದರು. ''ಅಹಂಕಾರವು ಮನುಷ್ಯನನ್ನು ವಿನಾಶದತ್ತ ಕೊಂಡೊಯ್ಯುತ್ತದೆ. ಕಾಮಕ್ರೋಧಾದಿ ವೈರಿಗಳ ಹೊಡೆತಕ್ಕೆ ಸಿಕ್ಕಿಸಿ ಬುದ್ಧಿಯನ್ನೇ ನಾಶಗೊಳಿಸುತ್ತದೆ. ಆದ್ದರಿಂದ ಸರ್ವಶಕ್ತನಾದ ಭಗವಂತನಲ್ಲಿ ಶರಣಾಗು. ಯಾವಾಗ ನಿನಗೆ 'ಕೇವಲ ಭಗವಂತನೇ ನನ್ನ ಸರ್ವಸ್ವ; ಐಶ್ವರ್ಯ, ಕೀರ್ತಿ, ಬಂಧುಗಳು ಇವೆಲ್ಲ ಯಾವ ಪ್ರಯೋಜನಕ್ಕೂ ಬಾರದವು' ಎನ್ನುವ ಭಾವನೆ ಬರುವುದೋ ಆಗ ನೀನು ಸರಿಯಾದ ದಾರಿಯಲ್ಲಿ ಹೋಗುತ್ತಿರುವೆ ಎಂದು ತಿಳಿದುಕೋ'' ಎನ್ನುತ್ತಿದ್ದರು. ಭಗವಂತನ ಸಾಕ್ಷಾತ್ಕಾರವಾಗಬೇಕಾದರೆ ಸಂಪೂರ್ಣವಾಗಿ ಕರ್ತೃತ್ವ ಬೋಧೆಯನ್ನು




ಬಿಡಬೇಕು. ಭಗವಂತನನ್ನು ಅಂತರ್ಯಾಮಿ, ಸರ್ವಜ್ಞ, ಸರ್ವ ವ್ಯಾಪಿ ಎಂದು ಕರೆಯುತ್ತೇವೆ. ಆದರೆ ಸಂಪೂರ್ಣ ಶರಣಾಗಲು ನಮಗೆ ಭಯ. ಕೇವಲ ಕಪಟ ಭಕ್ತಿಯಿಂದ ಆತನನ್ನು ಪಡೆಯಲು ಅವನೇನು ಮಗುವಿನ ಕೈಯಲ್ಲಿನ ಮಿಠಾಯಿಯಲ್ಲ ಎನ್ನುತ್ತಿದ್ದರು. ಶ್ರೀರಾಮಕೃಷ್ಣರು, 'ಅದ್ವೈತ ಜ್ಞಾನವನ್ನು ಪಡೆದ ಮೇಲೆ ನಿನ್ನಿಚ್ಛೆ ಬಂದಂತೆ ಮಾಡು' ಎನ್ನುತ್ತಿದ್ದರು.

''ನಿಜವಾದ ಭಕ್ತನು ಹೇ ಭಗವಂತ ಸರ್ವಸ್ವವೂ ನೀನೇ ಎನ್ನುತ್ತಾನೆ. ಎಲ್ಲವೂ ನಿನ್ನದೇ ಎನ್ನುತ್ತಾನೆ. ಇದು ಅದ್ವೈತವಲ್ಲದೆ ಇನ್ನೇನು? ಆದರೆ ಭಕ್ತನು ನಾನು ಭಗವಂತನಿಂದ ಬೇರೆ, ನಾನು ಸ್ವತಂತ್ರನು ಎಂದು ಭಾವಿಸಿದರೆ ಅದು ತುಂಬಾ ಹಾನಿಕರ. ಎಲ್ಲವೂ ಭಗವಂತನ ಇಚ್ಛೆಯಂತೆ ನಡೆಯುವುದು ಎಂದು ನಾವು ಸದಾ ನೆನಪಿನಲ್ಲಿಡಬೇಕು. ನಮ್ಮ ಅಹಂಕಾರದಿಂದ ಪಾರಾಗಿ ಎಷ್ಟು ಹೆಚ್ಚು ನಾವು, 'ಭಗವಂತನೇ ಕರ್ತ, ನಾವಲ್ಲ' ಎಂದು ಅರಿಯುತ್ತೇವೆಯೋ ಅಷ್ಟು ಹೆಚ್ಚು ನಮ್ಮ ಹೃದಯ ಶಾಂತಿಯಿಂದ ತುಂಬಿ ತುಳುಕಾಡುವುದು. ಭಗವಂತನ ಬಳಿಗೆ ಹೋಗಲು ನಾವು ಒಂದು ಹೆಜ್ಜೆಯನ್ನಿಟ್ಟರೆ ಆತ ನಮ್ಮೆಡೆಗೆ ಹತ್ತು ಹೆಜ್ಜೆಯನ್ನು ಇಡುವನು. ಪ್ರತಿಯೊಬ್ಬರೂ ಪ್ರಯತ್ನ ಪಡಲೇಬೇಕು. ಸೋಮಾರಿತನದಿಂದ ಏನೂ ಪ್ರಯೋಜನವಿಲ್ಲ. ಅದೊಂದು ಮಾನಸಿಕ ಜಾಡ್ಯ. ಮೊಸರಿನಿಂದ ಬೆಣ್ಣೆ ತೆಗೆದು ನಿಮ್ಮ ಬಾಯಿಯಲ್ಲಿ ಯಾರಾದರೂ ಇಡಬೇಕು ಎಂದು ಬಯಸುವಿರೇನು? ಯಾರು ನಿನಗಾಗಿ ಅದನ್ನು ಮಾಡಲಾರರು. ನಿನಗೆ ಹಸಿವಾಗಿದ್ದರೆ ನೀನು ಉಂಡರೆ ಮಾತ್ರ ನಿನ್ನ ಹಸಿವು ಇಂಗುವುದು. ಹಾಗೆ ನೀನೇ ಶ್ರಮಪಡಬೇಕು. ಕಷ್ಟಪಡಬೇಕು. ನೀನು ಆತನ ಸಾಕ್ಷಾತ್ಕಾರವನ್ನು ಖಂಡಿತವಾಗಿ ಪಡೆಯಬಲ್ಲೆ. ಭಗವಂತನಿಗಾಗಿ ಅಳು. ಅವನಿಗಾಗಿ ತಹತಹಿಸು. ಹೃತ್ಪೂರ್ವಕವಾಗಿ ನಿನ್ನ ಅಂತರಂಗದ ವೇದನೆಯನ್ನು ನಿವೇದಿಸು. ಭಗವಂತ ನಿನ್ನ ಪ್ರಾರ್ಥನೆಯನ್ನು ಕೇಳಿಯೇ ಕೇಳುತ್ತಾನೆ.''

ಸ್ವಾಮಿ ತುರೀಯಾನಂದರು ಧ್ಯಾನದ ಬಗ್ಗೆ ತಮ್ಮ ಮಾತನ್ನು ಮುಂದುವರೆಸುತ್ತ ಹೇಳುತ್ತಾರೆ: ''ನಿಜವಾದ ಧ್ಯಾನದಲ್ಲಿ ಧ್ಯಾತೃ, ಧ್ಯಾನ, ಧ್ಯೇಯ ಇವು ಮೂರೂ ಒಂದಾಗಿ ಅಭಿನ್ನತೆಯ ಅನುಭವವಾಗುತ್ತದೆ. ನಾನು ಎಂಬ ಭಾವ ಯಾವಾಗ ಭಗವದ್ಭಾವದಲ್ಲಿ ಒಂದಾಗುವುದೋ ಆಗ ನಿಜವಾದ ಧ್ಯಾನ ಸ್ಥಿತಿಯನ್ನು ತಲುಪಬಹುದು. ಜ್ಞಾನಿಗಳು ಶಿರದಲ್ಲಿ ಅಂದರೆ ಸಹಸ್ರಾರ ಪದ್ಮದಲ್ಲಿ ಧ್ಯಾನಿಸುವರು. ಭಕ್ತರು ಹೃದಯಕಮಲದಲ್ಲಿ ಧ್ಯಾನಿಸುವರು. ಆದರೆ ಯಾರ ಆಧ್ಯಾತ್ಮಿಕ ಪ್ರಜ್ಞೆ ಧ್ಯಾನದ ಮೂಲಕ ವೃದ್ಧಿಯಾಗುತ್ತದೆಯೋ ಅವರಿಗೆ ನಿರ್ದಿಷ್ಟ ಸ್ಥಾನ ಬೇಕಾಗಿಲ್ಲ. ನಿರಾಯಾಸವಾಗಿ ಅವರ ಮನಸ್ಸು ಅಖಂಡ ಪರಬ್ರಹ್ಮನಲ್ಲಿ ಲೀನವಾಗುತ್ತದೆ. ಯಾರಿಗೆ ಧ್ಯಾನ ಸಾಧ್ಯವಿಲ್ಲವೋ ಅವರು ಜಪದ ಮೂಲಕವೂ ಸಾಧನೆ ಮಾಡಬಹುದು. ಯಾವ ಪ್ರಯತ್ನವೂ ಇಲ್ಲದೆ ನಮ್ಮ ಮನಸ್ಸಿನ ಒಂದು ಭಾಗವು ಯಾವಾಗ ಸದಾ ತನ್ನಷ್ಟಕ್ಕೆ ತಾನೇ ಮಂತ್ರ ಪುರಶ್ಚರಣೆ ಮಾಡುವದೋ ಆಗ ಜಪಸಿದ್ಧಿಗೆ ನಾವು ಬಹಳ ಹತ್ತಿರವಾಗುತ್ತೇವೆ.''

ಒಬ್ಬ ಶಿಷ್ಯನು ಕೇಳುತ್ತಾನೆ, ''ಭಗವಂತನ ಬಳಿಗೆ ಹೋಗುವ ಮಾರ್ಗದಲ್ಲಿ ಮುಂದುವರೆದಿದ್ದೇವೆಯೋ ಇಲ್ಲವೋ ಎಂದು ಗೊತ್ತಾಗುವುದು ಹೇಗೆ?'' ಅದಕ್ಕೆ ತುರೀಯಾನಂದರು ಹೇಳುತ್ತಾರೆ, ''ಕಾಮ, ಕ್ರೋಧ, ಲೋಭ ಮುಂತಾದವುಗಳು ಕುಂದುವವು. ಅವನಲ್ಲಿ ವಿಷಯಾಸಕ್ತಿ, ಅಹಂಕಾರ, ಮಮಕಾರಗಳು ಕಡಿಮೆಯಾಗುತ್ತವೆ'' ಎಂದು. ''ಒಬ್ಬನು ದಿನವೆಲ್ಲಾ ಹೊಲಕ್ಕೆ ನೀರು ಹಾಯಿಸಬಹುದು. ಆದರೆ ಹೊಲದಲ್ಲಿ ರಂಧ್ರಗಳಿದ್ದರೆ ಅದರಲ್ಲಿ ಎಲ್ಲಾ ನೀರು ಸೋರಿಹೋಗುತ್ತದೆ. ಹಾಗೆ ನಾಮ ಜಪ, ಪುರಶ್ಚರಣೆಗಳನ್ನು ಮಾಡಬಹುದು. ಆದರೆ ವಿಷಯಾಸಕ್ತಿ, ಮೋಹ ಮುಂತಾದ ಮಾನಸಿಕ ದೌರ್ಬಲ್ಯಗಳಿದ್ದರೆ ಅವನ ಸಾಧನೆ ಫಲಕಾರಿಯಾಗಿರುವುದಿಲ್ಲ. ಕೇವಲ ಕಾಟಾಚಾರಕ್ಕೆ ನೀನು ಸಾಧನೆ ಮಾಡುವಂತೆ ತೋರಿಸಿಕೊಂಡರೆ ಏನೂ ಪ್ರಯೋಜನವಿಲ್ಲ. ಉದಾಹರಣೆಗೆ; ಒಬ್ಬ ಮನುಷ್ಯ ಹೆಂಡದ ಅಂಗಡಿಯ ಹತ್ತಿರ ವಾಸವಾಗಿದ್ದ. ಬೇಡವಾದ ಮಡಕೆಗಳನ್ನು ಆ ಹೆಂಡದ ಅಂಗಡಿಯವನು ಪಕ್ಕದಲ್ಲಿ ಬಿಸಾಡುತ್ತಿದ್ದ. ಈ ಮನುಷ್ಯನು ದಿನಾಲು ಹೋಗಿ ಆ ಮಡಕೆಗಳನ್ನು ಒಂದು ಕೋಲಿನಿಂದ ಒಡೆಯುತ್ತಿದ್ದ. ಬೆವರು ಸುರಿಸುತ್ತ ಹೇಳುತ್ತಿದ್ದ; ಇನ್ನು ನನ್ನಿಂದ ಈ ಕೆಲಸ ಸಾಧ್ಯವಿಲ್ಲ; ಹೀಗೆ ಪುನಃ ಪುನಃ ಅವನು ಯಾವ

ಪ್ರಯೋಜನಕ್ಕೂ ಬಾರದ ಆ ಮಡಕೆ ಒಡೆಯುವ ಕೆಲಸವನ್ನು ಮಾಡುತ್ತಿದ್ದ. ಇಂತಹ ಶ್ರಮದಿಂದ ಯಾವ ಪ್ರಯೋಜನವೂ ಇಲ್ಲ. ಆಧ್ಯಾತ್ಮಿಕ ಜೀವನದಲ್ಲಿ ಮುಂದುವರೆಯಬೇಕೆಂಬ ಸಾಧಕನು ಪರನಿಂದೆಯನ್ನು ವರ್ಜಿಸಬೇಕು.''

ಒಮ್ಮೆ ಸ್ವಾಮಿ ತುರೀಯಾನಂದಜಿಯವರು ಪುರಿಯಲ್ಲಾದ ಒಂದು ಅದ್ಭುತ ಅನುಭವವನ್ನು ವರ್ಣಿಸುತ್ತಾರೆ. ಅವರ ಮಾತಿನಲ್ಲಿಯೇ ಕೇಳೋಣ: ''ಆಗ ನನ್ನ ದೇಹದಲ್ಲಿ ಮೂಳೆಚಕ್ಕಳ ಬಿಟ್ಟರೆ ಮತ್ತೇನೂ ಇರಲಿಲ್ಲ. ನನಗೆ ಪಕ್ಕಕ್ಕೆ ತಿರುಗಲಿಕ್ಕಾಗಲಿ, ಕೈಕಾಲು ಗಳನ್ನು ಅಲ್ಲಾಡಿಸುವುದಕ್ಕಾಗಲಿ ತ್ರಾಣವಿರಲಿಲ್ಲ. ಕೇವಲ ವಾಕ್‌ಶಕ್ತಿ ಮಾತ್ರ ಉಳಿದುಕೊಂಡಿತ್ತು. ಒಂದು ದಿನ ನನ್ನ ದೇಹದಲ್ಲಿದ್ದ ಜೀವ ಹೊರಗಡೆಯಲ್ಲಿದ್ದ ಇನ್ನೊಂದು ಜೀವದೊಡನೆ ಭಯಂಕರ ಕಾದಾಟದಲ್ಲಿರುವುದನ್ನು ಕಂಡೆ. ಕದನ ಉಗ್ರವಾಗಿತ್ತು. ಅವರು ಒಬ್ಬರಿಗೊಬ್ಬರು ಪಟ್ಟುಹಿಡಿದು ಯುದ್ಧ ಮಾಡುತ್ತಿದ್ದರು. ಈಗ ಒಂದು, ಮುಂದಿನ ಘಳಿಗೆ ಇನ್ನೊಂದು ಜಯಿಸುವಂತೆ ಕಾಣುತ್ತಿತ್ತು. ಬಾಹ್ಯದಲ್ಲಿರುವ ಜೀವ ನನ್ನ ದೇಹದಲ್ಲಿರುವ ಜೀವ ವನ್ನು ಕಸಿದುಕೊಳ್ಳಲು ಹೋರಾಡುತ್ತಿತ್ತು. ಆದರೆ ಈ ಜೀವ ಹೋಗುತ್ತಿರಲಿಲ್ಲ. ಕಟ್ಟಕಡೆಗೆ ಬಾಹ್ಯಜೀವ ಸೋತು ಹೊರಟು ಹೋಯಿತು. ನಾನು ದೂರದಿಂದ ಈ ಯುದ್ಧವನ್ನು ಆಶ್ಚರ್ಯದಿಂದ ನೋಡುತ್ತಿದ್ದೇನೆಂದು ಭಾಸವಾಗುತ್ತಿತ್ತು. ನಾನು ನನ್ನ ಹತ್ತಿರವಿದ್ದವರಿಗೆ ಹೇಳಿದೆ ಈ ಬಾರಿ ನಾನು ಉಳಿದೆ. ಸಾಯುವುದಿಲ್ಲ ಎಂದು. ನಂತರ ಸ್ವಾಮಿ ವಿವೇಕಾನಂದರು ನನಗೆ ಗೋಚರಿಸಿ, 'ಇದೇನು, ಮೇಲಕ್ಕೆ ಎದ್ದೇಳು' ಎಂದರು.''

ಒಬ್ಬ ಶಿಷ್ಯನು ಕಾಮದ ವಿಷಯವಾಗಿ ಪ್ರಶ್ನಿಸಿದನು. ಅದಕ್ಕೆ ಸ್ವಾಮಿ ತುರೀಯಾನಂದಜಿಯವರು ಉತ್ತರಿಸುತ್ತ, ''ಅದರ ಹಿಂದೆ ಏನೋ ಮನಃಶಾಸ್ತ್ರವಿದೆ. ಅದಾವುದು? ಅದೇ ಏಕತ್ವವನ್ನು ಪಡೆಯಬೇಕೆಂಬಾಸೆ. ಅಂತಹ ಪ್ರೇಮದ ಒಂದು ಸ್ವರೂಪವೇ ಕಾಮ. ಆದರೆ ಜನ ಅದನ್ನು ತಪ್ಪಾಗಿ ತಿಳಿಯುವರು. ಅವರು ಸ್ಥೂಲದಿಂದ ಪ್ರಾರಂಭಿಸುವರು. ಅದಕ್ಕೇ ಪವಿತ್ರ ವಸ್ತುವಾದ ಭಗವಂತನ ಬಳಿಗೆ ಹೋಗಲು ಅಸಮರ್ಥರಾಗುವರು. ಹಾಗೂ ಕೆಲವರು ಇದರ ಮೂಲಕವೂ ಭಗವತ್ಸಾಕ್ಷಾತ್ಕಾರ ಪಡೆದಿದ್ದಾರೆ. ಉದಾಹರಣೆಗೆ ಚಂಡೀದಾಸ, ಬಿಲ್ವಮಂಗಲ, ತುಳಸೀದಾಸ ಇತ್ಯಾದಿ. ಕಾಮ, ಕ್ರೋಧ, ಅಂಜಿಕೆ, ವ್ಯಾಮೋಹ ಇವುಗಳಲ್ಲಿ ಯಾವುದಾದರೊಂದರಿಂದ ಬೇಕಾದರೂ ಏಕಾಗ್ರತೆಯನ್ನು ಪಡೆಯಬಹುದು. ಗೋಪಿಯರು, ಕಂಸ, ಶಿಶುಪಾಲ ಹಾಗೂ ಯಶೋದೆಯಲ್ಲಿದ್ದಂತೆ. ''

**ಕಾಮಃ ಕ್ರೋಧಂ ಭಯಂಸ್ನೇಹಮೈಕ್ಯಂ ಸೌಹೃದಮೇವ ಚ ।**
**ನಿತ್ಯಂ ಹರೌ ವಿದಧತೋ ಯಾಂತಿ ತನ್ಮಯತಾಂ ಹಿ ತೇ ॥**

'ಕಾಮ, ಕ್ರೋಧ, ಭಯ, ವ್ಯಾಮೋಹ ಸ್ನೇಹ ಮತ್ತು ಸಖ್ಯ ಇವುಗಳಲ್ಲಿ ಯಾವುದಾದರೊಂದು ಭಾವನೆಯನ್ನು ಭಗವಂತನಲ್ಲಿ ಬೆಳೆಸಿದರೂ ಅವರು ನಿಸ್ಸಂದೇಹವಾಗಿ ಭಗವಂತನಲ್ಲಿ ಏಕಾಗ್ರತೆಯನ್ನು ಪಡೆಯುವರು.' ಆದರೆ ಮನಸ್ಸು ಪರಿಶುದ್ಧವಾಗಿರಬೇಕು. ಯಾರು ನಾಲಗೆಯ ರುಚಿ ಮತ್ತು ಕಾಮಪ್ರವೃತ್ತಿ ಇವುಗಳನ್ನು ಅಂಕೆಯಲ್ಲಿ ಇಟ್ಟುಕೊಳ್ಳಲು ಸಮರ್ಥನೋ ಅವನು ಎಲ್ಲಿ ಬೇಕಾದರೂ ಸುಖವಾಗಿರಬಹುದು.

**ಪೃಥಿವ್ಯಾಂ ಯಾನಿ ಭೂತಾನಿ ಜಿಹ್ವೋಪಸ್ಥನಿಮಿತ್ತಕಮ್ ।**
**ಜಿಹ್ವೋಪಸ್ಥ ಪರಿತ್ಯಾಗೇ ಪೃಥಿವ್ಯಾಂ ಕಿಂ ಪ್ರಯೋಜನಮ್ ॥**

'ಜಗತ್ತಿನಲ್ಲಿ ಪ್ರತಿಯೊಂದು ಜೀವಿಯೂ ನಾಲಿಗೆ ಮತ್ತು ಕಾಮತೃಪ್ತಿಗಾಗಿ ಹುಡುಕುತ್ತಿದೆ. ಯಾರು ಇವುಗಳ ಹಂಬಲವನ್ನು ಬಿಡುವರೋ ಅವರಿಗೆ ಪ್ರಪಂಚದಲ್ಲಿ ಯಾವುದರಿಂದ ತಾನೆ ಏನು ಪ್ರಯೋಜನ?'

**ತಾವಜ್ಜಿತೇಂದ್ರಿಯೋ ನಸ್ಯಾದ್ವಿಜಿತಾನ್ಯೇಂದ್ರಿಯಃ ಪುಮಾನ್॥**
**ನ ಜಯೇದ್ರಸನಂ ಯಾವಜ್ಜಿತಂ ಸರ್ವಂ ಜಿತೇ ರಸೇ ॥**

'ಯಾರು ನಾಲಿಗೆಯ ವಿನಹ ಇತರ ಇಂದ್ರಿಯಗಳನ್ನು ನಿಗ್ರಹಿಸುವರೋ ಅವನನ್ನು ಜಿತೇಂದ್ರಿಯನೆನ್ನಲಾಗುವುದಿಲ್ಲ. ರುಚಿಯನ್ನು ಗೆದ್ದರೆ ಎಲ್ಲವನ್ನೂ ಗೆದ್ದಂತೆ.'

**ಇಂದ್ರಿಯಾಣಾಂ ಹಿ ಸರ್ವೇಷಾಂ ಯದ್ಯೇಕಂ ಕ್ಷರತೀಂದ್ರಿಯಂ।**
**ತದಸ್ಯ ಕ್ಷರತಿ ಪ್ರಜ್ಞಾಂ ಧೃತೇಃ ಪಾತ್ರಾದಿವೋದಕಂ ॥**

'ಕೇವಲ ಒಂದು ಇಂದ್ರಿಯವನ್ನು ಅಂಕೆಯಲ್ಲಿ ಇಟ್ಟುಕೊಳ್ಳಲಾರದೇ ಹೋದರೂ ಬಿರುಕು ಬಿಟ್ಟ ಮಣ್ಣಿನ ಹೂಜಿಯಲ್ಲಿದ್ದ ನೀರು ಸೋರಿ ಹೋಗುವಂತೆ ಸಾಧಕನ ಜ್ಞಾನಾರ್ಜನೆಯೆಲ್ಲ ವ್ಯರ್ಥವಾಗುವುದು.'

ಅನುಕೂಲ ಪರಿಸ್ಥಿತಿಗಾಗಿ ಕಾಯುವುದು ಒಂದು ಭ್ರಾಂತಿ. ವ್ಯರ್ಥ. ಈಗ ಇಲ್ಲವೋ ಎಂದಿಗೂ ಇಲ್ಲ. ಸಂಪೂರ್ಣ ನಮ್ಮ ಮನಸ್ಸನ್ನು ಒಂದು ಕಾರ್ಯದಲ್ಲಿ ತೊಡಗಿಸಿದರೆ ಪ್ರತಿಕೂಲ ಪರಿಸ್ಥಿತಿಗಳೂ ಅನುಕೂಲವಾಗಿ ಪರಿವರ್ತನೆಗೊಳ್ಳುವವು.

**ಯ ಇಚ್ಛತಿ ಹರಿಂ ಸ್ಮರ್ತುಂ ವ್ಯಾಪಾರಸ್ತಗತ್ಯೈರಪಿ ।**
**ಸಮುದ್ರೇ ಶಾಂತಕಲ್ಲೋಲೇ ಸ್ನಾತುಮಿಚ್ಛತಿ ದುರ್ಮತಿಃ ॥**

'ಯಾರು ತನ್ನ ಕೆಲಸವನ್ನೆಲ್ಲಾ ಪೂರೈಸಿದ ಮೇಲೆ ಭಗವಂತನನ್ನು ಸ್ಮರಿಸುತ್ತೇನೆ ಎಂದು ಆಲೋಚಿಸುವನೋ ಅವನು ಸಮುದ್ರದ ಅಲೆಗಳನ್ನೆಲ್ಲಾ ನಿಂತ ಮೇಲೆ ಸ್ನಾನ ಮಾಡಬೇಕೆಂದು ಯೋಚಿಸುವ ಮೂಢನಂತೆ.'

ಅಭ್ಯಾಸ ಬಲದಿಂದ ಸದಾ ಭಗವಂತನ ಸ್ಮರಣೆ ಮಾಡುತ್ತಿರಬೇಕು. ಮೌನ, ನಿರಂತರ ಪ್ರಾರ್ಥನೆ ಮತ್ತು ಧ್ಯಾನದಿಂದ ಮನಸ್ಸಿನಲ್ಲಿ ಒಂದು ಅಂತರಂಗ ಪ್ರವಾಹ ಉದ್ಭವಿಸಿ ಎಲ್ಲಾ ಕಾಲಗಳಲ್ಲಿಯೂ, ನಿದ್ರೆಯಲ್ಲಿಯೂ ಕೂಡ ಹರಿಯುತ್ತಿರುವುದು. ಈ ರೀತಿ ಉದ್ಭವಿಸಿದ ಝರಿ ಅಂತರಂಗದಲ್ಲಿ ಅತಿ ಸೂಕ್ಷ್ಮವಾಗಿ ಕೆಲಸ ಮಾಡುತ್ತಾ ಬಹಳ ಪರಿಣಾಮಕಾರಿಯಾಗಿರುವುದು.

ಬ್ರಹ್ಮಜ್ಞಾನದ ವಿಚಾರವಾಗಿ ಸಂಭಾಷಿಸುತ್ತಾ ಸ್ವಾಮಿ ತುರೀಯಾನಂದಜಿಯವರು ಹೇಳಿದರು: ''ಬ್ರಹ್ಮಜ್ಞಾನದ ವಿಚಾರ ಸಾಧಾರಣ ಅಲ್ಪ ಬುದ್ಧಿಯ ಮನುಷ್ಯನಿಗೆ ಅರ್ಥವಾಗುವುದಿಲ್ಲ. ಜಗತ್ತು ಬದಲಾಯಿಸುತ್ತಿರುವುದು. ಪೂರ್ಣವಾಗಿ ತೆಗೆದುಕೊಂಡರೆ ಬ್ರಹ್ಮನೊಬ್ಬನೇ ಇರುವುದು. ನಾವು ಬ್ರಹ್ಮ ಸಚ್ಚಿದಾನಂದ ಎಂದರೆ, ಬ್ರಹ್ಮ ಅದೇ ಎಂದರ್ಥವಲ್ಲ. ಅದು ಅತ್ಯಂತ ಹತ್ತಿರದ ಅಂದಾಜು. ಬ್ರಹ್ಮ ಅಸತ್ಯವಲ್ಲ, ಅಜ್ಞಾನವಲ್ಲ , ದುಃಖವಲ್ಲ ಎಂದು ವಿವರಿಸುತ್ತೇವೆ. ಆದರೆ ನಿಜವಾಗಿ ಹೇಳುವುದಾದರೆ ಬ್ರಹ್ಮನು ಮನೋವಾಕ್ಕುಗಳಿಗೆ ಅತೀತ.

''ಸಾಕ್ಷಾತ್ಕಾರ! ಓ! ಅದೆಷ್ಟು ಅದ್ಭುತವಾದದ್ದು! ಭಗವಂತನನ್ನು ಪ್ರತ್ಯಕ್ಷವಾಗಿ ಕಂಡವರ ಆನಂದವನ್ನು ಅಳೆಯಲು ಯಾರಿಗೆ ತಾನೆ ಸಾಧ್ಯ! ಅಖಂಡ ಸಚ್ಚಿದಾನಂದಾಮೃತದಿಂದ ತುಂಬಿರುವ ಬ್ರಹ್ಮ ಸಾಗರದಲ್ಲಿ ಯಾವುದನ್ನು ವರ್ಜಿಸಬೇಕು, ಯಾವುದನ್ನು ಸ್ವೀಕರಿಸಬೇಕು? ನಮಗಿಂತ ಬೇರೆ ಯಾವುದಿರುವುದು? ಭಿನ್ನವಾದುದು ಏನು? ಇದರಲ್ಲಿ ನಾನಾವುದನ್ನೂ ನೋಡುವುದಿಲ್ಲ. ಕೇಳುವುದಿಲ್ಲ. ನಾನು ಆತ್ಮ, ಶಾಶ್ವತ ಆನಂದದಂತೆ. ಪ್ರಪಂಚದ ವಸ್ತುಗಳಿಂದ ಬೇರೆಯಾಗಿರುವೆ.''

ಹೀಗೆ ಸ್ವಾಮಿ ತುರೀಯಾನಂದರು ಇನ್ನೂ ಅನೇಕ ವಿಷಯಗಳನ್ನು ಸಾಧಕರಿಗೆ ಉಪಯುಕ್ತವಾಗುವಂತೆ ಸರಳವಾದ ಭಾಷೆಯಲ್ಲಿ ವಿವರಿಸುತ್ತಾರೆ. **'ಸಾಧಕನ ಕೈದೀವಿಗೆ'** ಚಿಕ್ಕ ಗ್ರಂಥವಾದರೂ ವಿವಿಧ ಮನಸ್ಥಿತಿಯುಳ್ಳ, ಎಲ್ಲ ವಯಸ್ಸಿನ ಸಾಧಕರಿಗೂ ಪ್ರಯೋಜನವಾಗುವಂತಹುದು. ಇದು ಅನುಷ್ಠಾನ ಪ್ರಧಾನ ಗ್ರಂಥ. ಒಬ್ಬ ಬ್ರಹ್ಮಜ್ಞಾನಿಯು ತನ್ನ ಅನುಭವಗಳ ಆಧಾರದ ಮೂಲಕ ಹೊತ್ತಿಸಿದ ದೀಪದ ಸಹಾಯದಿಂದ ಪ್ರಾಮಾಣಿಕ ಸಾಧಕರಿಗೆ ಮಾರ್ಗದರ್ಶನ ನೀಡುತ್ತಾನೆ. ಈ ದೀಪದ ಬೆಳಕಿನಲ್ಲಿ ನಾವೆಲ್ಲರೂ ಮುಂದೆ ಸಾಗೋಣ, ಬನ್ನಿ. ✤

## ನಾಮಬೀಜದ ಶಕ್ತಿ

ಶಿಷ್ಯನು ಒಂದು ದಿನ ಶ್ರೀಮಾತೆಗೆ ಒಂದು ಆಲದ ಬೀಜವನ್ನು ತಂದು ತೋರಿಸಿ ಹೇಳಿದ, ''ಅಮ್ಮಾ, ನೋಡಿದಿರಾ? ಹರಿವೆ ಸೊಪ್ಪಿನ ಕಾಳಿಗಿಂತಲೂ ಸಣ್ಣ ಬೀಜ ಇದರದು. ಇದರಿಂದ ಎಷ್ಟೊಂದು ದೊಡ್ಡ ಮರವಾಗುತ್ತದೆ! ಏನಾಶ್ಚರ್ಯ!'' ಅದಕ್ಕೆ ಶ್ರೀಮಾತೆ, '' ಅಲ್ಲವೇ ಮತ್ತೆ ? ನೋಡು, ಭಗವಂತನ ನಾಮದ ಬೀಜ ಎಷ್ಟು ಸಣ್ಣದು? ಅದರಿಂದಲೇ ಕಾಲಕ್ರಮದಲ್ಲಿ ಭಾವ, ಭಕ್ತಿ, ಪ್ರೇಮ ಇತ್ಯಾದಿಗಳೆಲ್ಲ ಉಂಟಾಗುವವು.''

*– 'ಶ್ರೀಶಾರದಾದೇವಿ ವಚನವೇದ' ದಿಂದ (ಪು.೨೪೧)*

# ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ

ಸ್ವಾಮಿ ಜ್ಞಾನಸುಧಾನಂದ

'ಆಧ್ಯಾತ್ಮಿಕ ಸಾಧನೆಯ ಅತ್ಯುತ್ತಮ ಆಕರ ಗ್ರಂಥ'ವೆಂದೇ ಪ್ರಸಿದ್ಧವಾದ ಸ್ವಾಮಿ ಯತೀಶ್ವರಾನಂದರ **'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ'** ಕೃತಿಯು, ಸಾಧನೆಯ ಕ್ಷೇತ್ರದಲ್ಲಿ ಆರಂಭಿಕರಿಗೂ, ಅತ್ಯುನ್ನತ ಹಂತದ ಸಾಧಕರಿಗೂ ಉಪಯುಕ್ತವೆನಿಸುವ ಹಲವು ಪ್ರಾಯೋಗಿಕ ಸಂಗತಿಗಳನ್ನು ಒಳಗೊಂಡಿದೆ. ಇದನ್ನು ಪರಿಚಯಿಸಿ ಕೊಟ್ಟಿರುವ ಲೇಖಕರು ರಾಮಕೃಷ್ಣ ಮಹಾಸಂಘದ ಪ್ರಧಾನ ಕೇಂದ್ರವಾದ ಬೇಲೂರು ಮಠದಲ್ಲಿ ಸೇವಾನಿರತರಾಗಿದ್ದಾರೆ.



ನಾವು ಒಂದು ಬೆಲೆಬಾಳುವ ಇಲೆಕ್ಟ್ರಾನಿಕ್ ಯಂತ್ರವನ್ನು ಖರೀದಿಸಿ ಮನೆಗೆ ತಂದರೆ ಅದನ್ನು ಚಾಲನೆಗೊಳಿಸುವ ಮೊದಲು ಅದರ ಕೈಪಿಡಿಯನ್ನು (user guide) ಎಚ್ಚರಿಕೆಯಿಂದ ಓದುತ್ತೇವೆ. ಆ ಯಂತ್ರವನ್ನು ಸರಿಯಾಗಿ ಉಪಯೋಗಸುವ ವಿಧಿ ವಿಧಾನಗಳು ಆ ಕೈಪಿಡಿಯಲ್ಲಿ ಇರುತ್ತವೆ. ಕೈಪಿಡಿಯನ್ನು ಓದದೆ ನೇರವಾಗಿ ಯಂತ್ರವನ್ನು ಉಪಯೋಗಿಸಲು ಹೊರಟರೆ ನಷ್ಟ ಅನುಭವಿಸಬೇಕಾಗಬಹುದು. ಹೀಗೆಯೇ ಆಧ್ಯಾತ್ಮಿಕ ಜೀವನವೆಂಬುವುದು ಬಹಳ ಸೂಕ್ಷ್ಮವಾದದ್ದು ಮತ್ತು ಅತಿ ಹೆಚ್ಚಿನ ಮೌಲ್ಯವುಳ್ಳದ್ದು. ಇದರಲ್ಲಿ ಮುಂದುವರಿಯಬೇಕೆಂಬುವರಿಗೆ ನಿರ್ದಿಷ್ಟವಾದ ಮಾರ್ಗದರ್ಶನದ ಆವಶ್ಯಕತೆಯಿದೆ. ಈ ಮಾರ್ಗದರ್ಶನವನ್ನು ಗುರುವಿನ ಮೂಲಕ ಅಥವಾ ಕೆಲಮಟ್ಟಿಗೆ ಸದ್ಗ್ರಂಥಗಳ ಮೂಲಕ ಸಾಧಕರು ಪಡೆಯಬಹುದು. ಪ್ರಸ್ತುತ ಲೇಖನದ ವಿಷಯವಾದ **'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ'** ಗ್ರಂಥವು ಸಾಧಕರ ಮಾರ್ಗದರ್ಶನಕ್ಕಾಗಿಯೇ ರಚಿಸಲ್ಪಟ್ಟ ಒಂದು ಉದ್ಗ್ರಂಥ.

## ಗ್ರಂಥಕರ್ತರು

ಪೂಜ್ಯ ಸ್ವಾಮಿ ಯತೀಶ್ವರಾನಂದರ (೧೮೮೯-೧೯೬೬) ಉಪದೇಶಗಳ ಸಂಕಲನವಾದ ಈ ಕೃತಿಯು ವೈಶಿಷ್ಟ್ಯಪೂರ್ಣವಾದದ್ದು. ಪೂಜ್ಯರು ಶ್ರೀರಾಮಕೃಷ್ಣರ ಮಾನಸಪುತ್ರರೆಂದೆ ಖ್ಯಾತರಾದ ಸ್ವಾಮಿ ಬ್ರಹ್ಮಾನಂದರ ನೆಚ್ಚಿನ ಶಿಷ್ಯರು. ತಮ್ಮ ೨೨ನೆಯ ವಯಸ್ಸಿನಲ್ಲಿಯೇ ಭಗವದನುರಾಗಿಗಳಾಗಿ ರಾಮಕೃಷ್ಣ ಮಠವನ್ನು ಸೇರಿ ಸ್ವಾಮಿ ಬ್ರಹ್ಮಾನಂದರಂತಹ ಆಧ್ಯಾತ್ಮಿಕ ಜಗತ್ತಿನ ದಿಗ್ಗಜರಿಂದ ಮಂತ್ರದೀಕ್ಷೆ, ಸಾಧನೆಯಲ್ಲಿ ತರಬೇತಿಯನ್ನು ಪಡೆಯುವ ಸದವಕಾಶವನ್ನು ಪಡೆದವರು. ತಮ್ಮ ನಿಷ್ಠೆ ಹಾಗು ಸತತ ಪ್ರಯತ್ನದಿಂದ ಈ ಅವಕಾಶದ ಪೂರ್ಣ ಲಾಭವನ್ನು ಅವರು ಮಾಡಿಕೊಂಡರು ಎಂಬುದು ಮುಂದಿನ ಅವರ ಜೀವನ ಹಾಗೂ ವ್ಯಕ್ತಿತ್ವವನ್ನು ಗಮನಿಸಿದಾಗ ನಿಸ್ಸಂದೇಹವಾಗಿ ತೋರಿಬರುತ್ತದೆ.

ಸ್ವಾಮಿ ಯತೀಶ್ವರಾನಂದರು ೧೯೩೩ರಲ್ಲಿ ವೇದಾಂತ ಪ್ರಚಾರಕ್ಕಾಗಿ ಜರ್ಮನಿಗೆ ಹೋದರು. ಸುಮಾರು ಹದಿನೇಳು ವರ್ಷಗಳ ಕಾಲ ಅವರು ಯೂರೋಪಿನ ವಿವಿಧ ದೇಶಗಳಲ್ಲಿ ಅನಂತರ ಅಮೆರಿಕಾದಲ್ಲಿ ವೇದಾಂತದ ಸಂದೇಶವನ್ನು ಹರಡಿ ೧೯೫೦ರಲ್ಲಿ ಭಾರತಕ್ಕೆ ಮರಳಿದರು. ಮರುವರ್ಷ ಕನ್ನಡಿಗರ ಸೌಭಾಗ್ಯವೆಂಬಂತೆ ಬೆಂಗಳೂರು ರಾಮಕೃಷ್ಣ ಮಠದ (ಆಗ ಅದರ ಹೆಸರು ರಾಮಕೃಷ್ಣ ಆಶ್ರಮ ಎಂದಿತ್ತು) ಅಧ್ಯಕ್ಷರಾದರು. ಮುಂದೆ ೧೯೬೨ರಲ್ಲಿ ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಾಗಿ ಚುನಾಯಿತರಾದ ಪೂಜ್ಯರು ಕೇವಲ ನಾಲ್ಕು ವರ್ಷಗಳ ಕಾಲ ಆ ಪದವಿಯನ್ನು ಅಲಂಕರಿಸಿ ೧೯೬೬ರಲ್ಲಿ ಮಹಾಸಮಾಧಿಯನ್ನು ಹೊಂದಿದರು.

## ಗ್ರಂಥದ ಉಗಮ ಮತ್ತು ವಿನ್ಯಾಸ

ಸ್ವಾಮಿ ಯತೀಶ್ವರಾನಂದರು ಯೂರೋಪಿನಲ್ಲಿ ನೆಲಸಿದ ಆರು ವರ್ಷದ ಅವಧಿಯಲ್ಲಿ ಆತ್ಮಸಾಕ್ಷಾತ್ಕಾರದಲ್ಲಿ ಆಸಕ್ತರಾದ ಮತ್ತು ಅದಕ್ಕಾಗಿ ಎಂಥ ಕಷ್ಟವನ್ನಾದರೂ ಎದುರಿಸಬಲ್ಲ ನಿಷ್ಠಾವಂತ ಸಾಧಕರ ಒಂದು ಸಣ್ಣ ಗುಂಪನ್ನು ಸಂಘಟಿಸಲು ಪ್ರಯತ್ನಿಸಿದರು. ಅವರಿಗಾಗಿ 'ಬ್ರಹ್ಮಾನಂದ ವಚನಸುಧೆ', 'ಶ್ರೀರಾಮ

ಕೃಷ್ಣ ವಚನವೇದ', 'ಭಗವದ್ಗೀತೆ', 'ಉದ್ಧವಗೀತೆ', 'ನಾರದ ಭಕ್ತಿಸೂತ್ರ' ಹಾಗು ಉಪನಿಷತ್ತುಗಳು - ಇವೇ ಮುಂತಾದ ಗ್ರಂಥಗಳನ್ನು ಕುರಿತು ಪ್ರವಚನ ನಡೆಸಿದರು. ಕೇವಲ ಸಿದ್ಧಾಂತಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಳ್ಳದೆ ತಮ್ಮ ವಿದ್ಯಾರ್ಥಿಗಳಿಗೆ ವಿಶೇಷ ಆಧ್ಯಾತ್ಮಿಕ ತರಬೇತಿಯನ್ನು ನೀಡಿದರು. ಬ್ರಹ್ಮಚರ್ಯ, ವೈರಾಗ್ಯ, ತ್ಯಾಗ, ಪರಸ್ಪರ ಮಾನವಸಂಬಂಧದಲ್ಲಿರಬೇಕಾದ ಪರಿಶುದ್ಧತೆ, ಮನೋಬಲ, ಶರಣಾಗತಿ, ಪ್ರಾರ್ಥನೆ, ಧ್ಯಾನ, ಎಲ್ಲಕ್ಕಿಂತ ಮುಖ್ಯವಾಗಿ ಸ್ತ್ರೀಪುರುಷರೆಲ್ಲರಲ್ಲಿಯೂ ಭಗವಂತನನ್ನು ಕಾಣುವುದು-ಇವೇ ಮುಂತಾದ ವಿಷಯಗಳನ್ನು ಕುರಿತು ವಿಸ್ತಾರವಾದ ಶಿಕ್ಷಣವನ್ನು ನೀಡಿದರು. ಆಧ್ಯಾತ್ಮಿಕ ಜೀವನದ ಅನುಭವಗಳನ್ನು ಇತರರಿಗೆ ಹಂಚಲು ಅತ್ಯಂತ ಉತ್ಸುಕರಾಗಿದ್ದರು. ಅವರ ವಿದ್ಯಾರ್ಥಿಗಳು ಸಹ ಅಷ್ಟೇ ಉತ್ಸಾಹದಿಂದ ಶ್ರದ್ಧಾಭಕ್ತಿಗಳಿಂದ ಪ್ರತಿಸ್ಪಂದಿಸಿದರು ಎಂಬುದಕ್ಕೆ ಅವರುಗಳು ಮಾಡಿಕೊಂಡ ತರಗತಿಗಳ ಟಿಪ್ಪಣಿಗಳೇ ಸಾಕ್ಷಿ. ಮುಖ್ಯವಾಗಿ ಆ ಟಿಪ್ಪಣಿಗಳನ್ನಾಧರಿಸಿ ೧೯೭೯ರಲ್ಲಿ, ಅಂದರೆ ಪೂಜ್ಯ ಸ್ವಾಮೀಜಿಯವರು ನಿಧನರಾಗಿ ಹದಿಮೂರು ವರ್ಷಗಳ ನಂತರ, ಬೆಂಗಳೂರು ರಾಮಕೃಷ್ಣ ಮಠವು ಸುಮಾರು ಏಳುನೂರು ಪುಟಗಳಷ್ಟು ಹಿರಿದಾದ **'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ'**ವನ್ನು ಆಂಗ್ಲಭಾಷೆಯಲ್ಲಿ ಪ್ರಕಟಿಸಿತು. ಮುಂದೆ ೧೯೯೨ರಲ್ಲಿ ಅದೇ ಮಠದ ವತಿಯಿಂದ ಪುಸ್ತಕದ ಕನ್ನಡಾನುವಾದವು ಪ್ರಕಟಗೊಂಡಿತು.

ಆಧ್ಯಾತ್ಮಿಕ ವಿಷಯಗಳನ್ನು ವರ್ಗೀಕರಿಸುವುದರಲ್ಲಿ ವಿವಿಧ ಸಂಪ್ರದಾಯಗಳು ಪ್ರಚಲಿತವಾಗಿವೆ. ಸ್ವಾಮಿ ಯತೀಶ್ವರಾನಂದರು ಶ್ರೀರಾಮಾನುಜಾಚಾರ್ಯರ ಸಂಪ್ರದಾಯದಲ್ಲಿರುವಂತೆ ಆಧ್ಯಾತ್ಮಿಕ ಜೀವನವನ್ನು ಮೂರು ಭಾಗಗಳನ್ನಾಗಿ ವಿಂಗಡಣೆ ಮಾಡುತ್ತಿದ್ದರು. ಅವುಗಳೆಂದರೆ **ಆದರ್ಶ** (ಅಥವಾ ತತ್ತ್ವ), **ಸಾಧನೆ** (ಅಥವಾ ಹಿತ) ಮತ್ತು **ಅನುಭವ** (ಅಥವಾ ಪುರುಷಾರ್ಥ). 'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ' ಗ್ರಂಥದಲ್ಲಿನಾಲ್ಕು ಭಾಗಗಳಿದ್ದು ಮೊದಲ ಮೂರು ಭಾಗಗಳಲ್ಲಿ ಆದರ್ಶ, ಸಾಧನೆ ಮತ್ತು ಅನುಭವ ಇವುಗಳ ವಿಶ್ಲೇಷಣೆ ಮಾಡಲಾಗಿದೆ.

ಪ್ರತಿಯೊಬ್ಬ ಸಾಧಕನೂ ಒಂದು ನಿರ್ದಿಷ್ಟವಾದ ಕ್ರಮಬದ್ಧ ಜೀವನನಡೆಸುವುದನ್ನು ಕಲಿಯಬೇಕು. ಮೊದಲನೆಯದಾಗಿ ಅವನಿಗೆ ತಾನು ಸಾಧಿಸಬೇಕಾದ ಗುರಿಯೇನು ಎಂಬುದರ ಸ್ಪಷ್ಟ ತಿಳಿವಳಿಕೆ ಇರಬೇಕು. ಜೀವ, ಜಗತ್ತು, ಈಶ್ವರ-ಈ ಮೂರರ ನೈಜ ಸ್ವರೂಪ ಮತ್ತು ಸಂಬಂಧದ ಬಗ್ಗೆ ಸೈದ್ಧಾಂತಿಕ ಜ್ಞಾನವನ್ನು ಪಡೆದಿರಬೇಕು. ಮೊದಲನೆಯ ಭಾಗವಾದ 'ಆದರ್ಶ' ಈ ದಿಸೆಯಲ್ಲಿ ಸಾಧಕನಿಗೆ ಸಹಾಯ ಮಾಡುತ್ತದೆ. ಎರಡನೆಯ ಭಾಗದಲ್ಲಿ ಎರಡು ವರ್ಗಗಳಿವೆ. ತೀವ್ರ ಪ್ರಾರ್ಥನೆ ಹಾಗು ಧ್ಯಾನದ ಜೀವನಕ್ಕೆ ಬೇಕಾಗುವ ಅರ್ಹತೆಗಳು ಮತ್ತು ಅದಕ್ಕೆ ಬೇಕಾದ ಸಿದ್ಧತೆಗಳು-ಇವು ಮೊದಲನೆಯ ವರ್ಗದ ವಿಷಯ; ಇದನ್ನು ಹೆಚ್ಚು ವಿಸ್ತಾರವಾಗಿ ವಿವರಿಸಲಾಗಿದೆ. ಧ್ಯಾನಜೀವನಕ್ಕೆ ಬೇಕಾಗುವ ಕಟ್ಟುನಿಟ್ಟಿನ ಶಿಸ್ತು ಮತ್ತು ಮನಃಶುದ್ಧಿ-ಇವುಗಳನ್ನು ಕಡೆಗಣಿಸುವ ಆಧುನಿಕ ಪ್ರವೃತ್ತಿಯನ್ನು ಸರಿಪಡಿಸಲು ಈ ವಿಷಯಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ಎರಡನೆಯ ವರ್ಗದಲ್ಲಿ ಸಾಧಕರು ತಮ್ಮ ಆಧ್ಯಾತ್ಮಿಕ ಭಾವಕ್ಕನುಗುಣವಾಗಿ ಮತ್ತು ತಾವು ಆಧ್ಯಾತ್ಮಿಕಬೆಳವಣಿಗೆಯ ಯಾವ ಹಂತದಲ್ಲಿರುವರೊ ಅದಕ್ಕನುಗುಣವಾಗಿ ಅನುಸರಿಸಬೇಕಾದ ಸಾಧನೆಗಳನ್ನು ಕುರಿತು ಹೇಳಲಾಗಿದೆ. ಸಾಧಕನಿಗೆ ಆಗಬಹುದಾದ ಆಧ್ಯಾತ್ಮಿಕ ಅನುಭವಗಳನ್ನೂ ಮತ್ತು ಅದರಿಂದ ಉಂಟಾಗುವ ಮಾನಸಿಕ ಪ್ರತಿಕ್ರಿಯೆಗಳನ್ನೂ ಮೂರನೆಯ ಭಾಗದಲ್ಲಿ ಚರ್ಚಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಗ್ರಂಥಕರ್ತರ ವಿವಿಧ ಹೇಳಿಕೆಗಳನ್ನು ಸಂಗ್ರಹಿಸಿ ಕೊಡಲಾಗಿದೆ.

ಈ ಗ್ರಂಥದ ಕೆಲವೇ ಪುಟಗಳನ್ನು ತಿರುವಿಹಾಕಿದರೂ ಒಂದು ವಿಷಯವಂತೂ ಸ್ಪಷ್ಟವಾಗುತ್ತದೆ. ಯಾರು ಭಗವಂತನಿಗಾಗಿ ಎಲ್ಲ ಕಷ್ಟಗಳನ್ನೂ ಸಹಿಸಲು ಸಿದ್ಧರಾಗಿದ್ದಾರೋ ಮತ್ತು ತಮ್ಮ ಎಲ್ಲ ಪ್ರಾಪಂಚಿಕ ಆಸೆ ವ್ಯಾಮೋಹಗಳಿಗೆ ತಿಲಾಂಜಲಿಕೊಡಲು ಹಿಂಜರಿಯುವುದಿಲ್ಲವೋ ಅಂತಹವರಿಗೆ ಮಾತ್ರ ನಿಜವಾದ ಆಧ್ಯಾತ್ಮಿಕ ಜೀವನ ಸಾಧ್ಯ. ಈ ವಿಷಯದಲ್ಲಿ ಗ್ರಂಥಕರ್ತರು ಯಾವುದೇ ರಾಜಿಗೆ ಒಪ್ಪಲು ಸಿದ್ಧರಿಲ್ಲ. ಹಾಗಾಗಿ ಇದೊಂದು ಗಂಭೀರವಾದ ಗ್ರಂಥವೆಂದು ಪರಿಗಣಿಸದೆ ಬೇರೆ ದಾರಿಯಿಲ್ಲ.

ಪ್ರಸ್ತುತ ಲೇಖನದಲ್ಲಿ ಆಧ್ಯಾತ್ಮಿಕ ಪಿಪಾಸುಗಳಿಗೆ 'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ' ಗ್ರಂಥದಲ್ಲಿ ತಿಳಿಸಿರುವ ಅತ್ಯಂತ ಉಪಯುಕ್ತವಾದ ಕೆಲವು ಸಾಧನಾಕ್ರಮಗಳನ್ನು ಸಂಗ್ರಹಿಸಿ ಸಾಧ್ಯವಾದಷ್ಟುಮಟ್ಟಿಗೆ ಗ್ರಂಥಕರ್ತರ ನುಡಿಗಳಲ್ಲೇ ನೀಡಲಾಗಿದೆ.

### ಕತ್ತಲಿನಿಂದ ಬೆಳಕಿನಡೆಗೆ

ಆಧ್ಯಾತ್ಮಿಕ ಜೀವನಕ್ಕೆ ಪ್ರವೇಶ ಮಾಡುವುದು ಹೇಗೆ? ಈ ಪ್ರಶ್ನೆ ಎಷ್ಟೇ ಸರಳವಾಗಿ ಕಂಡರೂ ಇದರ ಉತ್ತರ ಅಷ್ಟು ಸುಲಭವಲ್ಲ. ಕೆಲವರು ಚಿಕ್ಕ ವಯಸ್ಸಿನಿಂದಲೇ ದೇವರಕಡೆಗೆ ಆಕರ್ಷಿತರಾಗಿರುತ್ತಾರೆ. ಬಾಹ್ಯಪ್ರಪಂಚದ ಯಾವ ಆಡಂಬರವೂ ಅವರಿಗೆ ಅವರಿಗೆ ರುಚಿಸುವುದೇ ಇಲ್ಲ. ಅಂತಹವರಿಗೆ ಸಾಧನೆಯ ಹಾದಿ ಬಹಳ ಸುಗಮ. ಆದರೆ ಅವರ ಸಂಖ್ಯೆ ಬಹಳ ಕಡಿಮೆ. ಮತ್ತೆ ಕೆಲವರು ಪ್ರಾಪಂಚಿಕ ಜೀವನದಲ್ಲಿ ಮುಳುಗಿದ್ದರೂ ಯಾವುದೋ ಒಂದು ವೈಯಕ್ತಿಕ ಘಟನೆಯಿಂದಲೋ ಅಥವಾ ಸನ್ನಿವೇಶದ ಬಲದಿಂದಲೋ ದಿಢೀರನೆ ಅವರ ಆಂತರಿಕ ಪ್ರಜ್ಞೆ ಜಾಗೃತವಾಗುತ್ತದೆ. ಹಾಗಾಗಿ ಒಂದೇ ನೆಗೆತದಿಂದ ಆಧ್ಯಾತ್ಮಿಕ ಜೀವನದ ಹಲವು ಘಟ್ಟಗಳನ್ನು ದಾಟಿ ಬಿಡುತ್ತಾರೆ. ಹೀಗೆ ಪರಿವರ್ತನೆ ಹೊಂದುವರ ಸಂಖ್ಯೆಯೂ ಕಡಿಮೆಯೆ. ಹೆಚ್ಚಿನ ಸಾಧಕರು ಆಧ್ಯಾತ್ಮಿಕ ಪ್ರವೃತ್ತಿಯನ್ನು ಪ್ರಯತ್ನಪೂರ್ವಕವಾಗಿ ರೂಢಿಸಿಕೊಳ್ಳಬೇಕಾಗುತ್ತದೆ. ದೈವವಶಾತ್ ಉನ್ನತ ಜೀವನ ಮೌಲ್ಯಗಳಲ್ಲಿ, ಅವುಗಳ ಅನುಸಂಧಾನದಲ್ಲಿ ಅವರಿಗೆ ಕಿಂಚಿತ್ ಒಲವು ಇರ

ಬಹುದು. ಇಚ್ಛಾಪೂರ್ವಕ ಸತತ ಸಾಧನೆಯಿಂದ ಅದನ್ನು ಬಲಪಡಿಸಿಕೊಳ್ಳಬೇಕು.

ಸಾಧನೆಯನ್ನು ಯಾವಾಗ ಪ್ರಾರಂಭಿಸಬೇಕು ಎಂದು ಪ್ರಶ್ನಿಸುವವರಿಗೆ ಸ್ವಾಮಿ ಯತೀಶ್ವರಾನಂದರು ಹೇಳುವುದೇನೆಂದರೆ ಎಷ್ಟು ಕಡಿಮೆ ವಯಸ್ಸಿನಲ್ಲಿ ಸಾಧ್ಯವೋ ಅಷ್ಟು ಬೇಗ ಆಧ್ಯಾತ್ಮಿಕ ಜೀವನವನ್ನು ಆರಂಭಿಸಬೇಕು. ಜೀವನದ ಎಲ್ಲ ಸುಖವನ್ನೂ ಅನುಭವಿಸಿದಮೇಲೆ ಇಳಿವಯಸ್ಸಿನಲ್ಲಿ ಆಧ್ಯಾತ್ಮಿಕ ಸಾಧನೆ ಮಾಡಿದರಾಯಿತು ಎಂದು ಅನೇಕರು ಭಾವಿಸುತ್ತಾರೆ. ಆದರೆ ಅವರಿಗೆ ಸಾಧನೆಯನ್ನು ಮಾಡುವ ಕಾಲ ಬರುವುದೇ ಇಲ್ಲ. ಏಕೆಂದರೆ ಅವರ ಹೆಚ್ಚಿನ ಶಕ್ತಿಯೆಲ್ಲ ಭೌತಿಕ ಸುಖದಲ್ಲಿ ವ್ಯಯವಾದಮೇಲೆ ಕಷ್ಟಪಟ್ಟು ಆಧ್ಯಾತ್ಮಿಕ ಸಾಧನೆ ಮಾಡಲು ಶಕ್ತಿ ಉಳಿದಿರುವುದಿಲ್ಲ.

### ದುರ್ಗಮ ಮಾರ್ಗ

ಆಧ್ಯಾತ್ಮಿಕ ಜೀವನ ಅಷ್ಟು ಕಠಿಣವೆನಿಸಲು ಕಾರಣವೆಂದರೆ ಸಾಮಾನ್ಯ ಜನರಿಗೆ ಈ ನಶ್ವರ ಪ್ರಪಂಚ ಹಾಗು ಇಲ್ಲಿಯ ಮಾನವೀಯ ಸಂಬಂಧಗಳೇ ಸತ್ಯವಾಗಿವೆ. ಜೀವನದಲ್ಲಿ ಒಂದು ಮುಖ್ಯ ನಿಯಮವೆಂದರೆ ನಾವು ಯಾವುದನ್ನು ಸತ್ಯವೆಂದು ಪರಿಗಣಿಸುತ್ತೇವೆಯೋ, ಯಾವುದನ್ನು ಶಾಶ್ವತ ಎಂದು ಯೋಚಿಸುತ್ತೇವೆಯೋ ಅದು ನಮ್ಮ ಇಡೀ ವ್ಯಕ್ತಿತ್ವವನ್ನು ಸೆಳೆಯುವುದು. ಈ ಪ್ರಪಂಚವನ್ನು ನಾವು ಸತ್ಯವೆಂದು ನಂಬಿರುವದರಿಂದ ಅದೇ ನಮ್ಮ ಪೂರ್ಣ ವ್ಯಕ್ತಿತ್ವವನ್ನು ಆವರಿಸಿದೆ. ಎಲ್ಲಿಯವರೆಗೆ ಈ ಸ್ಥಿತಿ ಮುಂದುವರೆಯುವುದೊ ಅಲ್ಲಿಯವರೆಗೆ ದೇವರ ಚಿಂತನೆಗೆ ನಮ್ಮಲ್ಲಿ ಅವಕಾಶವಿಲ್ಲ. ಆದ್ದರಿಂದ ಸಾಧಕರು ಮೊದಲು ತಮ್ಮ ಹೃದಯದಲ್ಲಿ ಒಂದು ಶೂನ್ಯವನ್ನು ಸೃಷ್ಟಿಸಬೇಕು, ಅನಂತರ ಆ ಶೂನ್ಯವನ್ನು ಭಗವಂತನಿಂದ ತುಂಬಿಸಬೇಕು.

ಜೀವನದ ಗುರಿ, ಮುಕ್ತಿ ಅಥವಾ ಸ್ವಾತಂತ್ರ್ಯ-ಭಯ ಶೋಕಾದಿಗಳಿಂದ; ಹುಟ್ಟುಸಾವುಗಳು ನೀಡುವ ಯಾತನೆಯಿಂದ ಮುಕ್ತಿ, ಮತ್ತು ಪರಮಶಾಂತಿಯ ಪ್ರಾಪ್ತಿ. ಇವನ್ನು ಪಡೆಯುವ ಸಾಧನ ಆತ್ಮಜ್ಞಾನ. ಇದನ್ನೇ ಸಾವಿರಾರು ವರ್ಷಗಳಿಂದ ಅಸಂಖ್ಯಾತ ಸಾಧುಸಂತರು ಸಾರುತ್ತ ಬಂದಿರುವುದು. ಆಧ್ಯಾತ್ಮಿಕ ಜೀವನದ ಪ್ರಥಮ ನಿಯಮವೇ ಅದರ್ಶದಲ್ಲಿ ಶ್ರದ್ಧೆ. ಹಾಗೆಯೇ ಆ ಆದರ್ಶವನ್ನು ತಲುಪಲು ಬೇಕಾದ ಸಾಮರ್ಥ್ಯದಲ್ಲಿ – ಅದು ನಮ್ಮಲ್ಲೇ ಇದೆ – ಶ್ರದ್ಧೆ. ಯಾವಾಗ ಈ ಶ್ರದ್ಧೆಯು ಜಾಗೃತವಾಗುವುದೋ ಆಗ ನಮ್ಮಲ್ಲಿ ಹುದುಗಿರುವ ಶಕ್ತಿಯು ಸರಿಯಾದ ದಿಕ್ಕಿನಲ್ಲಿ ಹರಿಯುವುದು.

ಧರ್ಮದ ಸಾರವನ್ನು ಅಸಾರವಾದ ಅಂಶಗಳಿಂದ ಬೇರ್ಪಡಿಸುವ ವಿವೇಕವನ್ನು ಸಾಧಕರು ಬೆಳೆಸಿಕೊಳ್ಳಬೇಕು. ಧರ್ಮದ ಅಸಾರ ಅಂಶವನ್ನೇ ನಿಜವಾದ ಆಧ್ಯಾತ್ಮಿಕತೆಯೆಂದು ಸ್ವೀಕರಿಸಿ ಅದರಲ್ಲೇ ಮುಳುಗಿಹೋಗಿರುವವರು ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಲಾರರು. ಇದೇ ಸಂಪ್ರದಾಯ ಶರಣರ ಅವಸ್ಥೆ. ಅವರು ಎಷ್ಟೇ ಕಟ್ಟುನಿಟ್ಟಾಗಿ ಧಾರ್ಮಿಕ ನಿಯಮಗಳನ್ನು ಅನುಸರಿಸಿದರೂ ಅವರು ಎಲ್ಲಿದ್ದರೋ ಅಲ್ಲೇ ಉಳಿಯುವರು. ಧರ್ಮದ ಸಾರವೆಂದರೆ ಸಂಪೂರ್ಣ ಮನಶ್ಶುದ್ಧಿಯನ್ನು ಗಳಿಸುವುದು ಮತ್ತು ಅದರ ಮೂಲಕ ಭಗವಂತನ ಬಳಿಸಾರುವುದು. ನಮ್ಮೆಲ್ಲ ಪೂಜೆ, ವ್ರತ, ಹಬ್ಬಹರಿದಿನಗಳ ಆಚರಣೆ, ತೀರ್ಥಯಾತ್ರೆ ಇವೆಲ್ಲದರ ಮೂಲೋದ್ದೇಶ ನಮ್ಮನ್ನು ಭಗವಂತನೆಡೆಗೆ ಕೊಂಡೊಯ್ಯುವುದು. ಈ ಉದ್ದೇಶ ಈಡೇರದಿದ್ದರೆ ಇವೆಲ್ಲವೂ ಕೇವಲ ವ್ಯರ್ಥ ಕಸರತ್ತುಗಳು ಮಾತ್ರ.

### ಸತ್ಸಂಗದ ಮಹತ್ವ

ಎಲ್ಲ ಧರ್ಮಗಳಲ್ಲಿಯೂ ಮತ್ತು ಎಲ್ಲ ಮತಗಳಲ್ಲಿಯೂ ಸಾಧುಸಂಗಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ನಿಜವಾಗಿಯೂ ಸಾಧಕನ ಆಧ್ಯಾತ್ಮಿಕ ಬೆಳವಣಿಗೆಗೆ ಇದು ಅತಿ ಮುಖ್ಯ. ಪ್ರಾರಂಭದ ಹಂತದಲ್ಲಿರುವವರಿಗಂತೂ ಅತ್ಯಾವಶ್ಯಕ. ಸಾಧುಸಂಗದಿಂದ ದೊರೆಯುವ ಲಾಭವೇನು? ಶ್ರೀರಾಮಕೃಷ್ಣರ ಮಾತಿನಲ್ಲಿ ಹೇಳುವುದಾದರೆ, ಅದು ಭಗವದ್ ವ್ಯಾಕುಲತೆಯನ್ನು ಉಂಟುಮಾಡುವುದು. ಅದು ಭಗವತ್ ಪ್ರೇಮವನ್ನು ಹುಟ್ಟಿಸುವುದು. ವ್ಯಾಕುಲತೆ ಇಲ್ಲದೆ ಆಧ್ಯಾತ್ಮಿಕ ಜೀವನದಲ್ಲಿ ಏನನ್ನೂ ಸಾಧಿಸಲಾಗುವುದಿಲ್ಲ. ನಿರಂತರವಾಗಿ ಸಾಧುಸಂಗದಲ್ಲಿರುವುದರಿಂದ ಜೀವ ಭಗವಂತನಿಗಾಗಿ ತವಕಿಸುವುದು... ಸಾಧುಸಂಗದಿಂದ ಇನ್ನೊಂದು ಪ್ರಯೋಜನವಿದೆ. ಸತ್ಯಾಸತ್ಯ ವಿವೇಚನೆಯನ್ನು ಬೆಳೆಸಿಕೊಳ್ಳಲು ಅದು ಸಹಾಯಕವಾಗುವುದು. ದೇವರು ಮಾತ್ರ ಸತ್ಯ; ಅವನೇ ಶಾಶ್ವತವಸ್ತು ಮತ್ತು ಪ್ರಪಂಚ ಅವಸ್ತು, ಕ್ಷಣಿಕ.

ಸಂಸ್ಕೃತದಲ್ಲಿ ಒಂದು ನಾಣ್ಣುಡಿಯಿದೆ. ಮೂರ್ಖರೊಡನೆ ಸ್ವರ್ಗಸುಖ ಅನುಭವಿಸುವದಕ್ಕಿಂತ ವನಚರರೊಡನೆ ಪರ್ವತ ಗುಡ್ಡಗಳಲ್ಲಿ ಅಲೆಯುವುದು ಲೇಸು. ನಮಗೆ ಒಳ್ಳೆಯ ಪರಿಶುದ್ಧ ಆಧ್ಯಾತ್ಮಿಕ ವ್ಯಕ್ತಿಗಳ ಸಂಗ ದೊರೆಯದಿದ್ದರೆ ಮೂರ್ಖರ ಅಂದರೆ ಪ್ರಾಪಂಚಿಕರ ಸಂಗ ಮಾಡುವುದು ಸರಿಯಲ್ಲ. ಅವರ ಅಶುದ್ಧ ಅನೈತಿಕ ಪ್ರಭಾವ ನಮಗೆ ತಿಳಿಯದಂತೆಯೇ ನಮ್ಮ ಮೇಲೆ ಆಗಬಹುದು.

ಆಧ್ಯಾತ್ಮಿಕ ಪ್ರಗತಿಯ ಒಂದು ಮುಖ್ಯ ಗುರುತೆಂದರೆ ಭಕ್ತನು ಭಗವದ್ ವಿಷಯವಲ್ಲದೆ, ಆಧ್ಯಾತ್ಮಿಕ ವಿಷಯವಲ್ಲದೆ ಬೇರೇನನ್ನು ಕೇಳಲು ಇಷ್ಟಪಡುವುದಿಲ್ಲ. ಯಾವನಾದರೂ ಭಕ್ತನಿಗೆ ಪ್ರಾಪಂಚಿಕರ ಸಂಗದಲ್ಲಿ ಮತ್ತು ಪ್ರಾಪಂಚಿಕ ಸಂಭಾಷಣೆಯಲ್ಲಿ ಅಭಿರುಚಿಯಿದ್ದರೆ ಅವನ ಭಕ್ತಿಯಲ್ಲಿಯೇ ಏನೋ ದೋಷವಿರಬೇಕು ಮತ್ತು ಅವನ ಪ್ರಾಮಾಣಿಕತೆ ಸಂದೇಹಾರ್ಹ. ನಿಜವಾದ ಆಧ್ಯಾತ್ಮಿಕ ವ್ಯಕ್ತಿಗಳಿಗೆ ಪ್ರಾಪಂಚಿಕರ ಸಂಗ, ಪ್ರಾಪಂಚಿಕ ವಿಷಯ ರುಚಿಸದು. ಆದ್ದರಿಂದ ಯಾರೆಂದರವರೊಡನೆ ಬೆರೆಯಬಾರದು. ಹಾಗೆಂದು ಅವರನ್ನು ದ್ವೇಷಿಸುವುದು ಕೂಡ ತಪ್ಪು.

## ಗುರುವಿನ ಪಾತ್ರ

ಆಧ್ಯಾತ್ಮಿಕ ಜೀವನಕ್ಕೆ ಗುರುವಿನ ಆವಶ್ಯಕತೆಯ ಬಗ್ಗೆ ಭಾರತದಲ್ಲಿ ನಾವು ಪ್ರಶ್ನಿಸುವುದೇ ಇಲ್ಲ. ಸ್ವಾಮಿ ಬ್ರಹ್ಮಾನಂದರು ಹೇಳುತ್ತಿದ್ದರು, ಕದಿಯುವುದನ್ನು ಕಲಿಯಬೇಕಾದರೂ ಒಬ್ಬನಿಗೆ ಗುರು ಬೇಕು. ಮತ್ತೆ ಈ ಬ್ರಹ್ಮವಿದ್ಯೆಯನ್ನು ಪಡೆಯಲು ಗುರು ಬೇಡವೆ? ಎಂದು. ಮಾನವನ ನಿಜ ಸ್ವರೂಪ ಹುಟ್ಟು ಸಾವುಗಳಿಲ್ಲದ ಅನಂತವೂ ಚಿದ್ಘನವೂ ಆದ ಆತ್ಮ. ಆದರೆ ನಾವದನ್ನು ಮರೆತಿದ್ದೇವೆ. ಯುಗಯುಗಗಳ ಅಜ್ಞಾನದ ನಿದ್ರೆಯಿಂದ ನಮ್ಮನ್ನು ಎಬ್ಬಿಸಿ ಆತ್ಮಸಾಕ್ಷಾತ್ಕಾರದೆಡೆಗೆ ಮುನ್ನಡೆಸುವವನೆ ಗುರು. ಆತನು ದೀಕ್ಷಾದಾನದ ಮೂಲಕ ಶಿಷ್ಯನಲ್ಲಿ ಒಂದು ಜಾಗೃತಿಯನ್ನು ಉಂಟುಮಾಡುತ್ತಾನೆ.

ಆದರೆ ಸುಮ್ಮನೆ ಗುರುವಿನಿಂದ ಉಪದೇಶವನ್ನು ಪಡೆದರೆ ಸಾಲದು. ತುಂಬ ಶ್ರದ್ಧೆಯಿಂದ ಅವರ ಸಲಹೆಯಂತೆ ನಡೆಯಬೇಕು. ಆದರೆ ಗುರುವಿನ ಹೊರರೂಪಕ್ಕೆ ಹೆಚ್ಚಾಗಿ ಅಂಟಿಕೊಳ್ಳಬಾರದು. ನಿಜವಾದ ಗುರು ತನ್ನ ಶಿಷ್ಯರು ತನಗಿಂತ ಹೆಚ್ಚಾಗಿ ಭಗವಂತನನ್ನೇ ಪ್ರೀತಿಸಬೇಕೆಂದು ಬಯಸುತ್ತಾನೆ ಮತ್ತು ತನ್ನನ್ನು ಭಗವಂತನ ಒಂದು ಉಪಕರಣವೆಂದು ತಿಳಿಯಬೇಕೆಂದು ಅವರಿಗೆ ಹೇಳುತ್ತಾನೆ.

## ತ್ಯಾಗದ ಆವಶ್ಯಕತೆ

ಆಧ್ಯಾತ್ಮಿಕ ಜೀವನದಲ್ಲಿ ತ್ಯಾಗ ಅತಿ ಮುಖ್ಯ ವಿಷಯ. ಕಾಮ, ಕಾಂಚನ, ಅಹಂಕಾರ–ಈ ಮೂರರ ತ್ಯಾಗವನ್ನು ಎಲ್ಲ ಶಾಸ್ತ್ರಗಳೂ, ಎಲ್ಲ ನಿಜವಾದ ಧಾರ್ಮಿಕ ವ್ಯಕ್ತಿಗಳೂ ಒತ್ತಿ ಹೇಳಿದ್ದಾರೆ. ತ್ಯಾಗವಿಲ್ಲದೆ ಆಧ್ಯಾತ್ಮಿಕ ಜೀವನವಿಲ್ಲ. ನಮ್ಮ ದೇಹ ಮನಸ್ಸುಗಳಿಗೆ ಮತ್ತು ಇತರರಿಗೆ ಅಂಟಿಕೊಳ್ಳುವುದನ್ನು ನಾವು ಬಿಡಬೇಕು. ನಾವು ಹೆಚ್ಚು ಹೆಚ್ಚು ತ್ಯಾಗ ಮತ್ತು ಅನಾಸಕ್ತಿಯನ್ನು ಪಡೆದಷ್ಟೂ ನಮ್ಮ ಜಪ ಧ್ಯಾನ ಹೆಚ್ಚು ಹೆಚ್ಚು ಪರಿಣಾಮಕಾರಿಯಾಗುವುವು. ಆಧ್ಯಾತ್ಮಿಕ ಸಾಧನೆ ಮತ್ತು ತ್ಯಾಗ–ಇವೆರಡೂ ಕೂಡಿದಾಗಲೇ ನಮ್ಮ ಮನಸ್ಸನ್ನು ನಿಗ್ರಹಿಸಲು ಮತ್ತು ಲೆಕ್ಕವಿಲ್ಲದಷ್ಟು ಜನ್ಮಗಳಲ್ಲಿ ನಾವು ಕಲೆಹಾಕಿರುವ ಅಪಾರವಾದ ಕೊಳಕಿನ ರಾಶಿಯಿಂದ ಕೂಡಿದ ಅದನ್ನು ಆಮೂಲಾಗ್ರವಾಗಿ ಪರಿಶುದ್ಧಗೊಳಿಸಲು ಸಾಧ್ಯವಾಗುವುದು.

## ಸಂಸ್ಕಾರಗಳೊಂದಿಗೆ ಸೆಣಸಾಟ

ನಿಷ್ಠೆಯಿಂದ ನಾವು ಯಾವಾಗ ಆಧ್ಯಾತ್ಮಿಕ ಜೀವನವನ್ನು ಪ್ರಾರಂಭಿಸಿವೆವೋ ಆಗ ನಾವೆಂಥ ಕೆಟ್ಟ ಜೀವನವನ್ನು ಇದುವರೆಗೆ ನಡೆಸುತ್ತಿದ್ದುವು ಎಂಬುದು ತಿಳಿದುಬರುತ್ತದೆ. ನಮ್ಮ ಹಿಂದಿನ ಘಟನೆಗಳ ಹಿಡಿತವೇ ಈಗ ದೊಡ್ಡ ತಡೆ ಎಂಬುದು ಗೊತ್ತಾಗುತ್ತದೆ. ಆದರೆ ನಾವು ಇದರಿಂದ ವಿಚಲಿತರಾಗಬೇಕಿಲ್ಲ. ನಮ್ಮ ಆಧ್ಯಾತ್ಮಿಕ ಸಾಧನೆ ನಮ್ಮ ಕೀಳು ಸ್ವಭಾವವನ್ನು ಹೆಚ್ಚು ಹೆಚ್ಚು ಪ್ರಕಾಶಪಡಿಸಿದರೆ, ನಮ್ಮ ಆಸೆಗಳ ಬೇರುಗಳನ್ನು ಹೊರಪಡಿಸಿದರೆ, ಅದರಿಂದ ನಾವು ಹತಾಶರಾಗಬೇಕಿಲ್ಲ. ಅನೇಕ ಕೆಟ್ಟ ಸಂಸ್ಕಾರಗಳು ನಮ್ಮ ಅಂತರ್ಮನಸ್ಸಿನಲ್ಲಿ ಹುದುಗಿಕೊಂಡಿವೆ. ನಮಗೆ ಗೊತ್ತಿಲ್ಲದಂತೆ ಬಹುಕಾಲದಿಂದ ಅವು ಅಲ್ಲಿವೆ. ಅವು ಮೇಲೇಳಲು ಪ್ರಾರಂಭಿಸಿದರೆ ಅವುಗಳ ಸುಳಿವು ನಮಗೆ ಸಿಕ್ಕಿತಲ್ಲ ಎಂದು ನಾವು ಆನಂದಪಡಬೇಕು ಮತ್ತು ಅವುಗಳನ್ನು ಜಾಣತನದಿಂದ ಎದುರಿಸಬೇಕು. ಇದರ ಬದಲು ಆ ಭಾವನೆಗಳನ್ನು ಮುಚ್ಚಿಟ್ಟುಕೊಂಡು ಅವುಗಳಿಲ್ಲವೆ ಇಲ್ಲ ಎಂಬಂತೆ ನಟಿಸಿದರೆ ನಮ್ಮನ್ನು ನಾವೇ ವಂಚಿಸಿಕೊಂಡಂತೆ ಆಗುವುದು. ಇದರಿಂದ ನಮ್ಮ ಆಧ್ಯಾತ್ಮಿಕ ಪ್ರಗತಿಯನ್ನೂ ನಾವು ಸ್ಥಗಿತಗೊಳಿಸುತ್ತೇವೆ.

ಕುಸಂಸ್ಕಾರಗಳು ಮೇಲೆದ್ದು ಬಂದಾಗ ರಚನಾತ್ಮಕ ಆತ್ಮವಿಮರ್ಶೆ ಮಾಡಿಕೊಳ್ಳಬೇಕು. ಹಾ, ನಾನೆಂಥ ಪಾಪಿ, ನಾನೆಂಥ ನೀಚ ವ್ಯಕ್ತಿ! ಎಂದು ಹೇಳಲೇಬೇಡಿ. ಅದರ ಬದಲು ನಾನು ಹಿಂದೆ ತಪ್ಪು ಮಾಡಿರಬಹುದು, ಅದು ಆಗಿಹೋಯಿತು. ಅದರ ಬಗ್ಗೆ ಈಗ ಚಿಂತಿಸುವುದು ಬೇಡ. ನನ್ನ ಜೀವನದಲ್ಲಿ ಹೊಸ ಅಧ್ಯಾಯ ಪ್ರಾರಂಭವಾಗಲಿ, ಮುಂದೆ ಒಳ್ಳೆಯದನ್ನೇ ಮಾಡುವಂತಾಗಲಿ. ನಾನು ಹೆಚ್ಚು ಎಚ್ಚರಿಕೆಯಿಂದಿದ್ದು, ಪ್ರಾಣಿಯಂತಿರುವುದಕ್ಕಿಂತ ಮನುಷ್ಯನಂತೆ ಬಾಳುವಂತಾಗಲಿ – ಎಂದು ಹೇಳಿಕೊಳ್ಳಿ.

## ಶುದ್ಧ ಮನಸ್ಸು

ಸಾಮಾನ್ಯವಾಗಿ ಜನರು ಆಧ್ಯಾತ್ಮಿಕ ಜೀವನವೆಂದರೆ ಕೇವಲ ಧ್ಯಾನ, ಯೋಗ, ಸಮಾಧಿ ಮೊದಲಾದುವುಗಳೆಂದು ಭಾವಿಸುತ್ತಾರೆ. ಇವೆಲ್ಲವೂ ಆಧ್ಯಾತ್ಮಿಕ ಜೀವನದ ಹಂತಗಳು ನಿಜ. ಆದರೆ ಇವುಗಳು ಉನ್ನತ ಸ್ತರಕ್ಕೆ ಸೇರಿದವು. ಇವುಗಳನ್ನು ಅಭ್ಯಾಸ ಮಾಡುವ ಮೊದಲು ಸಾಕಷ್ಟು ಸಿದ್ಧತೆ ಆವಶ್ಯಕ. ಇಲ್ಲದಿದ್ದರೆ ನಮ್ಮ ಆಧ್ಯಾತ್ಮಿಕ ಜೀವನ ಬುನಾದಿಯಿಲ್ಲದ ಕಟ್ಟಡದಂತೆ ದುರ್ಬಲವಾಗಿರುತ್ತದೆ.

ಮನಸ್ಸನ್ನು ಏಕಾಗ್ರಗೊಳಿಸುವುದು ಅಂತಹ ಒಂದು ಪೂರ್ವಸಿದ್ಧತೆ. ಮನಶ್ಶುದ್ಧಿ ಇಲ್ಲದೆ ಆಧ್ಯಾತ್ಮಿಕ ಜೀವನ ಸಾಧ್ಯವೇ ಇಲ್ಲ. ಪ್ರಾರಂಭಾವಸ್ಥೆಯಲ್ಲಿ ಕಟ್ಟುನಿಟ್ಟಿನ ನೈತಿಕ ನಿಯಮಪಾಲನೆಗೆ ಹೆಚ್ಚು ಒತ್ತು ನೀಡಬೇಕು. ಸತ್ಯ, ಅಹಿಂಸೆ, ಆಸ್ತೇಯ, ಬ್ರಹ್ಮಚರ್ಯ ಮುಂತಾದವುಗಳನ್ನು ಕಾಯಾ ವಾಚಾ ಮನಸಾ ಪಾಲಿಸಬೇಕು. ಸತ್ಸಂಗ, ಸದ್ಭಾವನೆ ಮತ್ತು ಸತ್ಕರ್ಮಗಳಲ್ಲಿ ಸದಾ ತೊಡಗಿರುವುದರಿಂದ ಇದು ಸಾಧ್ಯ. ಯಾವುದೇ ಇಂದ್ರಿಯದ ಮೂಲಕವೂ ಅನಿಷ್ಟ ಸಂಸ್ಕಾರಗಳು ಉಂಟಾಗದಂತೆ ಯಾವಾಗಲೂ ಎಚ್ಚರದಿಂದಿರಬೇಕು. ಅವು ಒಳಗೆ ಬೇರುಬಿಟ್ಟರೆ ಕೂಡಲೇ ಕಿತ್ತುಹಾಕಬೇಕು.

ಮನಸ್ಸನ್ನು ಏಕಾಗ್ರಗೊಳಿಸುವ ದಿಕ್ಕಿನಲ್ಲಿ ಪ್ರಯತ್ನಿಸುವ ಮೊದಲು ಅದನ್ನು ಪವಿತ್ರಗೊಳಿಸಬೇಕು. ನಿಜವಾದ ಪವಿತ್ರತೆಯನ್ನು ಪಡೆಯುವ ಉತ್ತಮ ವಿಧಾನ ನಾವು ಸ್ವರೂಪತಃ ಪವಿ




ತ್ರರು ಎಂದು ಭಾವಿಸುವುದು. ತಾನು ಅಪವಿತ್ರ ಎಂದು ಭಾವಿಸುವವನು ಅಪವಿತ್ರನೇ ಆಗುವನು. ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು: ಕೊಳೆಯನ್ನು ಕೊಳೆಯಿಂದ ತೊಳೆಯಲಾದೀತೆ? ಪಾಪವು ಪಾಪವನ್ನು ಗುಣಪಡಿಸೀತೆ? ದೌರ್ಬಲ್ಯಕ್ಕೆ ದೌರ್ಬಲ್ಯ ಪರಿಹಾರವೇ? ಆದ್ದರಿಂದ ಪವಿತ್ರತೆಯೇ ನನ್ನ ಆಸ್ತಿ. ನನ್ನ ನಿಜವಾದ ಸ್ವರೂಪ. ನಾನು ಸ್ವರೂಪತಃ ಮುಕ್ತ ಎಂದು ಭಾವಿಸಬೇಕು.

### ಪ್ರಾರ್ಥನೆ

ಎಲ್ಲ ಧಾರ್ಮಿಕ ಸಂಪ್ರದಾಯಗಳಲ್ಲೂ ಭಗವತ್ಪ್ರಾರ್ಥನೆಗೆ ವಿಶೇಷ ಸ್ಥಾನವುಂಟು. ಪ್ರಾರ್ಥನೆ ನಮ್ಮನ್ನು ದೇವರ ಹತ್ತಿರ ಕೊಂಡೊಯ್ಯುವುದು. ನಮ್ಮ ಒಳಗೆ ಹುದುಗಿರುವ ಆಧ್ಯಾತ್ಮಿಕ ಶಕ್ತಿಯನ್ನು ಅದು ಜಾಗೃತಗೊಳಿಸುವುದು. ದೇವರು ನಮ್ಮ ಪ್ರಾರ್ಥನೆಯನ್ನು ಕೇಳುತ್ತಾನೆ, ಆದರೆ ಅದು ಪ್ರಾಮಾಣಿಕವಾಗಿರಬೇಕು. ಮನಸ್ಸು ಮತ್ತು ಹೃದಯ ಪ್ರಾರ್ಥನೆಯಲ್ಲಿ ಒಂದಾಗುವಂತೆ ಮಾಡಬೇಕು.

ಪ್ರಾರ್ಥನೆಯಲ್ಲಿ ಅತ್ಯಂತ ಮುಖ್ಯವಾದದ್ದು ಶ್ರದ್ಧೆ. ಪ್ರಾರ್ಥನೆ ಪರಿಣಾಮಕಾರಿಯಾಗಲು ದೇವರೊಬ್ಬನೇ ನಮಗೆ ಪರಮಾಶ್ರಯ ಎಂಬ ಭಾವನೆ ಅಚಲವಾಗಿರಬೇಕು. ಆಧ್ಯಾತ್ಮಿಕ ಸಾಧಕರು ಯಾವುದೇ ಲೌಕಿಕ ವಸ್ತುಗಳಿಗೆ ಪ್ರಾರ್ಥಿಸಬಾರದು. ಭಕ್ತಿ ಶಕ್ತಿ ಪವಿತ್ರತೆಗಳಿಗಾಗಿ ಮಾತ್ರ ಪ್ರಾರ್ಥನೆ ಸಲ್ಲಿಸಬೇಕು. ಈ ರೀತಿಯ ಪ್ರಾರ್ಥನೆ ಧ್ಯಾನಕ್ಕೆ ಮೊದಲ ಮೆಟ್ಟಿಲು.

### ಜಪ

ಪ್ರಾರ್ಥನೆಯಿಂದ ಮನಸ್ಸು ಕೆಲಮಟ್ಟಿಗೆ ಶಾಂತವಾದಮೇಲೆ ಜಪ ಮಾಡಬಹುದು. ಜಪವೆಂದರೆ ಇಷ್ಟದೇವತಾಮಂತ್ರದ ಗಿಳಿಪಾಠವಲ್ಲ. ಗುರುವಿನಿಂದ ಪಡೆದ ಮಂತ್ರವನ್ನು ಪ್ರಜ್ಞಾಪೂರ್ವಕವಾಗಿ ಇಷ್ಟದೇವತೆಯ ರೂಪವನ್ನು ಧ್ಯಾನಿಸುತ್ತ ಉಚ್ಚರಿಸಬೇಕು. ಜಪ ಮಾಡುವುದಕ್ಕೆ ಸಹ ಶ್ರದ್ಧೆ ಅತಿ ಮುಖ್ಯ. ಪ್ರಾರಂಭದಲ್ಲಿ ಜಪ ಸ್ವಲ್ಪ ಯಾಂತ್ರಿವಾದರೂ ತೊಂದರೆಯಿಲ್ಲ. ಆದರೆ ಮಂತ್ರದಲ್ಲಿ ಶ್ರದ್ಧೆ ಇರಲೇಬೇಕು. ನಾಮಜಪ ಮಾಡುವಾಗ ದೇಹ ಮನಸ್ಸು ಇಂದ್ರಿಯಗಳು ಪರಿಶುದ್ಧವಾಗುತ್ತಿರುವುದೆಂದು ಭಾವಿಸಬೇಕು.

ನೈತಿಕ ಸಾಧನೆ, ಕರ್ತವ್ಯ ಪರಿಪಾಲನೆ, ಜಪ, ಪ್ರಾರ್ಥನೆ, ಶಾಸ್ತ್ರಾಧ್ಯಯನ ಮತ್ತು ಶಾಸ್ತ್ರ ವಿಚಾರಗಳ ಮನನ-ಇವುಗಳ ಮೂಲಕ ನಮ್ಮನ್ನು ನಾವು ಸಿದ್ಧಪಡಿಸಿಕೊಳ್ಳದೆ ನಿಜವಾದ ಉನ್ನತ ಮಟ್ಟದ ಧ್ಯಾನ ಸಾಧ್ಯವೇ ಇಲ್ಲ. ಈ ಪ್ರಾರಂಭಿಕ ಸಾಧನೆಗಳು ಮನಸ್ಸಿನ ವಿಕ್ಷೇಪಗಳನ್ನು ದೂರಮಾಡುತ್ತವೆ, ಅದನ್ನು ಸಚ್ಚಿಂತನೆಯಲ್ಲಿ ತೊಡಗಿಸುತ್ತವೆ. ಮೊದಲು ಇದು ಅಡೆತಡೆಯಿಂದ ಕೂಡಿದ್ದರೂ ದೃಢ ಸಾಧನೆಯಿಂದ ಇದು ನಿರಂತರವಾಗುತ್ತದೆ.

### ಧ್ಯಾನ

ಧ್ಯಾನವೆಂದರೆ ಕೇವಲ ಏಕಾಗ್ರತೆಯಲ್ಲ. ನಿರ್ದಿಷ್ಟ ಪ್ರಜ್ಞಾಕೇಂದ್ರದಲ್ಲಿ ಯಾವುದಾದರೂ ಒಂದು ಆಧ್ಯಾತ್ಮಿಕ ವಿಚಾರದ ಮೇಲೆ ನಮ್ಮ ಎಲ್ಲ ಚಿಂತನೆ ಭಾವನೆಗಳನ್ನು ತೈಲಧಾರೆಯಂತೆ ಹರಿಸುವುದು ಧ್ಯಾನ. ಪ್ರಾರಂಭಾವಸ್ಥೆಯಲ್ಲಿರುವವರು ಹೃದಯದಲ್ಲಿ ತಮ್ಮ ಇಷ್ಟದೇವತೆಯ ಮೂರ್ತಿಯ ಮೇಲೆ ಧ್ಯಾನಿಸುವುದು ಉತ್ತಮ.

ಧ್ಯಾನವನ್ನು ಪ್ರಾರಂಭಿಸುವುದಕ್ಕೆ ಮೊದಲು ನಮ್ಮ ದೇಹವನ್ನು ದೇವಾಲಯವೆಂದು ಭಾವಿಸಿ ಆ ಪವಿತ್ರ ಮಂದಿರವನ್ನು ಹೃದಯದ್ವಾರದ ಮೂಲಕ ಪ್ರವೇಶಿಸೋಣ. ಆ ಹೃದಯ ಜೀವಾತ್ಮನ ಪ್ರಜ್ಞಾಜ್ಯೋತಿಯಿಂದ ತುಂಬಿದೆಯೆಂದು ಭಾವಿಸಬೇಕು. ಮತ್ತೆ ಈ ಜೀವಾತ್ಮ ಅನಂತಪ್ರಜ್ಞೆಯಾದ ಪರಮಾತ್ಮನ ಅಂಶವೆಂದು ಚಿಂತಿಸಬೇಕು. ಈ ದೇಹ ಮನಸ್ಸು ಪ್ರಪಂಚವನ್ನೆಲ್ಲ ಈ ಅನಂತ ಸತ್ಯದಲ್ಲಿ ಲಯಗೊಳಿಸಬೇಕು. ಅನಂತ ಜ್ಯೋತಿ, ಅನಂತ ಚೈತನ್ಯದಿಂದ ಓತಪ್ರೋತವಾಗಿರುವ ಒಂದು ಚಿಕ್ಕ ತೇಜಃಪುಂಜವೇ ನಾವೆಂದು ಕಲ್ಪಿಸಬೇಕು. ಸಾಮಾನ್ಯ ವ್ಯಕ್ತಿಗಳಿಗೆ ಈ ಧ್ಯಾನ ನಿಲುಕದುದರಿಂದ, ನಮ್ಮಾತ್ಮವು ಪರಿಶುದ್ಧವಾದ ಮಾನಸಿಕ ಮತ್ತು ದೈಹಿಕ ಕವಚಗಳಿಂದ ಆವೃತವಾಗಿದೆ ಮತ್ತು ಪರಮಾತ್ಮನು ಒಂದು ಕಡೆ ಗುರುವಾಗಿಯೂ ಮತ್ತೊಂದು ರೂಪದಲ್ಲಿ ಇಷ್ಟದೇವತೆಯಾಗಿಯೂ ಇರುವನು ಎಂದು ಚಿಂತಿಸಬೇಕು. ಗುರು

ವಂದನೆಯ ಅನಂತರ ಅವರ ವ್ಯಕ್ತಿತ್ವವನ್ನು ಇಷ್ಟದೇವತೆಯಲ್ಲಿ ಲಯಗೊಳಿಸಿ ಇಷ್ಟಮಂತ್ರವನ್ನು ಜಪಿಸುತ್ತ ಆ ದೇವತೆಯ ಮೇಲೆ ಧ್ಯಾನ ಮಾಡಬೇಕು.

ಮೊದಲು ರೂಪಧ್ಯಾನ–ಅಂದರೆ ದೇವತೆಯ ಆನಂದಮಯ ತೇಜೋಮಯ ರೂಪವನ್ನು ಧ್ಯಾನಿಸುವುದು. ಮುಂದಿನ ಹಂತ ಗುಣಧ್ಯಾನ–ದೇವತೆಯ ಪವಿತ್ರತೆ, ಪ್ರೀತಿ, ಜ್ಞಾನ, ಆನಂದ ಮುಂತಾದ ಅನಂತಗುಣಗಳ ಮೇಲೆ ಧ್ಯಾನಮಾಡುವುದು. ಮೂರನೆಯ ಮತ್ತು ಕೊನೆಯ ಹಂತವೇ ಸ್ವರೂಪ ಧ್ಯಾನ – ಇಷ್ಟದೇವತೆ, ಗುರು, ಶಿಷ್ಯ ಇವರನ್ನೆಲ್ಲ ಆವರಿಸಿರುವ ಸರ್ವವ್ಯಾಪಿ ಚೈತನ್ಯದ ಮೇಲೆ ಧ್ಯಾನ.

### ಉಪಸಂಹಾರ

ಈ ಮೇಲ್ಕಂಡ ಸಾಧನಾಕ್ರಮಗಳಲ್ಲದೆ ನಿಷ್ಕಾಮಕರ್ಮ, ಭಗವತ್ಪ್ರೀತಿ, ಶರಣಾಗತಿ, ಪೂಜೆ, ಭಗವತ್ಸಾನಿಧ್ಯ ಚಿಂತನೆ ಇವೇ ಮೊದಲಾದ ಹಲವಾರು ಸಾಧನೆಗಳನ್ನು **'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ'** ಪುಸ್ತಕದಲ್ಲಿ ವಿಶದಪಡಿಸಲಾಗಿದೆ. ಸ್ವಾಮಿ ಯತೀಶ್ವರಾನಂದರು ವಿಷಯಗಳನ್ನು ನಿರೂಪಿಸುವಾಗ ಹತ್ತಾರು ಉಪನಿಷತ್ತುಗಳಿಂದ, ವೇದಾಂತದ ಪ್ರಕರಣ ಗ್ರಂಥಗಳಿಂದ ಮನೋವಿಜ್ಞಾನ ಮತ್ತು ತತ್ತ್ವಶಾಸ್ತ್ರ ಗ್ರಂಥಗಳಿಂದ ಪೂರಕ ವಾಕ್ಯಗಳನ್ನು ನೀಡಿರುವುದು ಪುಸ್ತಕದ ಘನತೆಯನ್ನು ಹೆಚ್ಚಿಸಿದೆ. ಇಷ್ಟೇ ಅಲ್ಲದೆ ಹಲವಾರು ಹಾಸ್ಯಭರಿತ ಚಟಾಕಿಗಳನ್ನು ಸಣ್ಣಕತೆಗಳನ್ನು ಸಂದರ್ಭೋಚಿತವಾಗಿ ಹೇಳುತ್ತಾ ಪುಸ್ತಕವನ್ನು ಸ್ವಾರಸ್ಯಕರವನ್ನಾಗಿಯೂ ಮಾಡಿದ್ದಾರೆ.

ಈ ಲೇಖನದ ಆರಂಭದಲ್ಲಿ 'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ' ವನ್ನು ಒಂದು ಯಂತ್ರದ ಕೈಪಿಡಿಗೆ ಹೋಲಿಸಿದೆವು. ಆದರೆ ಮನುಷ್ಯನ ಬಾಳು ಎಲ್ಲ ಆಧುನಿಕ ಯಂತ್ರಗಳಿಗಿಂತ ಹೆಚ್ಚು ಸಂಕೀರ್ಣವಾದದ್ದು. ಪೂರ್ವ ಸಂಸ್ಕಾರಗಳು, ಹುಟ್ಟಿ ಬೆಳೆದ ವಾತಾವರಣ, ಸಾಮಾಜಿಕ ಒತ್ತಡಗಳು ವ್ಯಕ್ತಿಗಳಮೇಲೆ ವಿಧವಿಧವಾಗಿ ಪರಿಣಾಮ ಬೀರಿ ಪ್ರತಿಯೊಬ್ಬರನ್ನು ವಿಶಿಷ್ಟವ್ಯಕ್ತಿಗಳನ್ನಾಗಿ ರೂಪಿಸಿರುತ್ತವೆ. ಆದ್ದರಿಂದ ಎಲ್ಲರನ್ನು ಯಾವುದೇ ಒಂದು ಸಿದ್ಧಾಂತದ ಚೌಕಟ್ಟಿನಲ್ಲಿ ತಂದು ಮಾರ್ಗದರ್ಶನ ನೀಡುವುದು ಸಾಧ್ಯವಿಲ್ಲ. ಪ್ರಸ್ತುತ 'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ' ಗ್ರಂಥದ ವಾಚಕರು ಸಹ ಈ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಪುಸ್ತಕದ ಮುನ್ನುಡಿಯಲ್ಲೇ ತಿಳಿಸಿರುವಂತೆ ಇಲ್ಲಿ ಸಾಧನೆಯ ಬಗ್ಗೆ ಅಮೂಲ್ಯವಾದ ಸಾಕಷ್ಟು ಮಾಹಿತಿ, ಉಪದೇಶಗಳನ್ನು ನೀಡಲಾಗಿದ್ದರೂ ಸಹ ಓದುಗರು ತಮ್ಮ ವಿವೇಕವನ್ನು ಉಪಯೋಗಿಸಿ ತಮಗೆಷ್ಟು ಅನುಸರಿಸಲು ಸಾಧ್ಯವೋ ಅಷ್ಟನ್ನು ಮಾತ್ರ ಸ್ವೀಕರಿಸಿ ತಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುವ ಪ್ರಯತ್ನ ಮಾಡಬೇಕು. ✤

A VIDEO FILM COMMING SHORTLY: A DOCUMENTARY — Duration: 120 Minutes

By H T Nagendra

"ನಾವು ಮಹಾನದಿಯ ತೀರದಲ್ಲಿ ಕುಳಿತುಕೊಂಡು ದಾಹದಿಂದ ಪರಿತಪಿಸುತ್ತಿದ್ದೇವೆ. ಆಹಾರದ ರಾಶಿಯ ಪಕ್ಕದಲ್ಲಿ ಕುಳಿತುಕೊಂಡು ಉಪವಾಸದಿಂದ ಅಳುತ್ತಿದ್ದೇವೆ. ಆನಂದಮಯ ವಿಶ್ವವಿಲ್ಲದೆ. ಆದರೂ ನಮಗದು ಕಾಣದು. ನಾವು ಯಾವಾಗಲೂ ಅದರಲ್ಲೇ ಇರುವೆವು. ಆದರೂ ನಾವು ಅದನ್ನು ಮರೆಯುವೆವು. ಧರ್ಮ ನಮಗೆ ಇದನ್ನು ಹುಡುಕಿಕೊಡುವುದು".

ಸ್ವಾಮಿ
ವಿವೇಕಾನಂದ
ವಿಚಾರಧಾರೆ




UNIVERSAL RELIGION
SWAMI VIVEKANANDA
THOUGHTS

"We are dying of thirst sitting on the banks of the mightiest river. We are dying of hunger, sitting near heaps of food. Here is the blissful universe, yet we do not find it. We are in it all the time, and we are always mistaking it. Religion proposes to find this out for us."



























**Socio Spiritual Educational Films**

Bangalore - 560018 — Cell: 9341219116





# ಹೊಸ ವರ್ಷದ ಹಾರ್ದಿಕ ಶುಭಾಶಯಗಳು



ನಿಮಗೆ ಇಚ್ಛೆ ಬಂದ ರೀತಿಯಲ್ಲಿ ಭಗವಂತನನ್ನು ಪ್ರಾರ್ಥಿಸಿ. ನಿಮ್ಮ ಪ್ರಾರ್ಥನೆಯನ್ನು ಅವನು ಯಾವಾಗಲೂ ಕೇಳುವುದರಲ್ಲಿ ಸಂದೇಹವಿಲ್ಲ. ಅವನು ಒಂದು ಇರುವೆಯ ಕಾಲಿನ ಸಪ್ಪಳವನ್ನೂ ಕೂಡ ಕೇಳಬಲ್ಲ. – ಶ್ರೀರಾಮಕೃಷ್ಣ



ಕಾಲಕ್ರಮದಲ್ಲಿ ಮನಸ್ಸೇ ಗುರುವಾಗುವುದು. ಮನಸ್ಸಿಲ್ಲದೆ ದೀರ್ಘಕಾಲ ಪ್ರಾರ್ಥಿಸುವುದಕ್ಕಿಂತ, ಪೂರ್ಣ ಏಕಾಗ್ರತೆಯಿಂದ ಎರಡು ನಿಮಿಷವಾದರೂ ಭಗವಂತನನ್ನು ಪ್ರಾರ್ಥಿಸುವುದು ಎಷ್ಟೋ ಉತ್ತಮ. – ಶ್ರೀಶಾರದಾದೇವಿ



ಈ ನರಕಸದೃಶ ಪ್ರಪಂಚದಲ್ಲಿ ಒಬ್ಬ ವ್ಯಕ್ತಿಯ ಹೃದಯದಲ್ಲಿ ಒಂದು ದಿನದ ಮಟ್ಟಿಗಾದರೂ ಸಂತೋಷ ಮತ್ತು ನೆಮ್ಮದಿಯನ್ನು ತರಲು ಸಾಧ್ಯವಾದರೆ ಅದೊಂದೇ ಸತ್ಯ. ಮಿಕ್ಕಿರುವುದೆಲ್ಲ ಬರೀ ಥಳುಕಿನ ಭ್ರಾಂತಿ. – ಸ್ವಾಮಿ ವಿವೇಕಾನಂದ






Managing Editor : Swami Muktidananda Editor : Swami Jnanayogananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

"ಸರ್ವೇ ಜನಾಃ ಸುಖಿನೋ ಭವಂತು"



# ರಾಮಪ್ರಸಾದ ಮತ್ತು ಕಂಪೆನಿ

**ವಕೀಲರು, ಲೆಕ್ಕ ಪರಿಶೋಧಕರು ಮತ್ತು ತೆರಿಗೆ ಸಲಹೆಗಾರರು**

ಮುಖ್ಯ ಕಚೇರಿ, ಎಸ್.ಆರ್. ಕಾಂಪ್ಲೆಕ್ಸ್,
ಮೊದಲನೆ ಮಹಡಿ, ವಿ.ವಿ. ರಸ್ತೆ, **ಮಂಡ್ಯ – 571401**

## ರಾ. ಅಭಿಷೇಕ್

ಶಾಖೆ: ನಂ. 286, 13ನೇ ಮುಖ್ಯರಸ್ತೆ,
2ನೇ ಅಡ್ಡರಸ್ತೆ, ಸರಸ್ವತಿಪುರಂ, **ಮೈಸೂರು – 570 009**

**ಸಂಪರ್ಕಿಸಿ:**

**ಆರ್. ರಾಮಪ್ರಸಾದ್** ಬಿ.ಕಾಂ., ಎಲ್‌ಎಲ್‌ಬಿ

**9448042376**

**ಆರ್. ಅಭಿಷೇಕ್** ಎಂ.ಕಾಂ., ಸಿ.ಎ. (ಇಂಟರ್)

**9686164770**

